# ಕನ್ನಡದಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು:
## ಸಾಂಸ್ಕೃತಿಕ ನಿರ್ವಚನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕ
ಆಯ್.ಎನ್.ಹುರಳಿ

ಮಾರ್ಗದರ್ಶಕರು
ಡಾ. ವ್ಹಿ.ಎಸ್.ಬಡಿಗೇರ
ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೦

# ಕನ್ನಡದಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು; ಸಾಂಸ್ಕೃತಿಕ ನಿರ್ವಚನ

(ಕನ್ನಡ ವಿಶ್ವವಿದ್ಯಾಲಯ,ಹಂಪಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕ
ಆಯ್.ಎನ್.ಹುರಳಿ

ಮಾರ್ಗದರ್ಶಕರು
ಡಾ.ವ್ಹಿ.ಎಸ್.ಬಡಿಗೇರ
ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

೨೦೧೦

# ದೃಢೀಕರಣ ಪತ್ರ

ಕನ್ನಡದಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು; ಸಾಂಸ್ಕೃತಿಕ ನಿರ್ವಚನ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಹೆಚ್.ಡಿ. ಪದವಿಗಾಗಿ ಈರಣ್ಣ ಎನ್.ಹುರಳಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.


ಡಾ.ವ್ಹಿ.ಎಸ್.ಬಡಿಗೇರ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬


ಸ್ಥಳ : ವಿದ್ಯಾರಣ್ಯ
ದಿನಾಂಕ : ೧೮-೫-೨೦೧೦

# ಪ್ರಮಾಣ ಪತ್ರ

ಕನ್ನಡದಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು; ಸಾಂಸ್ಕೃತಿಕ ನಿರ್ವಚನ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಹೆಚ್.ಡಿ ಪದವಿಗಾಗಿ ಡಾ.ವ್ಹಿ.ಎಸ್.ಬಡಿಗೇರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಸಹಿ)
ಈರಣ್ಣ ಎನ್. ಹುರಳಿ
ಸಂಶೋಧಕ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಸ್ಥಳ : ವಿದ್ಯಾರಣ್ಯ

ದಿನಾಂಕ : 19-05-2010

# ಮೊದಲು ಶರಣೆಂಬೆನು

ನಾನು ಅನಕ್ಷರ ಲೋಕದಿಂದ ಅಕ್ಷರ ಲೋಕಕ್ಕೆ ಮುನ್ನೆಡೆಯಲು ಸಹಕಾರಿಯಾದ ಪ್ರಮುಖ ಸ್ಥಳಗಳು ಎರಡು. ಒಂದು ಶ್ರೀ ಗವಿಸಿದ್ದೇಶ್ವರ ಮಠ ಮತ್ತೊಂದು ಪಂ.ಪಂಚಾಕ್ಷರಿ ಗವಾಯಿಗಳವರ ಮಠ. ಈ ಎರಡು ಮಠಗಳು ಪ್ರಾಥಮಿಕ ಶಿಕ್ಷಣದಿಂದ ಪದವಿ ಶಿಕ್ಷಣದವರೆಗೂ ಉಚಿತ ಊಟ, ವಸತಿ ನೀಡಿ ಪೋಷಿಸಿವೆ. ಈ ಎರಡು ಮಠಗಳ ಕರ್ತೃ ಗದ್ದುಗೆಗೆ ಮತ್ತು ಸ್ವಾಮೀಜಿಗಳಿಗೆ ಶರಣು ಶರಣಾರ್ಥಿ.

ವಿಶ್ವವಿದ್ಯಾಲಯದಲ್ಲಿ ನನಗೆ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಡಾ.ಕೆ.ವಿ.ನಾರಾಯಣ, ಆನಂತರ ಕುಲಪತಿಗಳಾಗಿ ಬಂದು ವಿದ್ಯಾರ್ಥಿಗಳ ಯಶಸ್ವಿಗೆ ಬೆನ್ನೆಲುಬಾಗಿ ನಿಂತು ಪ್ರೀತಿಯಿಂದ ಕಂಡು ಅನೇಕ ಅವಕಾಶಗಳನ್ನು ಒದಗಿಸಿಕೊಟ್ಟ ಡಾ.ಬಿ.ಎ.ವಿವೇಕ ರೈ ಮತ್ತು ಇಂದಿನ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಅವರಿಗೆ, ಹಾಗೂ ಕುಲಸಚಿವರಾದ ಡಾ.ಮಂಜುನಾಥ ಬೇವಿನಕಟ್ಟಿ, ಅಧ್ಯಯನಾಂಗದ ನಿರ್ದೇಶಕರಾದ ಡಾ.ವ್ಹಿ.ಎಸ್.ಬಡಿಗೇರ ಅವರುಗಳಿಗೆ,

ನಾನು ದೀನನಾಗಿ ಹುಟ್ಟಿದರೂ ನನ್ನ ಮನಸ್ಸು ದೀನತೆಯಲ್ಲ. 'ಖ್ಯಾತಿಯ ಆಶೆಯಿಲ್ಲದೆ ದೀನನಾಗಿ, ಶ್ರದ್ಧೆಯಿಂದ ಓದು ಆಗಲೇ ಅದರಿಂದ ಲಾಭ' ಎಂಬ ಅನುಭವಿಕರ ನುಡಿಯಂತೆ ಇದಕ್ಕೆ ಪೂರಕವಾಗಿ ಇಂಥ ಉನ್ನತ ಪದವಿಯನ್ನು ಅಧ್ಯಯನ ಮಾಡಲು ಆರ್ಥಿಕ ಬಲವಿಲ್ಲದ ನನ್ನಂಥವನಿಗೆ ಎಂ.ಆರ್.ಸಿ ಯೋಜನೆಯಲ್ಲಿ ಕ್ಷೇತ್ರ ಸಹಾಯಕನನ್ನಾಗಿ ನೇಮಿಸಿಕೊಂಡು ಪೋಷಕ ಸ್ಥಾನವನ್ನು ಅಲಂಕರಿಸಿ ನನ್ನ ಗುರಿ ಸಾಧನೆಗೆ ಇಂಬನ್ನು ನೀಡಿ, ಯಾವುದೇ ವಿಷಯವನ್ನು ವಿವಿಧ ಆಯಾಮಗಳಿಂದ ಅರ್ಥೈಸುವ, ವಿಶ್ಲೇಷಿಸುವ, ವಿವರಿಸುವ ದಾರಿ ತೋರಿ ಆಶೀರ್ವದಿಸಿದವರು ನನ್ನ ವಿದ್ಯಾಗುರುಗಳು ಹಾಗೂ ಮಾರ್ಗದರ್ಶಕರಾದ ಪ್ರೊ.ವ್ಹಿ.ಎಸ್.ಬಡಿಗೇರ ಅವರಿಗೆ ಹಾಗೂ ಅವರ ಕುಟುಂಬದವರಿಗೆ,

ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಆರ್.ಚನ್ನವೀರಪ್ಪ, ಪ್ರಾಧ್ಯಾಪಕರಾದ ಡಾ.ಎಫ್.ಟಿ.ಹಳ್ಳಿಕೇರಿ, ಡಾ.ಎಸ್.ಎಸ್.ಅಂಗಡಿ, ಡಾ.ಕೆ.ರವೀಂದ್ರನಾಥ ಅವರಿಗೆ ಮತ್ತು ವಿಭಾಗದ ಆಡಳಿತ ಸಿಬ್ಬಂದಿ ವರ್ಗದವರಿಗೆ, ಅನಿಕೇತನ ವಿದ್ಯಾರ್ಥಿ ನಿಲಯದ ಪಾಲಕರಾದ ಡಾ.ಡಿ.ವಿ.ಪರಮಶಿವಮೂರ್ತಿ ಅವರಿಗೆ,

ಅಧ್ಯಯನ ಸಂದರ್ಭದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಕನ್ನಡ ಅಧ್ಯಯನ ಕೇಂದ್ರ ಬೆಂಗಳೂರು, ರಾಷ್ಟ್ರೀಯ ಪ್ರಾಕೃತ ಅಧ್ಯಯನ ಕೇಂದ್ರ ಶ್ರವಣ ಬೆಳಗೊಳ, ಕನ್ನಡ ಅಧ್ಯಯನ ಪೀಠ ಧಾರವಾಡ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಕನ್ನಡ ಅಧ್ಯಯನ ಸಂಸ್ಥೆ ಗುಲಬರ್ಗಾ ಇತ್ಯಾದಿ ವಿಭಾಗಗಳ ಹಸ್ತಪ್ರತಿ ಭಂಡಾರಗಳಲ್ಲಿ ಹಸ್ತಪ್ರತಿ ಒದಗಿಸಿಕೊಟ್ಟ ನಿರ್ದೇಶಕರಿಗೆ ಮತ್ತು ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು ಮತ್ತು ಕನ್ನಡ ವಿಶ್ವವಿದ್ಯಾಲಯ, ಹಂಪಿ ಗ್ರಂಥಾಲಯಗಳಲ್ಲಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಗ್ರಂಥಾಲಯಗಳ ಸಿಬ್ಬಂದಿವರ್ಗದವರಿಗೆ,

ನನ್ನೆಲ್ಲ ಕನಸುಗಳಿಗೆ ನೀರುಣಿಸಿ ಸದಾ ಬೆನ್ನೆಲುಬಾಗಿ ನಿಂತಿರುವ ತಾಯಿ, ತಮ್ಮ ಮತ್ತು ಅಕ್ಕಂದಿರುಗಳಿಗೆ, ಹಾಗೆಯೇ ಅಧ್ಯಯನ ಸಂದರ್ಭದಲ್ಲಿ ಚರ್ಚೆಯ ಮೂಲಕ ಅನೇಕ ಮಾಹಿತಿಯನ್ನು ನೀಡಿ ಪ್ರೋತ್ಸಾಹಿಸಿದ ವಿದ್ವಾಂಸರುಗಳಾದ ಡಾ.ವೈ.ಸಿ.ಭಾನುಮತಿ, ಶ್ರೀ.ಬಿ.ಎಸ್.ಸಣ್ಣಯ್ಯ, ಡಾ.ಡಿ.ಮೀನಾಕ್ಷಿ, ಡಾ.ಹೇಮಾಮಾಲಿನಿ, ಶ್ರೀ.ಬಿ.ಜಿ.ಹಿರೇಮಠ, ಡಾ॥ ಜಿ.ಆರ್.ವಸ್ತ್ರದ ಅವರುಗಳಿಗೆ,

ಮಹಾಪ್ರಬಂಧ ರಚನೆಗೆ ನನ್ನನ್ನು ಬೌದ್ಧಿಕವಾಗಿ ತಯಾರು ಮಾಡಿದ ಪ್ರಾಥಮಿಕ ಶಿಕ್ಷಣದಿಂದ ಇಲ್ಲಿಯವರೆಗೂ ಕಲಿಸಿದ ಎಲ್ಲಾ ಗುರುಗಳಿಗೆ, ಸಹಕಾರ ಮತ್ತು ಪ್ರೀತಿಯಿಂದ ಪ್ರೋತ್ಸಾಹಿಸಿದ ಸ್ನೇಹಿತರುಗಳಾದ ಡಾ.ನಿರಂಜನ, ಡಾ.ಗವಿಸಿದ್ದಪ್ಪ, ಡಾ.ಕಲ್ಲಯ್ಯ, ಡಾ.ಕುಮಾರ, ಡಾ.ಸುದೀಪ್, ಡಾ.ವಾಗೀಶ್, ಡಾ.ಗಾದೆಪ್ಪ, ಡಾ.ಕೆ.ಆರ್.ಕೇಶವಮೂರ್ತಿ, ಡಾ.ಅರುಣ್, ಎಂ.ಗೋವಿಂದ, ಮುತ್ತಣ್ಣ, ನಾಗರಾಜ, ಉಮೇಶ, ಯತೀಶ ಮತ್ತು ಅನಿಕೇತನ ವಿದ್ಯಾರ್ಥಿ ನಿಲಯದ ಎಲ್ಲಾ ಸ್ನೇಹಿತರುಗಳಿಗೆ ಹಾಗೂ ನನ್ನ ಎಲ್ಲಾ ಇತರ ಸ್ನೇಹಿತರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರೋತ್ಸಾಹಿಸಿದ್ದಾರೆ ಅವರೆಲ್ಲರುಗಳಿಗೆ,

ವಿಶೇಷವಾಗಿ ಸಕಾಲಕ್ಕೆ ನನ್ನ ಮಹಾಪ್ರಬಂಧದ ಅಕ್ಷರ ಜೋಡಣೆಯನ್ನು ಅಂದವಾಗಿ ಮಾಡಿಕೊಟ್ಟ ಕುಮಾರ ಬಡಿಗೇರ ಮತ್ತು ಸಹಾಯ ಮಾಡಿದ ರವಿ ಅವರಿಗೆ,

ಹೃನ್ಮನಗಳನ್ನು ಅರ್ಪಿಸುತ್ತೇನೆ.

**ಬದುಕು ಬದುಕಲು ಬಿಡು**

**ಈರಾಜ ಹುರಳಿ**

ಸಂಶೋಧಕ

ನನ್ನೆಲ್ಲ ಕನಸುಗಳಿಗೆ ನೀರುಣಿಸಿ ಸದಾ ಬೆನ್ನೆಲುಬಾಗಿ ನಿಂತಿರುವ ತಾಯಿ, ತಮ್ಮ ಮತ್ತು ಅಕ್ಕಂದಿರುಗಳಿಗೆ, ಹಾಗೆಯೇ ಅಧ್ಯಯನ ಸಂದರ್ಭದಲ್ಲಿ ಚರ್ಚೆಯ ಮೂಲಕ ಅನೇಕ ಮಾಹಿತಿಯನ್ನು ನೀಡಿ ಪ್ರೋತ್ಸಾಹಿಸಿದ ವಿದ್ವಾಂಸರುಗಳಾದ ಡಾ.ವೈ.ಸಿ.ಭಾನುಮತಿ, ಶ್ರೀ.ಬಿ.ಎಸ್.ಸಣ್ಣಯ್ಯ, ಡಾ.ಡಿ.ಮೀನಾಕ್ಷಿ, ಡಾ.ಹೇಮಾಮಾಲಿನಿ, ಶ್ರೀ.ಬಿ.ಜಿ.ಹಿರೇಮಠ, ಡಾ॥ ಜಿ.ಆರ್.ವಸ್ತ್ರದ ಅವರುಗಳಿಗೆ,

ಮಹಾಪ್ರಬಂಧ ರಚನೆಗೆ ನನ್ನನ್ನು ಬೌದ್ಧಿಕವಾಗಿ ತಯಾರು ಮಾಡಿದ ಪ್ರಾಥಮಿಕ ಶಿಕ್ಷಣದಿಂದ ಇಲ್ಲಿಯವರೆಗೂ ಕಲಿಸಿದ ಎಲ್ಲಾ ಗುರುಗಳಿಗೆ, ಸಹಕಾರ ಮತ್ತು ಪ್ರೀತಿಯಿಂದ ಪ್ರೋತ್ಸಾಹಿಸಿದ ಸ್ನೇಹಿತರುಗಳಾದ ಡಾ.ನಿರಂಜನ, ಡಾ.ಗವಿಸಿದ್ದಪ್ಪ, ಡಾ.ಕಲ್ಲಯ್ಯ, ಡಾ.ಕುಮಾರ, ಡಾ.ಸುದೀಪ್, ಡಾ.ವಾಗೀಶ್, ಡಾ.ಗಾದೆಪ್ಪ, ಡಾ.ಕೆ.ಆರ್.ಕೇಶವಮೂರ್ತಿ, ಡಾ.ಅರುಣ್, ಎಂ.ಗೋವಿಂದ, ಮುತ್ತಣ್ಣ, ನಾಗರಾಜ, ಉಮೇಶ, ಯತೀಶ ಮತ್ತು ಅನಿಕೇತನ ವಿದ್ಯಾರ್ಥಿ ನಿಲಯದ ಎಲ್ಲಾ ಸ್ನೇಹಿತರುಗಳಿಗೆ ಹಾಗೂ ನನ್ನ ಎಲ್ಲಾ ಇತರ ಸ್ನೇಹಿತರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರೋತ್ಸಾಹಿಸಿದ್ದಾರೆ ಅವರೆಲ್ಲರುಗಳಿಗೆ,

ವಿಶೇಷವಾಗಿ ಸಕಾಲಕ್ಕೆ ನನ್ನ ಮಹಾಪ್ರಬಂಧದ ಅಕ್ಷರ ಜೋಡಣೆಯನ್ನು ಅಂದವಾಗಿ ಮಾಡಿಕೊಟ್ಟ ಕುಮಾರ ಬಡಿಗೇರ ಮತ್ತು ಸಹಾಯ ಮಾಡಿದ ರವಿ ಅವರಿಗೆ,

ಹೃನ್ಮನಗಳನ್ನು ಅರ್ಪಿಸುತ್ತೇನೆ.

**ಬದುಕು ಬದುಕಲು ಬಿಡು**

**ಈರಾಜ ಹುರಳಿ**

ಸಂಶೋಧಕ

## ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೨. ಅಧ್ಯಯನದ ಮಹತ್ವ ಮತ್ತು ವಿಧಾನ

೧.೩. ಅಧ್ಯಯನದ ಸ್ವರೂಪ

೧.೪. ಸಂಬಂಧಿತ ಅಧ್ಯಯನ ಅವಲೋಕನ

# ೧

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಒಂದು ಭಾಷೆಯಲ್ಲಿನ ಗ್ರಂಥಗಳ ಸಮೂಹವನ್ನು ಸಾಹಿತ್ಯ ಎಂದು ಕರೆಯುತ್ತೇವೆ. ಇದನ್ನು ಶುದ್ಧ ಸಾಹಿತ್ಯ ಮತ್ತು ಶಾಸ್ತ್ರ ಸಾಹಿತ್ಯ ಎಂದು ಎರಡು ಭಾಗಗಳನ್ನಾಗಿ ವಿಭಾಗಿಸಬಹುದು. ಪ್ರಾಚೀನ ಕನ್ನಡ ಸಾಹಿತ್ಯದ ಹೆಜ್ಜೆಯ ಗುರುತುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ನಮಗೆ ಹೆಚ್ಚು ಸಮೃದ್ಧಿ ಕಂಡುಬರುವುದು ಶುದ್ಧ ಸಾಹಿತ್ಯದಲ್ಲಿಯೇ. ಶುದ್ಧ ಸಾಹಿತ್ಯ ಹೃದಯ ಸಂಬಂಧಿಯಾದರೆ ಶಾಸ್ತ್ರ ಸಾಹಿತ್ಯ ಬುದ್ಧಿಗಮ್ಯವಾದದ್ದು; ಒಂದು ಕಲೆ, ಇನ್ನೊಂದು ವಿಜ್ಞಾನ. ಆನಂದಾನುಭೂತಿಯೇ ಶುದ್ಧ ಸಾಹಿತ್ಯದ ಗುರಿ, ಜ್ಞಾನ ಪ್ರಸಾರವೇ ಶಾಸ್ತ್ರ ಸಾಹಿತ್ಯದ ಉದ್ದೇಶ. ಬುದ್ಧಿಗಮ್ಯ, ವಿಜ್ಞಾನ, ಜ್ಞಾನ ಪ್ರಸಾರ ಮತ್ತು ಲೋಕೋಪಕಾರದ ಉದ್ದೇಶ ಹೊಂದಿದ ಶಾಸ್ತ್ರ ಸಾಹಿತ್ಯವು ಶುದ್ಧ ಸಾಹಿತ್ಯದಷ್ಟು ನಮ್ಮಲ್ಲಿ ಬೆಳೆದಿಲ್ಲವೆಂದೇ ಹೇಳಬೇಕು. ಕಾರಣ ಶುದ್ಧ ಸಾಹಿತ್ಯವು ಕವಿಯ ಆಲೋಚನಾ ಲಹರಿ, ಸೂಕ್ಷ್ಮ ಗ್ರಹಿಕೆ, ವಿಶೇಷಾನುಭವ ಕೌಶಲ್ಯದಿಂದ ಸೃಷ್ಟಿಯಾಗುವಂತಹದ್ದು: ಆದರೆ ಶಾಸ್ತ್ರ ಸಾಹಿತ್ಯ ಬುದ್ಧಿ ವಿಹಾರಿಯಾಗಿ, ವಸ್ತುಲೋಕ ಸಂಚಾರಿಯಾಗಿ ಖಚಿತವಾದದ್ದು. ಇಲ್ಲಿ ವಾಸ್ತವ ಬದುಕಿಗೆ ಮತ್ತು ಅನುಭವಕ್ಕೆ ಮನ್ನಣೆಯೇ ಹೊರತು ಊಹೆ ಕಲ್ಪನೆಗಳಿಗಲ್ಲ. ಇಂಥ ಶಾಸ್ತ್ರ ಸಾಹಿತ್ಯದಲ್ಲಿ ತಮ್ಮದೇ ಆದ ಅನುಭವ, ಆದರ್ಶ ಚಿಂತನೆಗಳ ಮೂಲಕ ವಿಭಿನ್ನ ಜ್ಞಾನ ಶಾಖೆಗಳನ್ನು ಸೃಷ್ಟಿಸಿಕೊಂಡಿದ್ದ ಪ್ರಾಚೀನರು ಆರೋಗ್ಯಪೂರ್ಣ ಸಮಾಜಕ್ಕೆ ಪೋಷಣೆ ನೀಡಬಲ್ಲಂತಹ ಶಾಸ್ತ್ರ ಸಮ್ಮತವಾದ ಹಾಗೂ ಸೂತ್ರಬದ್ಧವಾದ ಕೃತಿಗಳನ್ನು ರಚಿಸುವತ್ತ ಗಮನಹರಿಸಿದ್ದುಂಟು. ನಂತರ ತಮ್ಮ ಅನುಕೂಲಕ್ಕಾಗಿ ಶಾಸ್ತ್ರಗಳನ್ನು ವಿಭಾಗಿಸಿಕೊಂಡು ಲೌಕಿಕ ಮತ್ತು ಆಗಮಿಕ ಎಂಬೆರಡು ರೀತಿಯಲ್ಲಿ ಪರಂಪರಾನುಗತವಾಗಿ ಕೃತಿಗಳನ್ನು ರಚಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಲೌಕಿಕಶಾಸ್ತ್ರ ಸಾಹಿತ್ಯದಲ್ಲಿ ರಟ್ಟಮತಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಪ್ರಶ್ನೆಶಾಸ್ತ್ರ, ಖಡ್ಗಶಾಸ್ತ್ರ, ಕಾಮಶಾಸ್ತ್ರ, ಗಜಶಾಸ್ತ್ರ, ಸೂಪಶಾಸ್ತ್ರ, ಅಶ್ವಶಾಸ್ತ್ರ ಹಾಗೂ ವೈದ್ಯಶಾಸ್ತ್ರ ಇತ್ಯಾದಿ. ಹೀಗೆ ಅನೇಕ ಶಾಸ್ತ್ರ ಕೃತಿಗಳು ರಚನೆಗೊಂಡವು. ಅಂಥವುಗಳ ಸಾಲಿನಲ್ಲಿ ಮನುಷ್ಯನ ಬದುಕಿಗೆ ಅವಶ್ಯವಾದ ಪ್ರಮುಖ ಶಾಸ್ತ್ರ ವೈದ್ಯಶಾಸ್ತ್ರ. ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಪ್ರಮುಖ ಆಕರಗಳು ಹಸ್ತಪ್ರತಿಗಳು.

ಕಾವ್ಯ ಪ್ರಯೋಗ ಪರಿಣತಮತಿಗಳಾಗಿದ್ದ ಕನ್ನಡಿಗರ ಬಳಿ ತಾಳೇಗರಿ ಕೋರಿಕಾಗದದಂತಹ ಹಸ್ತಪ್ರತಿಗಳು ನಾಡಿನಾದ್ಯಂತ ಅನೇಕ ಶತಮಾನಗಳವರೆಗೆ ಪ್ರಯೋಗದ ಮೂಲ ಆಕರ ಸಾಮಗ್ರಿಗಳಾಗಿದ್ದವು. "ಕಾಲಕ್ರಮದಲ್ಲಿ ಕಾಲ, ದೇಶ, ಪರಿಸರಗಳ ಪ್ರಭಾವದಿಂದ ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವುಗಳು ಮೂಲೆಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗ ತೊಡಗಿದವು"[೧]. ಅವುಗಳು ಶಿಥಿಲವಾಗತೊಡಗಿದಾಗ ಸಂರಕ್ಷಿಸಲಾರದೆ ಕೆಲವು ನದಿಯ ಪಾಲೋ, ಬೆಂಕಿಯ ಪಾಲೋ ಆಗಿ ಹೋಗಿವೆ. ಕೆಲವು ಪ್ರದೇಶಗಳಲ್ಲಿ ಹಬ್ಬಗಳಲ್ಲಿ, ಜಾತ್ರೆಗಳಲ್ಲಿ ಮಾತ್ರ ಬೆಳಕು ಕಂಡು ಪೂಜೆಗೊಂಡು ಮತ್ತೆ ಜಗಲಿಗೊ, ಜಂತಿಗೊ, ಪೆಟಾರಿಗೊ ಸೇರಿ ಹಲವಾರು ಅಮೂಲ್ಯ ಹಸ್ತಪ್ರತಿಗಳು ತೃಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರಮಾಡಿ ಜನರ ಮನವೊಲಿಸಿ ಇಡೀ ಕನ್ನಡ ನಾಡಿನಲ್ಲಿರುವ ಕನ್ನಡ ಮತ್ತು ಇತರ ಭಾಷೆಯ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂರಕ್ಷಿಸುವ ಕಾರ್ಯದಲ್ಲಿ ಹಲವು ವಿಶ್ವವಿದ್ಯಾಲಯಗಳು ಮತ್ತು ಖಾಸಗಿ ಸಂಸ್ಥೆಗಳು ಕಾರ್ಯನಿರತವಾಗಿವೆ. ಅವುಗಳಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು ಹಲವಿವೆ. ಅವುಗಳನ್ನು ಅಧ್ಯಯನಕ್ಕೊಳಪಡಿಸುವುದು ಇಲ್ಲಿನ ಅಗತ್ಯವಾಗಿದೆ.

### ೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡದಲ್ಲಿ ಲಭ್ಯವಿದ್ದ ಎಲ್ಲಾ ಬಗೆಯ ಹಸ್ತಪ್ರತಿಗಳು ಮನುಷ್ಯನ ಮೂರ್ತ ಬದುಕಿನ ಉನ್ನತಿಗಾಗಿಯೇ ಹಂಬಲಿಸಿದಂಥವು. ವೈವಿಧ್ಯಮಯ ಸಾಂಸ್ಕೃತಿಕ ಸಂಪತ್ತನ್ನು ತಮ್ಮ ಗರ್ಭದಲ್ಲಿ ಹುದುಗಿಸಿಕೊಂಡಿರುವ ಹಸ್ತಪ್ರತಿಗಳ ವಿವಿಧ ಮಗ್ಗಲುಗಳನ್ನು ಅಧ್ಯಯನ ಮಾಡುವುದು ತೀರ ಅತ್ಯವಶ್ಯಕ.

ಮಾನವ ಅಭಿವೃದ್ಧಿಯ ವಿಚಾರ ಪ್ರಣಾಳಿಕೆಯಲ್ಲಿ ಆರೋಗ್ಯ ಮೊದಲ ಸ್ಥಾನವನ್ನು ಪಡೆದಿದೆ. ಪ್ರತಿಯೊಂದು ಜೀವಿಯೂ ತನ್ನ ದೇಹವನ್ನು ಸಂರಕ್ಷಿಸಿಕೊಳ್ಳಲು ಶ್ರಮಿಸುತ್ತದೆ. ಜೀವಿಯೊಂದು ತನ್ನ ದೇಹವನ್ನು ರಕ್ಷಿಸುವ ಹಾದಿಯಲ್ಲಿ ಹಲವು ರೋಗರುಜಿನಗಳನ್ನು ಎದುರಿಸುತ್ತದೆ. "ಸ್ವಸ್ಥ ದೇಹದಲ್ಲಿ ಸ್ವಸ್ಥ ಮನಸ್ಸು", "ಆರೋಗ್ಯವೇ ಸ್ವರ್ಗ ಅನಾರೋಗ್ಯವೇ ನರಕ" ಎಂಬ ಗಾದೆ ಮಾತಿನಂತೆ ಶರೀರ ಸಂಪತ್ತು ಎಲ್ಲರಿಗೂ ಪ್ರಿಯವಾದದ್ದು. ಮನಸ್ಸು ಸುಪ್ರಸನ್ನವಾಗಬೇಕಾದರೆ ದೇಹಾರೋಗ್ಯ ಮುಖ್ಯ. ಅದಕ್ಕೆ ಕಾರಣೀಭೂತವಾದ ಜನಪದರ ನಡುವೆ ಇದ್ದ ವೈದ್ಯಕೀಯ ಸಂಗತಿಗಳನ್ನು ಹೆಚ್ಚು ಪ್ರಚುರಪಡಿಸಿದವರು, ಅದಕ್ಕೊಂದು ಶಾಸ್ತ್ರರೂಪವನ್ನು ಕಲ್ಪಿಸಿದವರು ಋಷಿಮುನಿಗಳು. ಅಂಥವರಿಂದ ಬರೆಯಲ್ಪಟ್ಟ ದೇಶಿ ವೈದ್ಯಕೀಯ ವಿಷಯವನ್ನು ಪ್ರಾಚೀನ ಕಾಲದಿಂದಲೂ ತಮ್ಮ ಹೃದಯದಲ್ಲಿ ಗರ್ಭೀಕರಿಸಿಕೊಂಡು ಬಂದಿರುವ ಕನ್ನಡ ಹಸ್ತಪ್ರತಿಗಳು ಪ್ರಮುಖವಾದವುಗಳು. ಇವುಗಳಲ್ಲಿ ಮನುಷ್ಯ ಬದುಕಿಗೆ ಪ್ರಧಾನವಾದ ಆಯುರಾರೋಗ್ಯಭಾಗ್ಯ, ಪುತ್ರಸಂತಾನಪ್ರಾಪ್ತಿ, ಜೀವನಸುಖ, ರೋಗರುಜಿನಗಳ ನಿವಾರಣೆಗೆ ಉಪಯೋಗವಾಗುವ ವಿಷಯಗಳು ನಿಹಿತವಾಗಿರುತ್ತವೆ. ಈ ವೈದ್ಯಶಾಸ್ತ್ರ ಹಸ್ತಪ್ರತಿಗಳನ್ನು ಸಾಮಾಜಿಕ ಪರಿಸರ, ಆಶಯ, ಅಭಿವ್ಯಕ್ತಿಗೆ ತಕ್ಕಂತೆ ಹೊಸ ಹೊಸ ವಿಷಯ ಹಾಗೂ ಅನುಭವಗಳಿಗೆ ರೂಪ ಕೊಡುತ್ತ ಮತ್ತು ಹಾಗೆ ಸೃಷ್ಟಿಯಾದ ವಿಷಯಗಳಿಗೆ ಹೊಸ ಹೊಸ ರೂಪಗಳನ್ನು ಸಿದ್ಧಿಸುತ್ತಾ ಹೋಗಿದ್ದಾರೆ. ಈ ಬಗೆಯ ಸಾಂಪ್ರದಾಯಿಕ ಮನೋಧರ್ಮ ಹಾಗೂ ಪ್ರಯೋಗ ರೂಪದ ಮನಸ್ಸೆ ಕನ್ನಡದಲ್ಲಿ ಅಸಂಖ್ಯಾತ ಸ್ವರೂಪ ಹಾಗೂ ಅನಂತ ವಿಷಯಗಳನ್ನೊಳಗೊಂಡ ವೈದ್ಯಶಾಸ್ತ್ರ ಹಸ್ತಪ್ರತಿಗಳು ಹುಟ್ಟಿಕೊಳ್ಳುವುದಕ್ಕೆ

ಸಾಧ್ಯವಾಯಿತು. ಹೀಗಾಗಿ ಅವರದು ಪ್ರಧಾನವಾಗಿ ಸೃಷ್ಟಿಕಾರ್ಯವಾದರೆ ನಮ್ಮದು ಅದಕ್ಕೆ ಪರ್ಯಾಯವಾಗಿ ಹುಟ್ಟಿಕೊಂಡ ಶೋಧನ ಮತ್ತು ತಾತ್ವಿಕ, ಸಾಂಸ್ಕೃತಿಕ ವಿಶ್ಲೇಷಣೆಯ ಕಾರ್ಯ.

ಕನ್ನಡ ವೈದ್ಯಶಾಸ್ತ್ರವು ಸಮುದ್ರದ ಆಳ ವಿಸ್ತಾರಗಳಂತೆ ಗಂಭೀರವಾಗಿದೆ, ಮತ್ತು ವ್ಯಾಪಕವಾಗಿದೆ; ಇದನ್ನು ತಿಳಿಯಬೇಕಾದರೆ ಪ್ರತ್ಯಕ್ಷ ದರ್ಶನ ಅವಶ್ಯ. ಈ ಪ್ರತ್ಯಕ್ಷ ದರ್ಶನದ ಮೂಲ ನೆಲೆಗಳು ಹಸ್ತಪ್ರತಿಗಳು. ಇವು ಭಾರತೀಯ ಆಯುರ್ವೇದ ಶಾಸ್ತ್ರದ ಮೂಲ ಸಿದ್ಧಾಂತ, ದ್ರವ್ಯಗಳ ರಸ, ವೀರ್ಯ, ವಿಪಾಕ, ಉಪಯುಕ್ತ ಮನೆಮದ್ದುಗಳು, ದ್ರವ್ಯಗುಣ, ಔಷಧಿ ತಯಾರಿಕೆ ಆಗೂ ರೋಗ ಕಾರಣಗಳು, ರೋಗ ಲಕ್ಷಣ, ರೋಗ ಪರೀಕ್ಷೆ, ಔಷಧೋಪಚಾರ, ಪಥ್ಯಕ್ರಮ ಮುಂತಾದ ಚಿಕಿತ್ಸೆಯ ಮೂಲ ಸೂತ್ರಗಳನ್ನು ಒಳಗೊಂಡಿರುತ್ತವೆ. ವೈದ್ಯಶಾಸ್ತ್ರದ ಹಸ್ತಪ್ರತಿಗಳು ಮಾನವನ ಸ್ವಾಸ್ಥ್ಯ ಸಂರಕ್ಷಣೆಯ ಜೊತೆಗೆ ಆಧ್ಯಾತ್ಮಿಕ, ಮಾನಸಿಕ, ಶಾರೀರಿಕ ಹಾಗೂ ಸಾಮಾಜಿಕ ಅಂಶಗಳನ್ನು ಒಳಗೊಂಡಿರುತ್ತವೆ. ಇಂಥ ಹಸ್ತಪ್ರತಿಗಳಲ್ಲಿರುವ ವೈದ್ಯಶಾಸ್ತ್ರವು ಕೇವಲ ಶಾಸ್ತ್ರವಾಗಿ ಉಳಿಯದೇ ಪ್ರಯೋಗಾಚರಣೆಯಲ್ಲಿ ನಡೆದುಬಂದು ಇಂದು ವಿಜ್ಞಾನವು ಆಗಿದೆ. ಸಂಸ್ಕೃತಿಮುಖಿ, ಜನಮುಖಿ, ಸಮಾಜಮುಖಿ ಆಯಾಮ ಪಡೆದಿರುವ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿರುವ ಸಸ್ಯ ಔಷಧದ ಅರಿವು ಹೊಸ ವೈದ್ಯಲೋಕಕ್ಕೆ ಚಾಲನ ಶಕ್ತಿಯಾಗಬೇಕೆನ್ನುವುದು ಮತ್ತು ಪ್ರಾಚೀನ ಕಾಲದ ವೈದ್ಯಕೀಯ ಪದ್ಧತಿ ಹೀಗಿತ್ತು ಎಂದು ಪರಿಚಯಿಸಿ ಅದನ್ನೆ ಹೊಸ ವೈದ್ಯಕೀಯ ಪದ್ಧತಿಯಲ್ಲಿ ಯಾವ ರೀತಿ ಅಭಿವೃದ್ಧಿ ಪಡಿಸಲಾಗಿದೆ ಎಂಬುದನ್ನು ವಿವರಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಹಾಗೂ ಪ್ರಾಚೀನ ಕಾಲದಲ್ಲಿ ಔಷಧಿಗಳು ಮಾನವ ದೇಹದಲ್ಲಿ ನೈಸರ್ಗಿಕ ಪ್ರತಿಬಂಧಕ ಶಕ್ತಿಯನ್ನು ನೀಡುತ್ತಿದ್ದವು. ಈ ದೇಶಿಯ ಜ್ಞಾನ ಆಧುನಿಕ ರಿತ್ಯ ಪೂರ್ಣ ಬೆಳಕು ಕಾಣಬೇಕೆಂಬ ಮೂಲ ಉದ್ದೇಶವೇ ಈ ಶೀರ್ಷಿಕೆಯ ಭೂಮಿಕೆಯಾಗಿದೆ.

ಹೀಗೆ ನಮ್ಮ ಸಮಕಾಲೀನವಲ್ಲದ ಸಾಹಿತ್ಯ ರೂಪ ಹಾಗೂ ವಿಷಯಗಳನ್ನೊಳಗೊಂಡ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳನ್ನು ಅವುಗಳ ವಿಷಯ ವೈವಿಧ್ಯ ಮತ್ತು ಸಂಪತ್ತಿನ ಹಿನ್ನೆಲೆಯಲ್ಲಿ ಆಧುನಿಕ ಅಧ್ಯಯನ ಮಾದರಿಗಳ ಒಡಲಿನಲ್ಲಿಟ್ಟು ಅಧ್ಯಯನಿಸುವ ಕ್ರಮವೊಂದನ್ನು ಪ್ರಸ್ತುತ ಮಹಾಪ್ರಬಂಧ ನಿರ್ವಹಿಸಿದೆ.

ಶಾಸ್ತ್ರ ಸಾಹಿತ್ಯದ ಅಧ್ಯಯನ ಸಹಜವಾಗಿ ಜಟಿಲವಾದದ್ದು. ಅದರಲ್ಲೂ ವೈದ್ಯಶಾಸ್ತ್ರ ಹಸ್ತಪ್ರತಿಗಳ ಅಧ್ಯಯನ ಇನ್ನೂ ಕಠಿಣವಾದದ್ದು. ಯಾಕೆಂದರೆ ಹಸ್ತಪ್ರತಿಗಳ ಮುಂದುವರಿಕೆಯ ಹಂತವಾದ ಗ್ರಂಥಸಂಪಾದನೆ ಹಂತದಲ್ಲಿ ವೈದ್ಯಶಾಸ್ತ್ರ ಹಸ್ತಪ್ರತಿಗಳ ಕುರಿತಾದ ಅಧ್ಯಯನ ಸ್ವಲ್ಪಮಟ್ಟಿಗೆ ನಡೆದಿದ್ದರು ಸಾಂಸ್ಕೃತಿಕ ಹಿನ್ನೆಲೆಯ ಸಮಗ್ರ ಅಧ್ಯಯನ ಕನ್ನಡದಲ್ಲಿ ನಡೆದಿಲ್ಲ. ಈ ಉದ್ದೇಶದಿಂದ ಮತ್ತು ಮೊದಲಿನಿಂದಲೂ ಆಸಕ್ತಿ ಕ್ಷೇತ್ರವಾದ ಈ ವಿಷಯವನ್ನು ಅಧ್ಯಯನದ ವಸ್ತುವಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ವೈದ್ಯಶಾಸ್ತ್ರ ಹಸ್ತಪ್ರತಿಗಳ ರಚನೆಗೆ ಅಗತ್ಯವಾದ ಕಾರಣಗಳನ್ನು ಶೋಧಿಸುವುದರ ಮೂಲಕ ಕಾಲದಿಂದ ಕಾಲಕ್ಕೆ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಂಡ ವೈದ್ಯಶಾಸ್ತ್ರದ ಮನೋಧರ್ಮವನ್ನು ವಿವರಿಸುವ ಪ್ರಯತ್ನವನ್ನು ಮಾಡುಲಾಗಿದೆ.

ಒಂದು ದೇಶದ ಭೌಗೋಳಿಕ ಪರಿಸರದ ವ್ಯಾಪ್ತಿಯನ್ನು ಪರಿಚಯ ಮಾಡಿಕೊಳ್ಳಲು ನಕಾಶೆಯನ್ನು ಉಪಯೋಗಿಸುತ್ತೇವೆ. ಅದೇ ರೀತಿ ಕನ್ನಡ ವೈದ್ಯಶಾಸ್ತ್ರದ ಹಸ್ತಪ್ರತಿಗಳು ರಚನೆಗೊಂಡು ಪರಂಪರಾನುಗತವಾಗಿ

ಬೆಳೆದುಕೊಂಡು ಬಂದಿವೆ. ಹಾಗೂ ಅವುಗಳು ಯಾವ ಯಾವ ಸ್ಥಳಗಳಲ್ಲಿ ಸಂಗ್ರಹಗೊಂಡಿವೆ. ಅವುಗಳ ಭೌತಿಕ ಸ್ಥಿತಿ, ವಿಷಯ ವೈವಿಧ್ಯತೆ, ಔಷಧಗುಣ, ರೋಗಗಳನ್ನು ಯಾವ ರೀತಿ ಗುಣಪಡಿಸಲಾಗುತ್ತಿತ್ತು ಎಂಬುದನ್ನು ಗಮನಿಸಲಾಗಿದೆ. ನಕಾಶೆಯಲ್ಲಿ ಪರ್ವತಶ್ರೇಣಿ, ಬಯಲುನಾಡು, ಕರಾವಳಿ ಎಂದು ಗುರುತಿಸುವಂತೆ ವೈದ್ಯಶಾಸ್ತ್ರದ ಪ್ರಕಾರಗಳು, ದ್ರವ್ಯಗುಣದ ಪ್ರಮಾಣವನ್ನು ಗುರುತಿಸಲಾಗಿದೆ. ಅದಲ್ಲದೆ ಮೂಲಭೂತ ತತ್ವಸಿದ್ಧಾಂತ ಹಾಗೂ ಸಾಮಾನ್ಯೀಕರಣಗಳನ್ನು ಒರೆಹಚ್ಚಿ ಉಪಯುಕ್ತತೆಯನ್ನು ಬೆಲೆಕಟ್ಟಲು ಪ್ರಯತ್ನಿಸಲಾಗಿದೆ. ಅತ್ಯಮೂಲ್ಯವಾದ ನಮ್ಮ ದೇಶಿಯ ವೈದ್ಯಜ್ಞಾನವನ್ನು ತಂತ್ರಜ್ಞಾನ ಹಾಗೂ ಯಂತ್ರಜ್ಞಾನದಂತಹ ಕ್ಷೇತ್ರಕ್ಕೆ ಇಳಿಸಿ ಇದೀಗ ಪ್ರಚಲಿತದಲ್ಲಿರುವ ಹೊಸ ಕ್ರಮ ಪದ್ಧತಿಗೆ ವಿವಿಧ ರೀತಿಯಲ್ಲಿ ಹೇಗೆ ಅಳವಡಿಸಲಾಗಿದೆ ಎಂಬುದನ್ನು ಒಳಗೊಂಡಿದೆ.

## ೧.೨. ಅಧ್ಯಯನದ ಮಹತ್ವ ಮತ್ತು ವಿಧಾನ

ಅಂತರಾಷ್ಟ್ರೀಯ ಮಟ್ಟದಲ್ಲಿ ಇಂದು ನಮ್ಮ ದೇಶದ ಹಿರಿಮೆಯೆಂದು ಗುರುತಿಸಿಕೊಳ್ಳಬಹುದಾದ ಪ್ರಮುಖ ವಿಷಯವೆಂದರೆ ನಮ್ಮ ದೇಶಿ ವೈದ್ಯಪದ್ಧತಿಯಾಗಿದೆ. ಉತ್ಕೃಷ್ಟವಾದ, ಸತ್ವಶಾಲಿಯಾದ, ಪರಂಪರಾಗತವಾಗಿ ಬಂದ ಈ ಸನಾತನ ವೈದ್ಯಪದ್ಧತಿ ವಿಶೇಷತೆಯಿಂದಾಗಿ ಇಂದು ವಿಶ್ವವೇ ಸಸ್ಯ ಔಷಧಿಗಳತ್ತ ಮುಖ ಮಾಡುವಂತಾಗಿದೆ. ಇದು ಮನುಕುಲದ ಕಲ್ಯಾಣಕ್ಕಾಗಿ ಅವತರಿಸಿದ ದಿವ್ಯ ವೈದ್ಯಪದ್ಧತಿ. ನಮ್ಮ ಪುರಾತನ ಮುನಿ ವೈದ್ಯರು ಆಯುರ್ವೇದ ಶಾಸ್ತ್ರವನ್ನು ಸಂಪೂರ್ಣ ಅಭ್ಯಸಿಸಿ, ಅವಲೋಕಿಸಿ, ಪರಾಮರ್ಶಿಸಿ ಅನೇಕ ಆಯುರ್ವೇದ ಗ್ರಂಥರತ್ನಗಳನ್ನು ರಚಿಸಿ ಅಮರರಾಗಿದ್ದಾರೆ. ಈ ದೇಶಿ ವೈದ್ಯಪದ್ಧತಿ ಅತ್ಯಂತ ಪುರಾತನ ಪದ್ಧತಿಯಾಗಿದೆ. ಅಲ್ಲದೆ ಜಗತ್ತಿನ ಎಲ್ಲಾ ಚಿಕಿತ್ಸಾ ಪದ್ಧತಿಗಳಿಗೆ ಮೂಲ ಮತ್ತು ಮಾರ್ಗದರ್ಶಕವಾಗಿತ್ತೆದು ನಿಸ್ಸಂಶಯವಾಗಿ ಹೇಳಬಹುದು.

ಭಾರತದ ಹೆಮ್ಮೆಯ ವೈದ್ಯಪದ್ಧತಿ ಆಯುರ್ವೇದವು ಮುಸಲ್ಮಾನರ ಕಾಲದಲ್ಲಿ ಇಳಿಮುಖವಾಗಿದ್ದು ಆಂಗ್ಲರ ದಾಳಿಯಿಂದ ಸಂಪೂರ್ಣ ಮೂಲೆಗುಂಪಾಗಿದ್ದು ಇತಿಹಾಸ. ಭಾರತವು ಪರಕೀಯರ ದಾಳಿಗೆ ಸಿಕ್ಕಿ ಎಷ್ಟೇ ಜರ್ಝರಿತವಾಗಿದ್ದರೂ ತಮ್ಮ ಧರ್ಮವನ್ನು ಕಾಯ್ದುಕೊಂಡು ಬಂದಂತೆ ನಮ್ಮ ದೇಶದ ಅಮೂಲ್ಯ ವೈದ್ಯಶಾಸ್ತ್ರ ಆಯುರ್ವೇದವನ್ನು ಉಳಿಸಿಕೊಂಡು ಬಂದಿದ್ದಾರೆ. ಸ್ವಸ್ಥರಕ್ಷಣೆಯನ್ನು, ರೋಗ ನಿರ್ಮೂಲನೆಯನ್ನು ಧ್ಯೇಯವಾಗಿರಿಸಿಕೊಂಡ ಆಯುರ್ವೇದ ಶಾಸ್ತ್ರ ಸರ್ವಕಾಲಸಮ್ಮತ, ಸರ್ವದೇಶಹಿತ. ದೀರ್ಘಾಯುಷ್ಯವನ್ನು ಹೊಂದಲು ಉತ್ತಮ ಸಾಧನವಾಗಿದೆ.

'ನಿಸರ್ಗವೇ ವರದಾನ' ದೇವರ ಅತ್ಯಮೂಲ್ಯವಾದ ಕೊಡುಗೆ. ವನಸ್ಪತಿ, ಬಳ್ಳಿ, ಎಲೆ, ಕಾಯಿ, ಹಣ್ಣು, ಬೇರು, ತೊಗಟೆ, ಹೂವು ಮೊದಲಾದ ಗಿಡಮೂಲಿಕೆಗಳಿಂದ ಮನೆಯ ಹಿತ್ತಲಲ್ಲೇ ಇರುವ ಗಿಡಗಳಿಂದ ಔಷಧಿ ಲಭ್ಯ. ಇಂತಹ ದೇಶಿಯ ಔಷಧದ ಮಹತ್ವವೆಂದರೆ ಇವುಗಳ ಸೇವನೆಯಿಂದ ಮನುಷ್ಯನು ಸ್ವಾಸ್ಥ್ಯ ಶರೀರ, ಸ್ವಾಸ್ಥ್ಯಮನಸ್ಸಿನಿಂದ ಆರೋಗ್ಯದಿಂದರಬಹುದು. ಸಂಪೂರ್ಣ ಆರೋಗ್ಯವಂತನಾಗಿರಲು ಈ ಗಿಡಮರಬಳ್ಳಿಗಳ ಮದ್ದುಗಳು ಸಹಕಾರಿ. ಶಾರೀರಿಕ, ಮಾನಸಿಕ ಬೆಳವಣಿಗೆಗೆ ಬೇಕಾದ ಅನ್ನಾಂಗಗಳು, ಜೀವಸತ್ವಗಳು, ವಿವಿಧ ರೋಗಗಳು ಬಾರದಂತೆ ತಡೆಗಟ್ಟುವ ಸಾಮರ್ಥ್ಯ ಪಡೆದಿವೆ. ಅರಣ್ಯಗಳಲ್ಲಿ ತಪಸ್ವಿಗಳು, ಋಷಿಮುನಿಗಳು, ಆಶ್ರಯವಾಸಿಗಳು ದೀರ್ಘಾಯುಷಿಗಳಾಗಿ ಸ್ಥಿತಪ್ರಜ್ಞ

ಮನೋಭಾವದಿಂದ ಬದುಕಿ ಬಾಳಿದ ಗುಟ್ಟು ಅವರು ಸೇವಿಸುತ್ತಿದ್ದ ಆಹಾರ ರೂಪದ ವನಸ್ಪತಿಗಳು, ಅವರು ವಾಸಿಸುತ್ತಿದ್ದ ಪರಿಸರ ಮುಖ್ಯಕಾರಣವಾಗಿದೆ. ಅಂತೆಯೇ ಅತ್ಯಂತ ಪ್ರಾಚೀನವಾದ ಭಾರತೀಯ ಚಿಕಿತ್ಸಾ ಪದ್ಧತಿ ಆಯುರ್ವೇದವು ತ್ರಿದೋಷ ಸಿದ್ಧಾಂತದ ತಳಪಾಯದ ಮೇಲೆ ಸ್ಥಿರವಾಗಿ ನಿಂತಿದೆ. ಆರೋಗ್ಯದ ಬಗ್ಗೆ ಸಂಪೂರ್ಣ ವಿವರ ಕೊಡುವ ಈ ಶ್ಲೋಕ ಸರ್ವಕಾಲ ಮಾನ್ಯತೆ ಪಡೆದಿದೆ.

"ಸಮದೋಷ ಸಮಾಗ್ನಿಶ್ಚ ಸಮಧಾತು ಮಲಕ್ರಿಯ:
ಪ್ರಸನ್ನಾತ್ಮೇಂದ್ರಿಯ ಮನಃ ಸ್ವಸ್ಥ ಇತ್ಯಾಭಿದೀಯತೆ"

ತ್ರಿದೋಷಗಳಾದ ವಾತ, ಪಿತ್ತ ಮತ್ತು ಕಫ(ಶ್ಲೇಷ್ಮ) ಇವುಗಳು ಸಮತೋಲನವಾಗಿದ್ದರೆ ಸಮದೋಷಗಳಾಗುತ್ತವೆ. 'ಸಮಅಗ್ನಿ' ಅಂದರೆ ಅಗ್ನಿಯು ಸಮತೋಲನದಲ್ಲಿದ್ದರೆ 'ಸಮಧಾತುಗಳು'. ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ ಹಾಗೂ ಶುಕ್ರ ಮಲಕ್ರಿಯೆಗಳು ಸುಸ್ಥಿತಿಯಲ್ಲಿದ್ದು ಆತ್ಮ, ಇಂದ್ರಿಯ (ಜ್ಞಾನೇಂದ್ರಿಯ, ಕರ್ಮೇಂದ್ರಿಯ) ಮನಸ್ಸುಗಳು, ಪ್ರಸನ್ನವಾಗಿದ್ದರೆ ಆರೋಗ್ಯವಂತ ಎಂದು ಹೇಳಬಹುದು"[೨].

ನಮ್ಮ ದೇಶಿ ವೈದ್ಯಪದ್ಧತಿಯ ಸಸ್ಯ ಔಷದಿ ಗುಣವನ್ನು ಒಂದು ಶಾಸ್ತ್ರೀಯ ತಳಹದಿಯಲ್ಲಿ ವಿಶ್ಲೇಷಿಸಬೇಕಿದೆ. ಹಲವಾರು ಕಾಯಿಲೆಗಳಿಗೆ ಹಲವು ಶತಮಾನಗಳಿಂದ ಕನ್ನಡ ನಾಡಿನಲ್ಲಿಯೂ ಸಸ್ಯ ಔಷಧಿ ಬಳಕೆಯಲ್ಲಿತ್ತು ಎಂಬುದು ನಮ್ಮ ಭಾಷೆಯ ಹಸ್ತಪ್ರತಿಗಳ ಸಹಾಯದಿಂದ ತಿಳಿದುಬರುತ್ತದೆ. ಕಾಲಚಕ್ರವು ತಿರುಗುತ್ತಾ ಮಹತ್ತರ ಬದಲಾವಣೆ ತರುತ್ತದೆ. ನಮ್ಮ ದೇಶದ ಸಾಂಪ್ರದಾಯಿಕ ವೈದ್ಯಪದ್ಧತಿ ಇಂದು ಅನ್ಯ ದೇಶದವರನ್ನು ಆಕರ್ಷಿಸಿದೆ. ಕಳೆಯೆಂದು ಕಿತ್ತು ಬಿಸಾಕುವ ಗಿಡಗಳು ನಮ್ಮ ಅನಾರೋಗ್ಯ ಕಾಪಾಡಿಕೊಳ್ಳಲು ಪೂರ್ವಜರ ಕೊಡುಗೆಯ ಜ್ಞಾನವನ್ನು ಪರಿಷ್ಕರಿಸಿ ಜತನದಿಂದ ಕಾಪಾಡಿಕೊಂಡು ಬಂದಿರುವ ಕನ್ನಡ ಹಸ್ತಪ್ರತಿಗಳು ಪ್ರಮುಖವಾದವುಗಳು. ಅಂತವುಗಳ ಸಂಸ್ಕೃತಿ ಮುಖಿಯಾದ ಸೃಜನಶೀಲ ನೆಲೆಗಳ ಅರ್ಥಪೂರ್ಣ ಅಧ್ಯಯನವು ಅತ್ಯಂತ ಮಹತ್ವದ್ದಾಗಿದೆ. ಆ ಹಿನ್ನೆಲೆಯಲ್ಲಿ ಕನ್ನಡ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಕೆಲವು ಶೀರ್ಷಿಕೆಗಳು ಈ ಕೆಳಗಿನಂತಿವೆ.

೧. ಕೀರ್ತಿವರ್ಮನ 'ಗೋವೈದ್ಯ' (ಕ್ರಿ.ಶ.ಸು.೧೧೦೦)
೨. ಜಗದ್ದಳ ಸೋಮನಾಥನ 'ಕರ್ನಾಟಕ ಕಲ್ಯಾಣಕಾರಕ' (ಕ್ರಿ.ಶ.ಸು.೧೧೭೫)
೩. ದೇವೇಂದ್ರಮುನಿಯ 'ಬಾಲಗ್ರಹ ಚಿಕಿತ್ಸೆ' (ಕ್ರಿ.ಶ.ಸು.೧೨೦೦)
೪. ಅಮೃತನಂದಿಯ 'ವೈದ್ಯನಿಘಂಟು' (ಕ್ರಿ.ಶ.ಸು.೧೩೦೦)
೫. ಮಂಗರಾಜನ 'ಖಗೇಂದ್ರಮಣಿಮಣಿ ದರ್ಪಣಂ' (ಕ್ರಿ.ಶ.ಸು.೧೩೬೦)
೬ ಬಾಚರಸನ 'ಅಶ್ವವೈದ್ಯ' (ಕ್ರಿ.ಶ.ಸು.೧೫೦೦)
೭ ಶ್ರೀಧರದೇವನ 'ವೈದ್ಯಾಮೃತ' (ಕ್ರಿ.ಶ.ಸು.೧೫೦೦)
೮. ಸಾಳ್ವಕವಿಯ 'ವೈದ್ಯಸಾಂಗತ್ಯ' (ಕ್ರಿ.ಶ.ಸು.೧೫೫೦)
೯. ವಲ್ಲಭೇಂದ್ರನ 'ವೈದ್ಯಚಿಂತಾಮಣಿ' (ಸು.೧೫ನೇ ಶತಮಾನ)
೧೦. ನರಸಿಂಹಶಾಸ್ತ್ರಿಗಳ 'ವೈದ್ಯಸಾರ ಸಂಗ್ರಹ' (ಕ್ರಿ.ಶ.ಸು.೧೫೭೦)
೧೧. ವೀರಭದ್ರರಾಜನ 'ಹಸ್ತಾಯುರ್ವೇದ' (ಕ್ರಿ.ಶ.ಸು.೧೬೦೦)

೧೨. ವೀರರಾಜೇಂದ್ರನ 'ಸಕಲವೈದ್ಯ ಸಂಹಿತಾಸಾರಾರ್ಣವ' (ಕ್ರಿ.ಶ.ಸು.೧೭೨೦)

೧೩. ಚಿಕ್ಕುಪಾಧ್ಯಾಯನ 'ಆರೋಗ್ಯಾಮೃತವೆಂಬ ಕರ್ನಾಟಕ ವೈದ್ಯಸಾರ ಸಂಗ್ರಹ' (ಕ್ರಿ.ಶ.ಸು.೧೭೪೦)

೧೪. ಬೊಮ್ಮಯ್ಯ ಕವಿಯ 'ವೈದ್ಯಕಂದ' (ಕ್ರಿ.ಶ.ಸು.೧೭೫೦)

೧೫. ತಿಮ್ಮರಾಜ ಕವಿ 'ಸ್ತ್ರೀವೈದ್ಯ' (ಕ್ರಿ.ಶ.ಸು.೧೭೫೦)

೧೬. ಲಕ್ಷ್ಮಣ ಪಂಡಿತನ 'ಅಕಾರಾದಿ ನಿಘಂಟು' (ಕ್ರಿ.ಶ.ಸು.೧೭೭೫)

೧೭. ಗಂಗಾಧರನ 'ಬೇಷಜಕಲ್ಪ' (ಸು.೧೮ ಶತಮಾನ)

೧೮. ಪದ್ಮರಾಜನ 'ವೈದ್ಯಶಾಸ್ತ್ರ' (ಸು.೧೮ನೇ ಶತಮಾನ)

ಇವುಗಳಲ್ಲದೆ ಇನ್ನೂ ಅನೇಕ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳು ತಮ್ಮ ಸ್ವರೂಪ ಮತ್ತು ವಿಷಯ ಸಂಪತ್ತುಗಳಲ್ಲಿ ಕಾಲ ಕಾಲಕ್ಕೆ ಬದಲಾಗುತ್ತ ಬಂದಿವೆ. ಪ್ರಾಚೀನ ಕಾಲದಿಂದ ಆಧುನಿಕದವರೆಗೆ ಆಯಾ ಸಂದರ್ಭಕ್ಕೆ ತಕ್ಕಂತೆ ಹಸ್ತಪ್ರತಿಗಳನ್ನು ಗಮನಿಸಬೇಕಾಗುತ್ತದೆ. ಅವುಗಳು ವೈದ್ಯಶಾಸ್ತ್ರ ನಿರ್ಮಿತಿಗೆ ತೊಡಗಿದ ಬೇರೆ ಬೇರೆ ವರ್ಗಗಳ ವಿದ್ವಾಂಸರುಗಳಿಂದ ರಚಿತಗೊಂಡ ಹಸ್ತಪ್ರತಿಗಳು ಕಾಲಕಾಲಕ್ಕೆ ರೂಪಗೊಳ್ಳುತ್ತ ಬಂದಿವೆ ಎಂಬುದನ್ನು ವಿಶ್ಲೇಷಿಸುವುದು ಅತ್ಯಂತ ಮಹತ್ವದ ವಿಷಯವಾಗಿದೆ.

"ಕನ್ನಡದಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು; ಸಾಂಸ್ಕೃತಿಕ ನಿರ್ವಚನ" ಎನ್ನುವ ಶೀರ್ಷಿಕೆಯ ಈ ಅಧ್ಯಯನದಲ್ಲಿ ವಿವರಣಾತ್ಮಕ ಅಧ್ಯಯನ ವಿಧಾನವನ್ನು ಅನುಸರಿಸಿ ವೈದ್ಯಶಾಸ್ತ್ರದ ಹಸ್ತಪ್ರತಿಗಳನ್ನು ಸಮೀಕ್ಷೆ ಮಾಡಿ ಅವುಗಳಲ್ಲಿರುವ ವಿಷಯ ವೈವಿಧ್ಯತೆ, ಅವುಗಳ ಸ್ವರೂಪ ಕುರಿತಾದ ವಿವರಗಳನ್ನು ಮಂಡಿಸಲಾಗಿದೆ. ಆನಂತರ ಕನ್ನಡ ಸಾಹಿತ್ಯದ ಯಾವ ಯಾವ ಕೃತಿಗಳಲ್ಲಿ ವೈದ್ಯಕೀಯ ಉಲ್ಲೇಖ ಕಂಡುಬರುತ್ತದೆ ಎಂಬುದರ ಸಮೀಕ್ಷೆ ಮಾಡಲಾಗಿದೆ. ವೈದ್ಯಶಾಸ್ತ್ರದ ಹಿಂದಿನ ಸೈದ್ಧಾಂತಿಕ ನೆಲೆಗಳನ್ನೂ ಗುರುತಿಸಲಾಗಿದೆ. ಇದರೊಂದಿಗೆ ವೈದ್ಯಶಾಸ್ತ್ರದ ಚಾರಿತ್ರಿಕ, ಸಾಮಾಜಿಕ ಹಾಗೂ ಸಂಸ್ಕೃತಿಮುಖಿ ಅಧ್ಯಯನವನ್ನು ಮಾಡಲಾಗಿದೆ. ಈ ಶಾಸ್ತ್ರದ ಹಸ್ತಪ್ರತಿಗಳು ಜನರ ದಿನ ಬದುಕಿನೊಂದಿಗೆ ಮುಖಾಮುಖಿಯಾಗಿ ಸಂಸ್ಕೃತಿಯ ಚಹರೆಯಲ್ಲಿ ಹೇಗೆ ಉಳಿದುಕೊಂಡು ಬಂದಿವೆ ಎಂಬುದನ್ನು ವಿಶ್ಲೇಷಣಾತ್ಮಕವಾಗಿ ಕಟ್ಟಿಕೊಡಲಾಗಿದೆ. ಅಲ್ಲದೆ ದೇಶಿ ವೈದ್ಯಪದ್ಧತಿಯು ಆಧುನಿಕ ವೈದ್ಯಪದ್ಧತಿಗಳ ಮೇಲೆ ಯಾವ ರೀತಿ ಪ್ರಭಾವ ಬೀರಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

### ೧.೩. ಅಧ್ಯಯನದ ಸ್ವರೂಪ

ಮಾನವ, ಸೃಷ್ಟಿಯ ಆದಿಕಾಲದಿಂದಲೂ ನಿಸರ್ಗದಿಂದ ಅಪಾರವಾದ ಜ್ಞಾನರಾಶಿಯನ್ನು ಪಡೆದಿದ್ದಾನೆ. ಅದರಲ್ಲಿ ದೇಹಾರೋಗ್ಯಕ್ಕೆ ಅತ್ಯಮೂಲ್ಯವಾದ ಜ್ಞಾನ ವೈದ್ಯಜ್ಞಾನ. ಈ ಜ್ಞಾನವನ್ನು ಹೊತ್ತು ತಂದ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳು ಅತ್ಯಂತ ಪ್ರಮುಖವಾದವುಗಳು. ಮಾನವ-ಧರ್ಮ, ಅರ್ಥ, ಕಾಮ, ಮೋಕ್ಷ ಸಂಪಾದನೆಗೆ ಆರೋಗ್ಯವೇ ಮುಖ್ಯ ಎಂದು ನಮ್ಮ ದೇಶಿ ವೈದ್ಯಗ್ರಂಥಗಳು ಸಾರುತ್ತವೆ. ಹಾಗೂ ಮನುಕುಲದ ವಿಕಾಸಕ್ಕಾಗಿ ಪರಂಪರಾಗತವಾಗಿ ನಡೆದುಬಂದ ದೇಶಿ ವೈದ್ಯಪದ್ಧತಿಯು 'ಆಯುರಾರೋಗ್ಯ ಭಾಗ್ಯ'ವನ್ನು ಹೊಂದಲು ಅತ್ಯಗತ್ಯ. ವೈದ್ಯವು ರೋಗವನ್ನು ನಿವಾರಿಸಿ ಆರೋಗ್ಯವನ್ನು ಕಾಪಾಡುತ್ತದೆ. ಇಂಥ ಅಮೂಲ್ಯ ವೈದ್ಯಶಾಸ್ತ್ರದ ಅಧ್ಯಯನದ ಅಗತ್ಯವನ್ನು ಈಡೇರಿಸಲು ಈ ಮಹಾಪ್ರಬಂಧವು ಒಟ್ಟು ಏಳು ಅಧ್ಯಾಯಗಳಲ್ಲಿ ರೂಪಗೊಂಡಿದೆ.

ಒಂದನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಕನ್ನಡದಲ್ಲಿ ಲಭ್ಯವಿದ್ದ ವೈದ್ಯಶಾಸ್ತ್ರದ ಹಸ್ತಪ್ರತಿಗಳನ್ನೊಳಗೊಂಡ ಅದರ ವ್ಯಾಪ್ತಿ, ಮಹತ್ವ ಮತ್ತು ಈ ಪ್ರಬಂಧದ ಸ್ವರೂಪವನ್ನು ಒಳಗೊಂಡಿದೆ. ಹಾಗೂ ಕನ್ನಡ ವೈದ್ಯಶಾಸ್ತ್ರದ ಹಸ್ತಪ್ರತಿಗಳ ಕುರಿತು ಇದುವರೆಗೂ ನಡೆದ ಅಧ್ಯಯನ ಸಮೀಕ್ಷೆಯನ್ನು ಒಳಗೊಂಡಿದೆ. ಅಧ್ಯಯನ ಸಮೀಕ್ಷೆಯಲ್ಲಿ ಸ್ವತಂತ್ರ ಕೃತಿಗಳು, ಸಂಶೋಧನಾ ಕೃತಿಗಳು ಮತ್ತು ಲೇಖನಗಳನ್ನು ಕುರಿತು ಸಮಗ್ರವಾಗಿ ಅವಲೋಕಿಸಲಾಗಿದೆ.

ಅಧ್ಯಾಯ ಎರಡು "ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳ ಸ್ವರೂಪ ಮತ್ತು ವೈವಿಧ್ಯ" ಕುರಿತದ್ದಾಗಿದೆ. ಇದರಲ್ಲಿ ಕರ್ನಾಟಕದ ಹಸ್ತಪ್ರತಿ ಭಂಡಾರಗಳಲ್ಲಿ ಲಭ್ಯವಿದ್ದ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳನ್ನು ಗುರುತಿಸಿ, ಸುಮಾರು ೩೭೦ ಹಸ್ತಪ್ರತಿಗಳ ಪಟ್ಟಿಯನ್ನು ನೀಡಲಾಗಿದೆ. ಇದರಲ್ಲಿ ಕೆಲವು ಸೂಚೀಕರಣಗೊಂಡಿವೆ, ಕೆಲವು ಸೂಚೀಕರಣಗೊಂಡಿರುವುದಿಲ್ಲ. ಅವುಗಳಲ್ಲಿ ಶ್ಲೋಕ-ಟೀಕು, ಗದ್ಯ, ಪದ್ಯ, ಕಂದ, ಮತ್ತು ವ್ಯಾಖ್ಯಾನ ರೂಪದಲ್ಲಿವೆ. ನೀಡಿದ ಪಟ್ಟಿಯಲ್ಲಿ ಕೃತಿಯ ಹೆಸರು, ಹಸ್ತಪ್ರತಿ ಸಂಖ್ಯೆ, ಕರ್ತೃ, ಹಸ್ತಪ್ರತಿ ಇರುವ ಸ್ಥಳ ಹಾಗೂ ಅವು ಸಮಗ್ರ/ಅಸಮಗ್ರವಾಗಿವೆಯೇ ಎಂಬುದನ್ನು ಗುರುತಿಸಲಾಗಿದೆ. ಅಲ್ಲದೆ ಕೃತಿಗಳ ಕರ್ತೃ , ಕಾಲ ಮತ್ತು ಸಮಗ್ರವಾಗಿರುವ ಕೃತಿಗಳ ಸಮಗ್ರ ಸ್ವರೂಪ ಮತ್ತು ವಿಷಯ ವೈವಿಧ್ಯವನ್ನು ಗುರುತಿಸಿ ಮುಂದಿನ ಅಧ್ಯಯನಕ್ಕೆ ಸಹಾಯವಾಗುವಂತೆ ರೂಪಿಸಿಕೊಳ್ಳಲಾಗಿದೆ.

ಅಧ್ಯಾಯ ಮೂರು "ವೈದ್ಯಶಾಸ್ತ್ರ ನಿರ್ವಚನ". ಈ ಅಧ್ಯಾಯದಲ್ಲಿ ಭಾರತೀಯ ವೈದ್ಯಪದ್ಧತಿ ಆಯುರ್ವೇದದ ಪದಶಃ ಅರ್ಥವನ್ನು ವಿಶ್ಲೇಷಿಸಲಾಗಿದೆ. ಹಾಗೂ ಆಯುರ್ವೇದಕ್ಕಿಂತ ಕನ್ನಡ ದೇಶಿ ವೈದ್ಯಪದ್ಧತಿ ಹೇಗೆ ಭಿನ್ನ ಎಂಬುದನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಅಲ್ಲದೆ ಕನ್ನಡ ದೇಶಿ ವೈದ್ಯಪದ್ಧತಿಯ ಪರಂಪರೆಯನ್ನು ಭಾರತೀಯ ವೈದ್ಯಪದ್ಧತಿಯ ಹಿನ್ನೆಲೆಯನ್ನು ಗುರುತಿಸುತ್ತ ಕನ್ನಡ ವೈದ್ಯಶಾಸ್ತ್ರದ ಪರಂಪರೆಯನ್ನು ಕರ್ನಾಟಕದ ಇತಿಹಾಸದಿಂದ ಪ್ರಾರಂಭಿಸಿ ಲಭ್ಯ ಮಾಹಿತಿ ಹಾಗೂ ಹಸ್ತಪ್ರತಿಗಳ ಆಧಾರದಿಂದ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇದೇ ಅಧ್ಯಾಯದಲ್ಲಿ ಅತೀ ಮುಖ್ಯವಾದ ಇನ್ನೊಂದು ವಿಷಯವೆಂದರೆ ಕವಿರಾಜಮಾರ್ಗದಿಂದ ಮುದ್ದಣನವರೆಗಿನ ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯ ಕೃತಿಗಳಲ್ಲಿ ವೈದ್ಯಕೀಯ ಕುರಿತ ಸಾಂದರ್ಭಿಕವಾಗಿ ಉಲ್ಲೇಖವಾದ ಸಂಗತಿಗಳನ್ನು ಸಮೀಕ್ಷೆ ಮಾಡಲಾಗಿದೆ.

ಅಧ್ಯಾಯ ನಾಲ್ಕು "ವೈದ್ಯಶಾಸ್ತ್ರ ಪ್ರಕಾರಗಳು: ರೋಗ-ಲಕ್ಷಣ ಚಿಕಿತ್ಸಾ ವಿಧಿ ವಿಧಾನಗಳು". ಇದರಲ್ಲಿ ರೋಗಗಳ ಹುಟ್ಟಿಗೆ ಕಾರಣ ರೋಗಗಳ ಲಕ್ಷಣ ಮತ್ತು ವಿವಿಧ ರೋಗಗಳಿಗೆ ಚಿಕಿತ್ಸೋಪಾಯಗಳು, ಆರೋಗ್ಯದ ಮಹತ್ವ ಕುರಿತು ಹೇಳಲಾಗಿದೆ. ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಪ್ರಸ್ತಾಪಿಸಲಾದ ವಿಷಯವನ್ನು ಆಧಾರವಾಗಿಟ್ಟುಕೊಂಡು ಮನುಷ್ಯವೈದ್ಯ ಮತ್ತು ಪ್ರಾಣಿವೈದ್ಯ ಎಂದು ವಿಂಗಡಿಸಲಾಗಿದೆ. ನಂತರ ಮತ್ತೆ ಮನುಷ್ಯ ವೈದ್ಯದಲ್ಲಿ; ಸಾಮಾನ್ಯ ವೈದ್ಯ, ಸ್ತ್ರೀವೈದ್ಯ, ಬಾಲವೈದ್ಯ ಮತ್ತು ವಿಷವೈದ್ಯ ಎಂದೂ, ಪ್ರಾಣಿವೈದ್ಯದಲ್ಲಿ; ಗೋವೈದ್ಯ, ಅಶ್ವವೈದ್ಯ ಹಾಗೂ ಗಜವೈದ್ಯಗಳೆಂದು ವಿಭಾಗಿಸಿಕೊಳ್ಳಲಾಗಿದೆ. ಈ ಪ್ರಕಾರಗಳನ್ನು ವಿವರಿಸುತ್ತ ಆಯಾ ಪ್ರಕಾರಗಳಲ್ಲಿ ಬರುವ ರೋಗ-ಲಕ್ಷಣ-ಚಿಕಿತ್ಸಾ ವಿಧಾನಗಳನ್ನು ವಿವರವಾಗಿ ಸಮಾಜಮುಖಿ, ಸಂಸ್ಕೃತಿಮುಖಿ ಹಿನ್ನೆಲೆಯಲ್ಲಿ ವಿಷದಪಡಿಸಲಾಗಿದೆ.

ಅಧ್ಯಾಯ ಐದು "ವೈದ್ಯಶಾಸ್ತ್ರ ಮತ್ತು ಇತರ ಶಾಸ್ತ್ರಗಳಿಗಿರುವ ಸಂಬಂಧ". ಇಲ್ಲಿ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಸೂಚಿಸಿದಂತೆ ಮನುಷ್ಯನ ಆರೋಗ್ಯದ ಕುರಿತು ಇತರ ಶಾಸ್ತ್ರಗಳಾದ ಯೋಗಶಾಸ್ತ್ರ, ಸೂಪಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಮನಃಶಾಸ್ತ್ರಗಳ ಅಂತರ್‌ಸಂಬಂಧವನ್ನು ಹೇಳಲಾಗಿರುತ್ತದೆ. ಅಲ್ಲದೆ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿಯೂ ಇತರ ಶಾಸ್ತ್ರಗಳ ಹಿನ್ನೆಲೆಯಲ್ಲಿಯೇ ಔಷಧೋಪಚಾರವನ್ನು ಮಾಡುವ ಕ್ರಮಗಳು ಉಕ್ತವಾಗಿರುತ್ತವೆ. ಆದ್ದರಿಂದ ಮನುಷ್ಯನ ಆಯುರಾರೋಗ್ಯಕ್ಕೆ ಸಂಬಂಧಿಸಿದಂತೆ ಈ ಶಾಸ್ತ್ರಗಳು ಯಾವ ರೀತಿ ಕಾರ್ಯ ನಿರ್ವಹಿಸುತ್ತಿವೆ ಎಂಬುದನ್ನು ಸಾಂಸ್ಕೃತಿಕ ನಿರ್ವಚನೆಯ ಹಿನ್ನೆಲೆಯಲ್ಲಿ ವಿವರಿಸಿಕೊಳ್ಳಲಾಗಿದೆ.

ಅಧ್ಯಾಯ ಆರು "ಪಾರಂಪರಿಕ ಮತ್ತು ಆಧುನಿಕ ವೈದ್ಯಶಾಸ್ತ್ರಗಳ ಅಂತರ ಸಂಬಂಧ"ಕ್ಕೆ ಮೀಸಲಾಗಿದ್ದು ಮೊದಲ ಹಂತದಲ್ಲಿ ಆಧುನಿಕ ವೈದ್ಯಪದ್ಧತಿಗಳ ಮೇಲೆ ನಮ್ಮ ಪಾರಂಪರಿಕ ದೇಶಿ ವೈದ್ಯಪದ್ಧತಿ ಯಾವ ತೆರನಾದ ಪ್ರೇರಣೆ ಮತ್ತು ಪ್ರಭಾವವನ್ನು ಬೀರಿದೆ, ಆಧುನಿಕ ವೈದ್ಯಪದ್ಧತಿಗಳಾದ ಅಲೋಪಥಿ, ಹೋಮಿಯೋಪತಿ, ಯುನಾನಿ ಇತ್ಯಾದಿ ಪದ್ಧತಿಗಳು ಹೇಗೆ ಬೆಳೆದವು, ಅವುಗಳು ಪಾರಂಪರಿಕ ವೈದ್ಯ ಪದ್ಧತಿಯಿಂದ ಯಾವ ರೀತಿ ಪ್ರೇರಣೆ ಪಡೆದಿವೆ ಎಂಬುದನ್ನು ಚರ್ಚಿಸಲಾಗಿದೆ. ನಂತರ ಸಾಂಪ್ರದಾಯಿಕ ನಂಬಿಕೆಗಳು ಮತ್ತು ವೈದ್ಯಶಾಸ್ತ್ರದ ನಡುವಿನ ಸಂಬಂಧವನ್ನು ಕುರಿತು ಚರ್ಚಾತ್ಮಕವಾದ ಅಧ್ಯಯನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಅಧ್ಯಾಯ ಏಳು "ಸಮಾರೋಪ". ಈ ಅಧ್ಯಯವು ಮಹಾಪ್ರಬಂಧದಲ್ಲಿ ಚರ್ಚಿಸಿದ ವಿಷಯವನ್ನು ಪುನರಾವಲೋಕನ ಮಾಡುವುದರ ಮೂಲಕ ಪ್ರಸ್ತುತ ಅಧ್ಯಯನದಿಂದ ಹೊರಬಂದ ಪ್ರಮುಖ ಸಂಗತಿಯನ್ನು ದಾಖಲಿಸಲಾಗಿದೆ. ಹಾಗೂ ಒಟ್ಟು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಕ್ರೋಢೀಕರಿಸಿಕೊಂಡು ಅಧ್ಯಯನದ ಅಂತಿಮ ನಿರ್ಧಾರಗಳನ್ನು ಗುರುತಿಸಲಾಗಿದೆ. ಮತ್ತು ವೈದ್ಯಶಾಸ್ತ್ರ ಹಸ್ತಪ್ರತಿಗಳ ಕುರಿತು ಮುಂದಿನ ಅಧ್ಯಯನಕ್ಕೆ ಸೂಚನೆಯನ್ನು ನೀಡಲಾಗಿದೆ.

ಅನುಬಂಧದಲ್ಲಿ ಸಂಕ್ಷೇಪಗಳ ಸೂಚಿಯನ್ನು, ಅಕಾರಾಧಿಯಲ್ಲಿ ಆಕರ ಗ್ರಂಥಗಳನ್ನು ಕೊಡುವುದರ ಮೂಲಕ ಶಾಸ್ತ್ರಸಮ್ಮತವಾದ ಪ್ರಸ್ತುತ "ಕನ್ನಡದಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು; ಸಾಂಸ್ಕೃತಿಕ ನಿರ್ವಚನ" ಶೀರ್ಷಿಕೆಯನ ಮಹಾಪ್ರಬಂಧವನ್ನು ಸಮಾಪ್ತಿಗೊಳಿಸಲಾಗಿದೆ.

### ೧.೪. ಸಂಬಂಧಿತ ಅಧ್ಯಯನ ಅವಲೋಕನ

ಕನ್ನಡದ ಸಮಗ್ರ ಸಾಹಿತ್ಯದಲ್ಲಿ ಶಾಸ್ತ್ರಸಾಹಿತ್ಯವು ಅಧ್ಯಯನದಿಂದ ದೂರ ಉಳಿದಿದೆ. ಇತ್ತೀಚೆಗೆ ಬೆರಳೆಣಿಕೆಯಷ್ಟು ಮಾತ್ರ ಅಧ್ಯಯನ ನಡೆದಿವೆ, ನಡೆಯುತ್ತಿವೆ. ಅದರಲ್ಲಿ ಮನುಕುಲಕ್ಕೆ ಅತ್ಯಮೂಲ್ಯವಾದ ಸಕಲ ಜೀವರಾಶಿಯು ಸುಖಕರವಾಗಿ ಮುನ್ನಡೆಯಲು ಸಹಕಾರಿಯಾದ ಶಾಸ್ತ್ರಗಳಲ್ಲಿ ಕನ್ನಡ ವೈದ್ಯಶಾಸ್ತ್ರವು ಪ್ರಮುಖವಾದುದು. ನಮ್ಮ ದೇಶಿ ವೈದ್ಯಶಾಸ್ತ್ರ ಸಾಹಿತ್ಯವು ನಮಗೆ ಸಿಗುವುದು ತಾಳೆಗರಿ, ಕೋರಿಕಾಗದಗಳಂತ ಕೈಬರಹರೂಪಿ ಹಸ್ತಪ್ರತಿಗಳಲ್ಲೆ. ಅಂತಹ ಹಸ್ತಪ್ರತಿಗಳನ್ನು ಕುರಿತು ಇಲ್ಲಿಯವರೆಗೂ ಸಮಗ್ರ ಅಧ್ಯಯನಗಳು ನಡದೇ ಇಲ್ಲ. ಆದ್ದರಿಂದ ಆರೋಗ್ಯವಂತರನ್ನು ಇನ್ನೂ ಆರೋಗ್ಯವಂತರನ್ನಾಗಿ ಮಾಡುವ, ರೋಗದಿಂದ ನಿರೋಗಿಯನ್ನಾಗಿ ಮಾಡುವ ಇಂಥ ಪ್ರಾಚೀನಶಾಸ್ತ್ರ ಕುರಿತ ಅಧ್ಯಯನವು ಉಪೇಕ್ಷೆಗೊಂಡಿದೆ. ಆದರೂ

ಇತ್ತೀಚಿಗೆ ಕೆಲ ಸ್ವತಂತ್ರ ಕೃತಿಗಳು, ಕೆಲ ಲೇಖನಗಳು ಮತ್ತು ಶಾಸ್ತ್ರಕ್ಕೆ ಸಂಬಂಧಿಸಿದ ಇತರ ಶಾಸ್ತ್ರ ಕುರಿತು ಅಧ್ಯಯನಗಳಲ್ಲಿ ವೈದ್ಯಶಾಸ್ತ್ರ ಕುರಿತು ಪರಿಚಯಾತ್ಮಕ ಅಧ್ಯಯನಗಳು ನಡೆದಿವೆ. ಅವುಗಳ ಸೂಚಿ ಈ ಕೆಳಗಿನಂತಿದೆ.

**ಸ್ವತಂತ್ರ ಕೃತಿಗಳು**

* ಕರ್ನಾಟಕ ಆಯುರ್ವೇದ ಇತಿಹಾಸ; ಕೆ.ಆರ್.ಶ್ರೀಕಂಠಮೂರ್ತಿ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೨
* ಜೈನ ವೈದ್ಯಕೀಯ ಪರಂಪರೆ; ಡಾ.ಧನ್ಯಕುಮಾರ ಇಜಾರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

**ಅಧ್ಯಯನ ಕೃತಿಗಳು**

* ಚಾವುಂಡರಾಯನ ಲೋಕೋಪಕಾರ ಒಂದು ಅಧ್ಯಯನ; ಡಾ. ರಂಗಸ್ವಾಮಿ ಎ, ದರ್ಶನ ಕೀರ್ತಿಪ್ರಕಾಶನ, ಮೈಸೂರು, ೧೯೯೬
* ಕನ್ನಡದಲ್ಲಿ ಸೂಪಶಾಸ್ತ್ರ ಸಾಹಿತ್ಯ ಡಾ.ಬಿ.ಮಂಜುಳಾ, ಭರಣಿ ಪ್ರಕಾಶನ ಹೊಸಪೇಟೆ ೨೦೦೬
* ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ; ಡಾ.ಕಲ್ಲಯ್ಯ ಎಸ್.ಹಿರೇಮಠ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ, ೨೦೦೯

**ಲೇಖನಗಳು**

* ಕನ್ನಡದಲ್ಲಿ ಪ್ರಾಚೀನ ಆಯುರ್ವೇದ ಗ್ರಂಥಗಳು; ಗ್ರಂಥಸಂಪಾದನೆಯ ಕೆಲವು ಅಧ್ಯಯನಗಳು; ಡಾ.ವೈ.ಸಿ.ಭಾನುಮತಿ; ಕೇಶವ ಪ್ರಕಾಶನ, ಮೈಸೂರು, ೧೯೯೨
* ಸಕಲವೈದ್ಯ ಸಂಹಿತಾಸಾರಾರ್ಣವ; ಪೀಟಿಕೆಗಳು ಲೇಕನಗಳು; ಡಿ.ಎಲ್.ನರಸಿಂಹಾಚಾರ್; ಡಿ.ವಿ.ಕೆ. ಮೂರ್ತಿ ಮೈಸೂರು-೮, ೨೦೦೫
* ಕನ್ನಡ ವೈದ್ಯಕೀಯ ಹಸ್ತಪ್ರತಿಗಳ ಅಧ್ಯಯನ ಒಂದು ತುರ್ತು; ಡಾ.ಬಿ.ಕೆ.ಹಿರೇಮಠ; ಹಸ್ತಪ್ರತಿ ಅಧ್ಯಯನ, (ಸಂ) ಡಾ.ವೀರೇಶ ಬಡಿಗೇರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೪
* ಕನ್ನಡ ವೈದ್ಯ ಹಸ್ತಪ್ರತಿಗಳ ಪ್ರಕಟಣೆಯ ಅವಶ್ಯಕತೆ; ಡಾ. ಎಫ್.ಟಿ.ಹಳ್ಳಿಕೇರಿ, ಹಸ್ತಪ್ರತಿ ಅಧ್ಯಯನ ಸಂಪುಟ ೩, ಸಂಚಿಕೆ ೨, (ಸಂ) ಡಾ.ಎಫ್.ಟಿ.ಹಳ್ಳಿಕೇರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
* ವಿಷ ಚಿಕಿತ್ಸೆಯ ಮಹಾತ್ಮ ಮೂರನೆಯ ಮಂಗರಸ; ಡಾ. ಸತ್ಯನಾರಾಯಣ ಭಟ್; ಹಸ್ತಪ್ರತಿ ಅಧ್ಯಯನ ಸಂಪುಟ ೪, ಸಂಚಿಕೆ ೨, (ಸಂ) ಡಾ.ಎಫ್.ಟಿ.ಹಳ್ಳಿಕೇರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩
* ವೈದ್ಯಶಾಸ್ತ್ರ ಅಧ್ಯಯನ ಸೂಚಿ; ಆಯ್.ಎನ್.ಹುರಳಿ; ಹಸ್ತಪ್ರತಿ ಅಧಯ್ಯನ ಸಂಪುಟ ೪, ಸಂಚಿಕೆ ೨, (ಸಂ) ಡಾ.ಎಫ್.ಟಿ.ಹಳ್ಳಿಕೇರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

* ಶಾಸನಗಳಲ್ಲಿ ಪ್ರಾಚೀನ ಭಾರತೀಯ ವೈದ್ಯಕೀಯ (ಕರ್ನಾಟಕಕ್ಕೆ ಸೀಮಿತವಾಗಿ); ಕೆ.ಜಿ. ವಸಂತ ಮಾಧವ; ಶಾಸನ ಅಧ್ಯಯನ ಸಂಪುಟ ೩, ಸಂಚಿಕೆ ೨, (ಸಂ) ಕೆ.ಜಿ. ಭಟ್‌ಸೂರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ವೈದ್ಯಶಾಸ್ತ್ರ ಕುರಿತು ನಡೆದ ಅಧ್ಯಯನ ಸೂಚಿಗಳನ್ನು ಈ ಕೆಳಗಿನಂತೆ ವಿವರವಾಗಿ ಪರಿಶೀಲಿಸಬಹುದಾಗಿದೆ. "ಕರ್ನಾಟಕ ಆಯುರ್ವೇದ ಇತಿಹಾಸ" ಎಂಬ ಗ್ರಂಥವು ಕೆ.ಆರ್.ಶ್ರೀಕಂಠಮೂರ್ತಿ ಅವರಿಂದ ರಚಿಸಲ್ಪಟ್ಟಿದೆ. ಈ ಕೃತಿಯು ಕರ್ನಾಟಕ ಇತಿಹಾಸದ ಜೊತೆಗೆ ಈ ನಾಡಿನಲ್ಲಿ ಕನ್ನಡಿಗರಿಂದ ರಚನೆಯಾದ ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ರಚನೆಯಾದ ಕೃತಿಗಳು, ಕರ್ತೃವಿನ ಕಾಲಗಳನ್ನು ಗುರುತಿಸುತ್ತ ಕನ್ನಡ ವೈದ್ಯಶಾಸ್ತ್ರದ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಅರಸರು ಆಶ್ರಯ ನೀಡಿದ ವೈದ್ಯರನ್ನು ಹೆಸರಿಸಿದ್ದಾರೆ. ಇವರು ಈ ಕೃತಿ ರಚನೆಗೆ ಆ ಸಂದರ್ಭದಲ್ಲಿ ಲಭ್ಯವಿದ್ದ ಹಸ್ತಪ್ರತಿಗಳನ್ನು ಆಕರವಾಗಿ ಬಳಿಸಿಕೊಂಡು ಕೃತಿಗಳನ್ನು ಪರಿಚಯಿಸಿದ್ದಾರೆ. ಡಾ.ಧನ್ಯಕುಮಾರ ಇಜಾರಿ ಅವರು "ಜೈನ ವೈದ್ಯಕೀಯ ಪರಂಪರೆ" ಗ್ರಂಥದಲ್ಲಿ ಜೈನಾಯುರ್ವೇದದ ಹುಟ್ಟು, ವೈದ್ಯಕೀಯಶಾಸ್ತ್ರಕ್ಕೆ ಜೈನರ ಕೊಡುಗೆ, ಜೈನಾಯುರ್ವೇದದ ವೈಶಿಷ್ಟ್ಯ ಮತ್ತು ಜೈನ ವೈದ್ಯಕೀಯ ಪರಂಪರೆ ಕೊಡುಗೆ ಎನೆಂಬುದನ್ನು ವಿವರಿಸಿದ್ದಾರೆ. ಇದರಲ್ಲಿ 'ಕಲ್ಯಾಣಕಾರಕ' ಮತ್ತು 'ಖಗೇಂದ್ರಮಣಿಮಣಿ ದರ್ಪಣಂ' ಕೃತಿಗಳನ್ನು ಪರಿಚಯಿಸಿದ್ದಾರೆ. ಕನ್ನಡ ವೈದ್ಯಶಾಸ್ತ್ರಕ್ಕೆ ಜೈನರೆ ಬುನಾದಿ ಹಾಕಿದವರು ಎಂಬುದನ್ನು ಪ್ರತಿಪಾದಿಸಿದ್ದಾರೆ. ಜೈನಾಯುರ್ವೇದ ವೈಶಿಷ್ಟ್ಯದಲ್ಲಿ ಅಹಿಂಸೆ, ಸಪ್ತವ್ಯಸನಗಳು, ಸಾತ್ಮ್ಯ ವಿಚಾರ, ಆತ್ಮನ ವಿಚಾರ, ಮರಣ, ಪುನರ್ಜನ್ಮ, ಸಲ್ಲೇಖನ ಕುರಿತು ವಿಶ್ಲೇಷಿಸಿದ್ದಾರೆ. ಹಾಗೂ ಜೈನಧರ್ಮದ ಆಧಾರದ ಮೇಲೆಯೇ ಋತುಚರ್ಯ, ಆಯುರ್ವೇದ ಮೂಲ ಸಿದ್ಧಾಂತಗಳು, ಔಷಧಿ ತಯಾರಿಕೆ, ಚಿಕಿತ್ಸಾ ಮೂಲ ಸೂತ್ರಗಳು ಇತ್ಯಾದಿ ವಿಷಯವನ್ನು ವಿಷದಪಡಿಸಿದ್ದಾರೆ.

"ಚಾವುಂಡರಾಯನ ಲೋಕೋಪಕಾರ ಒಂದು ಅಧ್ಯಯನ" ಕುರಿತು ಡಾ.ಎ.ರಂಗಸ್ವಾಮಿ ಅವರು ಲೋಕೋಪಕಾರ ಗ್ರಂಥದಲ್ಲಿ ವೈದ್ಯಶಾಸ್ತ್ರ ಕುರಿತ ಒಂಬತ್ತನೆಯ ಅಧಿಕಾರ ನರಾದಿವೈದ್ಯ ಪ್ರಕರಣ, ಹತ್ತನೆಯ ಅಧಿಕಾರ ವಿಷವೈದ್ಯ ಪ್ರಕರಣವನ್ನು ಮಾರ್ಮಿಕವಾಗಿ ಚರ್ಚಿಸಿದ್ದಾರೆ. ಇವರು ಚಾವುಂಡರಾಯ ಗುರುತಿಸಿದ ವಿವಿಧ ರೋಗಗಳ ಲಕ್ಷಣ, ಚಿಕಿತ್ಸೋಪಾಯಗಳನ್ನು ಕುರಿತು ಪರಿಚಯಿಸುತ್ತ ಆಧುನಿಕ ವೈದ್ಯ ಪದ್ಧತಿಯೊಂದಿಗೆ ತುಲನೆ ಮಾಡುತ್ತ ಪ್ರಸ್ತುತ ಸಂದರ್ಭಕ್ಕೆ ಯಾವುದು ಉಪಯೋಗ ಯಾವುದು ಅಲ್ಲ ಎಂಬುದನ್ನು ವೈಜ್ಞಾನಿಕ ನೆಲೆಯಲ್ಲಿ ವಿವರಿಸಿದ್ದಾರೆ. ಆಧುನಿಕ ವೈದ್ಯಪದ್ಧತಿಯು ಪಾರಂಪರಿಕ ವೈದ್ಯಶಾಸ್ತ್ರದ ಕೆಲ ಅಂಶಗಳನ್ನು ಈಗಲೂ ಮುಂದುವರಿಸಿಕೊಂಡು ಬರುತ್ತಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಹಾಗೂ ಚಾವುಂಡರಾಯ ಸಂಸ್ಕೃತ ವೈದ್ಯಶಾಸ್ತ್ರಜ್ಞರ ಪ್ರಭಾವಕ್ಕೆ ಒಳಗಾಗದೇ ಸ್ವತಂತ್ರವಾಗಿ ರಚಿಸಿದ್ದಾನೆ. ಅವನು ನಿರೂಪಿಸಿರುವ ಎಲ್ಲ ವೈದ್ಯ ಚಿಕಿತ್ಸಾ ಕ್ರಮಗಳು ಆಯುರ್ವೇದ ಶಾಸ್ತ್ರದ ಸಿದ್ಧಾಂತದ ಮೇಲೆಯೇ ನೆಲೆಗೊಂಡಿವೆ ಎಂಬುದನ್ನು ಬಹುಮುಖ್ಯವಾಗಿ ಪ್ರತಿಪಾದಿಸಿದ್ದಾರೆ. ಡಾ.ಬಿ.ಮಂಜುಳಾ ಅವರು "ಕನ್ನಡದಲ್ಲಿ ಸೂಪಶಾಸ್ತ್ರ ಸಾಹಿತ್ಯ" ಕುರಿತ ಅಧ್ಯಯನದಲ್ಲಿ ಕನ್ನಡ ಕಾವ್ಯೇತರ ಲೌಕಿಕ ಶಾಸ್ತ್ರಗಳ ಪರಿಚಯ ಮಾಡುವ ಸಂದರ್ಭದಲ್ಲಿ ವಿವಿಧ ಶಾಸ್ತ್ರಗಳ ಜೊತೆಗೆ ವೈದ್ಯಶಾಸ್ತ್ರ, ಗೋವೈದ್ಯಶಾಸ್ತ್ರ, ಎಂಬ ಭಾಗದಲ್ಲಿ ಕಲ್ಯಾಣಕಾರಕ,

ಸಕಲವೈದ್ಯಸಂಹಿತಾಸಾರಾರ್ಣವ ಕೃತಿಗಳ ಕುರಿತು ಸಂಕ್ಷಿಪ್ತವಾಗಿ ಮಾಹಿತಿ ನೀಡಿದ್ದಾರೆ. ವಿಷವೈದ್ಯಶಾಸ್ತ್ರದಲ್ಲಿ 'ಖಗೇಂದ್ರಮಣಿದರ್ಪಣಂ' ಕೃತಿಯ ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಗೋವೈದ್ಯಶಾಸ್ತ್ರದಲ್ಲಿ ಕೀರ್ತಿವರ್ಮನ ಗೋವೈದ್ಯ (ಕ್ರಿ.ಶ.೧೧೦೦) ಕೃತಿಯು ಭಾರತೀಯ ವೈದ್ಯಶಾಸ್ತ್ರದಲ್ಲೆ ಪ್ರಾಣಿವೈದ್ಯದಲ್ಲಿ ಗೋವೈದ್ಯವನ್ನು ಕುರಿತ ಮೊದಲ ಕೃತಿ ಎಂದು ತಿಳಿಸಿದ್ದಾರೆ. ಹಾಗೂ ಕರ್ನಾಟಕದ ಹಸ್ತಪ್ರತಿ ಭಂಡಾರಗಳಲ್ಲಿರುವ ಕೆಲ ಹಸ್ತಪ್ರತಿಗಳ ಸೂಚಿಯನ್ನು ನೀಡಿದ್ದಾರೆ. 'ಸೂಪಶಾಸ್ತ್ರದ ವೈಶಿಷ್ಟ್ಯ' ಎಂಬ ಭಾಗದಲ್ಲಿ ವೈದ್ಯಶಾಸ್ತ್ರ ಮತ್ತು ಸೂಪಶಾಸ್ತ್ರದ ಸಂಬಂಧ ಕುರಿತು ವಿಶ್ಲೇಷಿಸಿದ್ದಾರೆ.

"ಕನ್ನಡದಲ್ಲಿ ಅಶ್ವಶಾಸ್ತ್ರ ಸಾಹಿತ್ಯ" ಎಂಬ ವಿಷಯ ಕುರಿತು ಡಾ. ಕಲ್ಲಯ್ಯ ಹಿರೇಮಠ ಅವರು ಅಧ್ಯಯನ ಮಾಡಿದ್ದಾರೆ. ಅವರು ಕೂಡ ಕನ್ನಡ ಕಾವ್ಯೇತರ ಲೌಕಿಕ ಶಾಸ್ತ್ರಗಳ ಪರಿಚಯ ಎಂಬ ಅಧ್ಯಾಯದಲ್ಲಿ ವಿವಿಧ ಶಾಸ್ತ್ರಗಳ ಜೊತೆ ವೈದ್ಯಶಾಸ್ತ್ರ, ಗೋವೈದ್ಯ ಶಾಸ್ತ್ರ, ವಿಷವೈದ್ಯಶಾಸ್ತ್ರಗಳ ಕೃತಿಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಅಶ್ವಶಾಸ್ತ್ರ ಕೃತಿಗಳಲ್ಲಿ ಅಶ್ವವೈದ್ಯಕ್ಕೆ ಸಂಬಂಧಪಟ್ಟ ಅಂಶಗಳಲ್ಲಿ ಅಶ್ವಗಳ ರೋಗ ಲಕ್ಷಣ ಚಿಕಿತ್ಸಾ ವಿಧಿವಿಧಾನಗಳನ್ನು ದೀರ್ಘವಾಗಿ ವಿವರಿಸಿದ್ದಾರೆ.

"ಗ್ರಂಥ ಸಂಪಾದನೆ ಕೆಲವು ಅಧ್ಯಯನಗಳು" ಎಂಬ ಕೃತಿಯಲ್ಲಿ ಡಾ.ವೈ.ಸಿ.ಭಾನುಮತಿ ಅವರು "ಕನ್ನಡದಲ್ಲಿ ಪ್ರಾಚೀನ ಆಯುರ್ವೇದ ಗ್ರಂಥಗಳು" ಎಂಬ ದೀರ್ಘ ಪ್ರಬಂಧವನ್ನು ರಚಿಸಿದ್ದಾರೆ. ಈ ಪ್ರಬಂಧದಲ್ಲಿ ದೇಶಿ ವೈದ್ಯಶಾಸ್ತ್ರದ ಮಹತ್ವ ಅದರ ಪ್ರಾಚೀನತೆಯನ್ನು ವಿವರಿಸಿದ್ದಾರೆ. ಹಾಗು ಪ್ರಸ್ತುತ ಪ್ರಬಂಧದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ ಇರುವ ಸುಮಾರು ೩೨ ಶೀರ್ಷಿಕೆಗಳ ೧೨೨ ಹಸ್ತಪ್ರತಿಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಪ್ರಮುಖ ಕೃತಿಗಳ ವಿಷಯ ವಸ್ತುವನ್ನು ಸ್ವರೂಪ ಮತ್ತು ವೈವಿಧ್ಯತೆಯನ್ನು ವಿವರಿಸಿದ್ದಾರೆ. ಕರ್ನಾಟಕದ ಇತರ ಹಸ್ತಪ್ರತಿ ಭಂಡಾರಗಳಿಗಿಂತ ಈ ಭಂಡಾರದಲ್ಲಿರುವ ವೈದ್ಯಶಾಸ್ತ್ರದ ಪ್ರಮುಖ ಮತ್ತು ಸಮಗ್ರ ಹಸ್ತಪ್ರತಿಗಳನ್ನು ಪರಿಚಯಿಸಿದ್ದು, ವೈದ್ಯಶಾಸ್ತ್ರ ಹಸ್ತಪ್ರತಿಗಳ ಅಧ್ಯಯನಕ್ಕೆ ಪ್ರಮುಖ ಆಕರವಾಗಿದೆ.

ಡಿ.ಎಲ್.ನರಸಿಂಹಾಚಾರ್ ಅವರು "ಪೀಠಿಕೆಗಳು ಲೇಖನಗಳು" ಕೃತಿಯಲ್ಲಿ 'ಸಕಲವೈದ್ಯ ಸಂಹಿತಾಸಾರಾರ್ಣವಂ' ಎಂಬ ಲೇಖನದಲ್ಲಿ ಕಳಲೆಯ ಪ್ರಭು ವೀರರಾಜನು ಕನ್ನಡ ವೈದ್ಯಶಾಸ್ತ್ರ ಗಂಥಗಳಲ್ಲಿ ಮಹದ್ಗ್ರಂಥವಾದ ಸಕಲವೈದ್ಯಸಂಹಿತಾಸಾರಾರ್ಣವಂ ಕೃತಿ ರಚಿಸಿದ್ದಾನೆ. ಈತನ ಕುರಿತಾಗಿ 'ಪಿತಾಮಹನು ಕಳಲೆಯ ಪುರವರಾಧೀಶ್ವರನಾದ ಕಾಂತಯ್ಯ ಪ್ರಭು. ಈತನ ತಂದೆಯು ದಳವಾಯಿ ದೊಡ್ಡರಾಜ; ಹೆಂಡತಿ ಕಾರುಗಹಳ್ಳಿ ಚೆನ್ನಾಜಮ್ಮಣ್ಣಿ ಎಂದು ಸ್ಪಷ್ಟಪಡಿದ್ದಾರೆ. ಈ ಲೇಖನದ ಮುಖ್ಯ ಉದ್ದೇಶ ವೀರರಾಜನ ಕಾಲವನ್ನು ತಿಳಿಯಲು ಅವರ ವಂಶವನ್ನು ಗುರುತಿಸುತ್ತ ಅವರು ಆಳ್ವಿಕೆ ಮಾಡಿದ ಪ್ರದೇಶವನ್ನು ಗುರುತಿಸಿ ವೀರರಾಜನ ಕಾಲ ಸುಮಾರು ೧೭೨೦ ಇರಬಹುದೆಂದು ನಿರ್ಣಯಿಸಲಾಗಿದೆ.

"ಕನ್ನಡ ವೈದ್ಯಕೀಯ ಹಸ್ತಪ್ರತಿಗಳ ಅಧ್ಯಯನದ ಒಂದು ತುರ್ತು" ಎಂಬ ಲೇಖನದಲ್ಲಿ ಡಾ.ಬಿ.ಕೆ.ಹಿರೇಮಠ ಅವರು ವೈದ್ಯಕೀಯಕ್ಕೆ ಸಂಬಂಧಪಟ್ಟ ಹಸ್ತಪ್ರತಿಗಳ ಮಹತ್ವವನ್ನು ವಿವರಿಸಿದ್ದಾರೆ. ಹಾಗೂ ವಿವಿಧ ವೈದ್ಯ ಕೃತಿಗಳ ಹೆಸರುಗಳನ್ನು ಗುರುತಿಸಿ ಅದರಲ್ಲಿರುವ ವಿಷಯವನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಡಾ.ಎಫ್.ಟಿ.ಹಳ್ಳಿಕೆರಿ ಅವರು "ಕನ್ನಡ ವೈದ್ಯ ಹಸ್ತಪ್ರತಿಗಳ ಪ್ರಕಟಣೆಯ ಅವಶ್ಯಕತೆ" ಎಂಬ ಲೇಖನದಲ್ಲಿ ವೈದ್ಯದ ಪ್ರಾಚೀನತೆಯನ್ನು ತಿಳಿಸಿದ್ದಾರೆ. 'ಸಾಹಿತ್ಯ ಸಂಸ್ಕೃತಿಯ ವಾಹಕಗಳಾದ ಹಸ್ತಪ್ರತಿಗಳಲ್ಲಿ ವೈದ್ಯಶಾಸ್ತ್ರ'

ಕೃತಿಗಳು ಲಭ್ಯವಾಗುತ್ತವೆ. ಅವುಗಳು ನಮ್ಮ ನಾಡಿನ ವಿವಿಧ ಪ್ರದೇಶಗಳಲ್ಲಿ ದೊರೆಯುತ್ತವೆ. ಅವುಗಳನ್ನು ಪ್ರಕಟಿಸುವುದು ಅತ್ಯವಶ್ಯಕ' ಎಂದು ಅದರ ಮಹತ್ವವನ್ನು ವಿವರಿಸಿದ್ದಾರೆ. ಹಾಗೂ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳ ಸ್ವರೂಪ, ವಿಷಯ ವೈವಿಧ್ಯ ಮತ್ತು ಬಳಕೆ ವಿಧಾನ ಇತ್ಯಾದಿ ವಿಚಾರಗಳನ್ನು ವಿವೇಚಿಸಿದ್ದಾರೆ. ಡಾ. ಸತ್ಯನಾರಾಯಣ ಭಟ್.ಪಿ.ಅವರು "ವಿಷ ಚಿಕಿತ್ಸೆಯ ಮಹಾತ್ಮ ಮೂರನೆಯ ಮಂಗರಸ" ಎಂಬ ಲೇಖನದಲ್ಲಿ 'ಖಗೇಂದ್ರಮಣಿಮಣಿ ದರ್ಪಣಂ' ಎಂಬ ವಿಷವೈದ್ಯ ಗ್ರಂಥವನ್ನು ಬರೆದ ಮೂರನೆಯ ಮಂಗರಾಜನ ಕಾಲ ಮತ್ತು ಅವನ ಗ್ರಾಮ ಮುಗಳಿಪುರವನ್ನು ಪತ್ತೆ ಹಚ್ಚಿದ್ದಾರೆ. ಈ 'ವಿಷವೈದ್ಯ ಗ್ರಂಥ ರಚನೆಯಾಗಿ ೬೫೦ ವರ್ಷಗಳೇ ಕಳೆದು ಹೋದವು. ಆದರೆ ಗ್ರಂಥದ ವಿಚಾರಗಳು ಇಂದಿಗೂ ಜನಸಮುದಾಯದಲ್ಲಿ ಜೀವಂತ ಕೆಲ ನಿದರ್ಶನಗಳಲ್ಲಿವೆ' ಎಂಬುದನ್ನು ಉದಾಹರಣೆ ಸಹಿತ ಪ್ರತಿಪಾದಿಸಿದ್ದಾರೆ. 'ಖಗೇಂದ್ರಮಣಿಮಣಿ ದರ್ಪಣಂ' ಕೃತಿ ಒಳಗೊಂಡ ವಿಷಯವನ್ನು ಪರಿಚಯಿಸಿದ್ದಾರೆ. "ವೈದ್ಯಶಾಸ್ತ್ರ ಅಧ್ಯಯನ ಸೂಚಿ" ಎಂಬ ಲೇಖನದಲ್ಲಿ ಆಯ್.ಎಸ್.ಹುರಳಿ ಅವರು ಕನ್ನಡ ನಾಡಿನಾದ್ಯಂತ ವೈದ್ಯಶಾಸ್ತ್ರದ ಹಸ್ತಪ್ರತಿಗಳು ಎಲ್ಲೆಲ್ಲಿ ಸಂಗ್ರಹಗೊಂಡಿವೆ. ಯಾವ ಸ್ಥಿತಿಯಲ್ಲಿವೆ ಎಂಬುದನ್ನು ವಿವರಿಸಿದ್ದಾರೆ. ಮತ್ತು ಅವುಗಳ ಮಹತ್ವ ಮತ್ತು ಪರಂಪರೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಜೊತೆಗೆ ಕರ್ನಾಟಕದಲ್ಲಿ ಸೂಚಿಕರಣಗೊಂಡ ವೈದ್ಯಶಾಸ್ತ್ರ ಹಸ್ತಪ್ರತಿಗಳ ಸೂಚಿಯನ್ನು ಕೊಡುವುದರ ಮುಲಕ ಈ ಕುರಿತು ಅಧ್ಯಯನವಾದ ಕೃತಿಗಳು ಲೇಖನಗಳು ಮತ್ತು ಸಂಪಾದಿತ ಕೃತಿಗಳ ಸೂಚಿಯನ್ನು ಕೊಟ್ಟಿದ್ದಾರೆ. ಕೆ.ಜಿ.ವಸಂತ ಮಾಧವ ಅವರು 'ಶಾಸನಗಳಿಂದ ಪ್ರಾಚಿನ ಭಾರತೀಯ ವೈದ್ಯಕೀಯ ಕರ್ನಾಟಕಕ್ಕೆ ಸೀಮಿತವಾಗಿ' ಈ ಲೇಖನದಲ್ಲಿ ಭಾರತೀಯ ವೈದ್ಯಕೀಯ ಶಾಸ್ತ್ರದ ಮಹತ್ವ ಅದರ ಉದ್ದೇಶವನ್ನು ವಿವರಿಸಿದ್ದಾರೆ. ಸಿಂಧೂ ನದಿಯ ಕಣಿವೆಯ ಸ್ಮಾರಕ ಉಲ್ಲೇಖ, ಅಶೋಕನ ಶಾಸನದಲ್ಲಿ ಆಸ್ಪತ್ರೆ, ಔಷಧಿಯ ರಫ್ತು, ಆಮದು ಅವುಗಳ ರಕ್ಷಣೆ ಕುರಿತ ವಿಷಯವನ್ನು ವಿವರಿಸಿದ್ದಾರೆ. ಕರ್ನಾಟಕದ ಶಾಸನಗಳಲ್ಲಿ 'ಬೈಷಜ್ಯ' ಬೈಷಜ್ಯಸ್ಥಾನ, ವೈದ್ಯರ ಹೆಸರು, ಶಿಷ್ಯವರ್ಗ, ವೈದ್ಯರಿಗೆ ದಾನಕೊಟ್ಟ ವಿವರವನ್ನು ಪ್ರತಿಪಾದಿಸುತ್ತವೆ ಎಂದಿದ್ದಾರೆ. ಕ್ರಿ.ಶ.೧೨೮೭ರ ಮೊಸಳೆ ಶಾಸನ, ಕೆಂಬಾಟಿಯ ಶಾಸನ, ಮುದಗೋಡ ಶಾಸನ, ಗೋವಿನಹಳ್ಳಿ ಶಾಸನ, ಶ್ರವಣಬೆಳಗೋಳ, ಬೀಳಗಿ ಶಾಸನಗಳು ವೈದ್ಯಕೀಯ ಕುರಿತು ಒಳಗೊಂಡ ವಿಷಯವನ್ನು ಒಳಗೊಂಡಿವೆ.

ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳ ಕುರಿತು ಮೊಟ್ಟ ಮೊದಲು ಅಧ್ಯಯನ ಮಾಡಿದ್ದು ಕವಿಚರಿತೆಕಾರರು. ಅವರು ಇಡೀ ಕನ್ನಡ ಸಾಹಿತ್ಯವನ್ನು ಮೊದಲು ಪರಿಚಯಿಸಿದವರು. ಮೂರು ಸಂಪುಟಗಳಲ್ಲಿ ಪ್ರಕಟಿತವಾದ ಕರ್ನಾಟಕ ಕವಿಚರಿತೆ ಸಂಪುಟಗಳಲ್ಲಿ ಅವುಗಳ ರಚನಾ ಕಾಲಕ್ಕೆ ಕವಿಚರಿತೆಕಾರರಿಗೆ ಲಭ್ಯವಾದ ಹಸ್ತಪ್ರತಿಗಳ ಸಹಾಯದಿಂದ ಮೂರು ಸಂಪುಟಗಳಲ್ಲಿಯೂ ಕನ್ನಡ ವೈದ್ಯಶಾಸ್ತ್ರ ಕೃತಿಗಳ ಪರಿಚಯ ಮಾಡಿದ್ದಾರೆ. ಹಾಗೂ ಕನ್ನಡ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ, ಶ್ರವಣಬೆಳಗೊಳ, ಧರ್ಮಸ್ಥಳ, ಸಾಹಿತ್ಯ ಪರಿಷತ್ತು ಬೆಂಗಳೂರು ಮುಂತಾದ ಸ್ಥಳಗಳ ಹಸ್ತಪ್ರತಿ ಭಂಡಾರಗಳಲ್ಲಿರುವ ವೈದ್ಯಶಾಸ್ತ್ರ ಹಸ್ತಪ್ರತಿಗಳನ್ನು ಆಯಾ ಸಂಸ್ಥೆಯವರು ಪ್ರಕಟಿಸಿದ ವಿವರಣಾತ್ಮಕ ಹಸ್ತಪ್ರತಿ ಸೂಚಿಗಳಲ್ಲಿ ವೈದ್ಯಶಾಸ್ತ್ರ ಕೃತಿಗಳ ಆದಿ-ಅಂತ್ಯಗಳನ್ನು ಬರೆಯುವುದರ ಮೂಲಕ ಪರಿಚಯಿಸಿದ್ದಾರೆ. ಇಷ್ಟು ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳ ಕುರಿತ ಅಧ್ಯಯನ.

ಒಟ್ಟಾರೆ ಇದುವರೆಗಿನ ಅಧ್ಯಯನಗಳು ಪರಂಪರೆಯನ್ನು ಕಟ್ಟುವ ಹಾಗೂ ಹಸ್ತಪ್ರತಿಗಳಲ್ಲಿರುವ ವೈದ್ಯಶಾಸ್ತ್ರವನ್ನು ಪರಿಚಯಿಸುವ ಮೂಲಕ ಸಂಪಾದನೆಯ ತುರ್ತನ್ನು ಹೇಳುತ್ತವೆ. ನಮ್ಮ ದೇಶಿ ವೈದ್ಯಶಾಸ್ತ್ರವು ಅನುಭವಜನ್ಯವಾಗಿದ್ದು ಪ್ರಯೋಗದ ಮೂಲಕ ಬೆಳೆಯುತ್ತಾ ಬಂದಿದೆ. ಅದು ಸದಾ ಚಲನಶೀಲತೆಯುಳ್ಳದ್ದು. ಅದನ್ನು ಜನಸಾಮಾನ್ಯರು ತಮ್ಮ ಅನುಭವ ಮತ್ತು ಅವಶ್ಯಕತೆಗೆ ತಕ್ಕಂತೆ ಮಾರ್ಪಡಿಸುವ ಮೂಲಕ ಬಳಸಿಕೊಳ್ಳುತ್ತಿದ್ದರು. ಅದನ್ನು ಮೊದಲು ಸಂಸ್ಕೃತದಲ್ಲಿ ಶಾಸ್ತ್ರಬದ್ಧವಾಗಿ ಸಂಪೂರ್ಣ ಸಾಂಪ್ರದಾಯಿಕ ನೆಲೆಯಲ್ಲಿ ಕಟ್ಟುವ ಮೂಲಕ ಜನರಿಂದ ದೂರ ಉಳಿಯುವಂತೆ ಮಾಡಲಾಯಿತು. ಆ ಕುರಿತು ಅಧ್ಯಯನಗಳು ನಡೆದಿಲ್ಲ. ಹಾಗೂ ಧನ್ಯಕುಮಾರ ಇಜಾರಿ ಅವರು ಜೈನ ವೈದ್ಯಕೀಯ ಪರಂಪರೆಯನ್ನು ಕಟ್ಟುವ ಮೂಲಕ ಚಲನಶೀಲತೆಯುಳ್ಳ ಸಾರ್ವತ್ರಿಕವಾದ ಈ ವೈದ್ಯಶಾಸ್ತ್ರವು ಶಾಸ್ತ್ರರೂಪ ಪಡೆದದ್ದು ಮೊದಲ ಹಂತ. ಇಂಥ ಚಲನಶೀಲ ಶಾಸ್ತ್ರಕ್ಕೆ ಮತೀಯ ಚೌಕಟ್ಟು ಹಾಕುವ ಪ್ರಯತ್ನ ಮಾಡುವುದು ಉತ್ತಮವಲ್ಲ. ದೇಶಿ ವೈದ್ಯ ಸಂಪತ್ತು ಜನಸಾಮಾನ್ಯರ ಬದುಕಿನ ಭಾಗವಾಗಿ ಪ್ರತಿಯೊಬ್ಬರ ಸ್ವತ್ತಾಗಿ ಬೆಳೆದಿರುವಂಥದ್ದು. ಈ ರೀತಿ ಮತೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದಾಗ ಅದರ ಚಲನಶೀಲತೆಗೆ ಅಡ್ಡಗೋಡೆ ಕಟ್ಟಿದಂತಾಗುತ್ತದೆ.

ಇದುವರೆಗಿನ ಅಧ್ಯಯನಕಾರರು ಈ ದೇಶಿ ವೈದ್ಯಪದ್ಧತಿಯ ಹಿಂದಿನ ಸಾಂಸ್ಕೃತಿಕ ಮನೋಭಾವವನ್ನು ಅಧ್ಯಯನ ಮಾಡದೆ ಕೇವಲ ಸಾಹಿತ್ಯದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ನಮ್ಮ ವೈದ್ಯಶಾಸ್ತ್ರ ಸಂಪತ್ತು ತೀರ ಸಾಂಪ್ರದಾಯಿಕ ಮಡಿವಂತಿಕೆಯ ಹಿನ್ನೆಲೆಯಿಂದ ಬೆಳೆದುದಲ್ಲ. ಅದಕ್ಕೆ ಶಾಸ್ತ್ರಜ್ಞರು ಬಲವಂತವಾಗಿ ಈ ನಿಯಮಗಳನ್ನು ಅಳವಡಿಸಿದ್ದಾರೆ. ಅಂತ ಒಳಸೂಕ್ಷ್ಮಗಳನ್ನು ಹೆಕ್ಕಿ ತೆಗೆಯಬೇಕಿದೆ. ಅಲ್ಲದೆ ಇದುವರೆಗಿನ ಅಧ್ಯಯನಗಳು ಅಕಾಡೆಮಿಕ್ಕಾಗಿ ಬಂದಿಲ್ಲ. ಈ ಎಲ್ಲವುಗಳ ಕೊರತೆಯನ್ನು ತುಂಬುವ ಪ್ರಯತ್ನ ಮಾಡಬೇಕಿದೆ. ಹಾಗೂ ಕನ್ನಡದಲ್ಲಿ ಇಷ್ಟು ವೈವಿಧ್ಯಮಯ ಕೃತಿಗಳು ರಚನೆಯಾದ ಅವಶ್ಯಕತೆ ಏನು? ಅದರ ಹಿಂದಿನ ಉದ್ದೇಶ ಯಾವ ತೆರನಾದದ್ದು ಎಂಬುದನ್ನು ವಿಶ್ಲೇಷಿಸಬೇಕಾಗಿದೆ. ಆ ಕಾರಣದಿಂದಾಗಿ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿರುವ ಸಾಂಪ್ರದಾಯಿಕ, ಪಾರಂಪರಿಕ, ಸಾಮಾಜಿಕ, ಸಾಂಸ್ಕೃತಿಕ ಇತ್ಯಾದಿ ಒಳಸೂಕ್ಷ್ಮಗಳನ್ನು ಕುರಿತ ಅಧ್ಯಯನ ನನ್ನದಾಗಿದೆ.

ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳು ಮನುಷ್ಯನ ಆಯುರಾರೋಗ್ಯವನ್ನು ಕಾಪಾಡಲು ಹಂಬಲಿಸುತ್ತವೆ. ಆದ್ದರಿಂದ ಇಂಥ ಹಸ್ತಪ್ರತಿಗಳ ಕುರಿತು ಸಮಗ್ರ ಅಧ್ಯಯನ ನಡೆಯಬೇಕಿದೆ. ಕನ್ನಡ ನಾಡಿನ ವಿವಿಧ ಹಸ್ತಪ್ರತಿ ಭಂಡಾರಗಳಲ್ಲಿ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಹಸ್ತಪ್ರತಿ ಎಷ್ಟಿವೆ? ಯಾವ ತೆರನಾದ ವೈವಿಧ್ಯಮಯ ವಿಷಯ ವಸ್ತುವನ್ನು ಗರ್ಭೀಕರಿಸಿಕೊಂಡಿವೆ? ಎಂಬುದನ್ನು ಹೊರತೆಗೆಯಬೇಕಾಗಿದೆ. ಕನ್ನಡ ಸಾಹಿತ್ಯದಲ್ಲಿ ಕವಿಗಳು, ವಚನಕಾರರು, ಕೀರ್ತನಕಾರರು, ಶಾಸ್ತ್ರಜ್ಞರು ಸಾಂದರ್ಭಿಕವಾಗಿ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ ವೈದ್ಯಕೀಯ ವಿಷಯವನ್ನು ವಿಶ್ಲೇಷಿಸಬೇಕಿದೆ. ಪರಂಪರೆಯಿಂದ ಬಂದ ನಮ್ಮ ದೇಶಿ ವೈದ್ಯಪದ್ಧತಿ ಆ ಕಾಲದ ರೋಗ–ಲಕ್ಷಣ–ಚಿಕಿತ್ಸಾ ವಿಧಿವಿಧಾನಗಳನ್ನು ಪರಿಚಯಿಸಬೇಕಿದೆ. ಹಾಗೂ ಆಧುನಿಕ ವೈದ್ಯ ಪದ್ಧತಿಗಳ ಮೇಲೆ ನಮ್ಮ ಪಾರಂಪರಿಕ ವೈದ್ಯಪದ್ಧತಿಯು ಯಾವ ರೀತಿ ಪ್ರಭಾವ ಮತ್ತು ಪ್ರೇರಣೆ ಬೀರಿದೆ ಎಂಬುದನ್ನು ವಿವೇಚಿಸಬೇಕಿದೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಈ ಅಧ್ಯಯನ ಮಾಡಲಾಗಿದೆ.

### ಅಡಿಟಿಪ್ಪಣಿಗಳು

೧. ಸಕಲವೈದ್ಯ ಸಂಹಿತಾಸಾರಾರ್ಣವ ಭಾಗ–೨; ೧೯೮೪, (ಸಂ) ಬಿ.ಎಸ್.ಸಣ್ಣಯ್ಯ, ಮುನ್ನುಡಿ

೨. ಆಯುರ್ವೇದ ದರ್ಶನ; ೧೯೯೮, ಡಾ.ಹೊ.ನಾಗರತ್ನಮ್ಮ, ಪು.೮,

❑❑❑

ಅಧ್ಯಾಯ ಎರಡು

# ಕನ್ನಡ ವೈದ್ಯಶಾಸ್ತ್ರದ ಹಸ್ತಪ್ರತಿಗಳು : ಸ್ವರೂಪ ಮತ್ತು ವೈವಿಧ್ಯ

೨.೧. ವೈದ್ಯಶಾಸ್ತ್ರದ ಹಸ್ತಪ್ರತಿಗಳು

೨.೨. ಪ್ರಕಟಿತ ಮತ್ತು ಅಪ್ರಕಟಿತ ವೈದ್ಯಶಾಸ್ತ್ರದ ಹಸ್ತಪ್ರತಿಗಳ ಸ್ವರೂಪ ಮತ್ತು ವೈವಿಧ್ಯ

೨.೨.೧. ಪ್ರಕಟಿತ ಹಸ್ತಪ್ರತಿಗಳು

೨.೨.೨. ಅಪ್ರಕಟಿತ ಹಸ್ತಪ್ರತಿಗಳು

೨

# ಕನ್ನಡ ವೈದ್ಯಶಾಸ್ತ್ರದ ಹಸ್ತಪ್ರತಿಗಳು : ಸ್ವರೂಪ ಮತ್ತು ವೈವಿಧ್ಯ

ಆಧುನಿಕಪೂರ್ವ ಕರ್ನಾಟಕದ ಸಾಹಿತ್ಯ ಸಾಂಸ್ಕೃತಿಕ ಸಂಗತಿಗಳನ್ನು ತಿಳಿದುಕೊಳ್ಳುವಲ್ಲಿ ಹಲವಾರು ಆಕರಗಳು ನೆರವಾಗುತ್ತವೆ. ಅಂತವುಗಳಲ್ಲಿ ಭಾಷಾಸಾಮಗ್ರಿಗಳಾದ ಹಸ್ತಪ್ರತಿಗಳು ಪ್ರಮುಖವಾದವುಗಳಾಗಿವೆ. ಇವುಗಳು ನಾಡಿನ ಸಾಹಿತ್ಯ ಸಂಸ್ಕೃತಿಯ ಸೃಷ್ಟಿಶೀಲ ಉತ್ಪನ್ನಗಳಾಗಿ ಹಾಗೂ ಸೃಜನಶೀಲ ವಿಸ್ತರಣೆಗಳಾಗಿ ನಾಡಿನ ಮೂಲೆ ಮೂಲೆಗಳಲ್ಲಿ ಹರಡಿವೆ. “ಕನ್ನಡ ನಾಡಿನ ಜನತೆ ಬರೆಯಿಸುವುದರ ಮೂಲಕ ಪೋಷಕರಾಗಿ ಬರೆಯುವುದರ ಮೂಲಕ ಬರೆಪಕಾರರಾಗಿ ಹಸ್ತಪ್ರತಿ ನಿರ್ಮಾಣ ಕಾರ್ಯವನ್ನು ಜೀವಂತವಾಗಿಟ್ಟು ನಮ್ಮ ನಾಡನ್ನು ಅಪಾರವಾದ ಹಸ್ತಪ್ರತಿ ಭಂಡಾರವನ್ನಾಗಿಸಿದ್ದಾರೆ”[೧]. ಈ ಭಂಡಾರದಲ್ಲಿರುವ ಹಸ್ತಪ್ರತಿಗಳು ಸಾಹಿತ್ಯ ಸಂಸ್ಕೃತಿಯ ಮೂರ್ತ ಪ್ರತಿಬಿಂಬಗಳಾಗಿ ಸಂಯೋಜಿತ ಜ್ಞಾನಪರಂಪರೆಯೊಂದರ ಫಲಿತಗಳಾಗಿ ಇವು ಅನೇಕ ಅನುಭವಗಳ ಲೋಕಗ್ರಹಿಕೆಗಳ ಸಮ್ಮಿಳನವನ್ನೊಳಗೊಂಡ ಚಲನಶೀಲ ಪಠ್ಯಗಳಾಗಿವೆ.

ಪ್ರಾಚೀನ ಕರ್ನಾಟಕದ ಮಠ, ಸಾಲೀಮಠ, ಓಲೆಮಠ, ಮಂದಿರ, ಬಸದಿ, ಭವನ, ಛತ್ರ, ಮಹಾಮನೆ, ಅರಮನೆಗಳಲ್ಲಿ ಜ್ಞಾನದಾಸೋಹವು ಅನುದಿನವೂ ನಡೆಯುತ್ತಿತ್ತು. ಇದರ ಪ್ರತಿಫಲವಾಗಿ ಗ್ರಂಥದಾನ ಮಾಡುವುದು ಅನ್ನದಾನ, ಅಭಯದಾನ, ಬೈಷಜ್ಯದಾನಗಳಂತೆ ಒಂದು ಪುಣ್ಯಕಾರ್ಯ ಎಂಬ ನಂಬಿಕೆ ನಮ್ಮ ಪೂರ್ವಜರಲ್ಲಿ ರೂಢಮೂಲವಾಗಿದ್ದಿತು. ತಮಗೆ ಪ್ರಿಯವೆನಿಸಿದ ಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಆದ್ದರಿಂದ ಹಸ್ತಪ್ರತಿಗಳ ಸಂಖ್ಯೆ ಹೆಚ್ಚಲು ಕಾರಣವಾಗಿತ್ತು. ಅವುಗಳನ್ನು ಅನನ್ಯ ಶ್ರದ್ಧೆಯಿಂದ ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಹಸ್ತಪ್ರತಿಗಳು ನಮ್ಮ ಸಂಪತ್ತಾಗಿ ಉಳಿದಿವೆ. “ಇಂಥ ಹಸ್ತಪ್ರತಿಗಳು ಅರಸರ ‘ಸಪ್ತಸಂತಾನ’ದ ಕರ್ತವ್ಯಗಳಲ್ಲಿ ಒಂದೆಂದೋ, ಶಾಸ್ತ್ರದಾನ, ಗ್ರಂಥಪ್ರತಿಷ್ಠೆಯ ಪುಣ್ಯ ಪ್ರತೀಕವೆಂದೋ, ಧರ್ಮಪೀಠಾರೋಹಣ ಪ್ರಸಂಗದ ಜ್ಞಾನದುಡುಗೊರೆಗಳೆಂದೋ ಭಾವಿಸಿ ಇಂದಿನವರೆಗೂ ಕನ್ನಡಿಗರು ಅವುಗಳನ್ನು ಪೂಜ್ಯಭಾವನೆಯಿಂದ ರಕ್ಷಿಸಿಕೊಂಡು ಬಂದಿದ್ದಾರೆ”[೨]. ಇವುಗಳು ವ್ಯಕ್ತಿಯಿಂದ ವ್ಯಕ್ತಿಗೆ, ಜನಾಂಗದಿಂದ ಜನಾಂಗಕ್ಕೆ, ತಲೆಮಾರಿನಿಂದ

ತಲೆಮಾರಿಗೆ ಬಳುವಳಿಯಾಗಿ ಧರ್ಮದತ್ತಿಯಾಗಿ ಉಳಿದುಕೊಂಡು ಬಂದಿವೆ. ಇತ್ತೀಚಿಗೆ ಅಳಿವಿನತ್ತ ಸಾಗಿವೆ. ಕಾರಣ ಈಚೆಗೆ ಪಾಶ್ಚಾತ್ಯ ಸಂಸ್ಕೃತಿಯ ದಟ್ಟನೆರಳು ನಮ್ಮ ಸಂಸ್ಕೃತಿಯ ಮೇಲೆ ಹರಡುತ್ತಿದ್ದಂತೆ, ನಮ್ಮ ಪೂರ್ವಿಕರು ಸಂಗ್ರಹಿಸಿಟ್ಟಿದ್ದ ಹಸ್ತಪ್ರತಿಗಳನ್ನು ವಿಶೇಷ ಕಾಳಜಿ ವಹಿಸಿ ಕಾಪಾಡಿಕೊಳ್ಳುವುದು ವ್ಯರ್ಥಶ್ರಮವೆಂದು ಭಾವಿಸಿದ ಮಠಮಾನ್ಯ–ಮನೆತನಗಳ ಒಡೆಯರು ಹಸ್ತಪ್ರತಿ ಸಂಪತ್ತನ್ನು ಅಟ್ಟಕ್ಕೆ ಏರಿಸಿದ ಉದಾಹರಣೆಗಳುಂಟು. ಈ ಕಾರಣದಿಂದಾಗಿ ಸಾವಿರಾರು ಹಸ್ತಪ್ರತಿಗಳು ಸರಿಯಾಗಿ ನೋಡಿಕೊಳ್ಳುವವರಿಲ್ಲದೆ ಕಾಲಕಾಲಕ್ಕೆ ಉಪಚಾರ ಮಾಡುವುರಿಲ್ಲದೆ ಕ್ರಿಮಿಕೀಟಗಳ ಪಾಲೋ, ಇಲಿ ಹೆಗ್ಗಣಗಳ ಪಾಲೋ, ಗೆದ್ದಲುಗಳ ಪಾಲೋ ಆಗಿರುವುದುಂಟು. ಅಲ್ಲದೆ ಜನರ ಅಜ್ಞಾನ, ಅವಜ್ಞತೆ, ಮೂಢನಂಬಿಕೆಗಳೂ ಇವುಗಳ ನಾಶಕ್ಕೆ ಕಾರಣವಾಗಿರುವುದಲ್ಲದೆ ಬೆಂಕಿ, ನೀರು, ನೆರೆ, ಪರಕೀಯರದಾಳಿ, ಅನ್ಯಮತೀಯ ದ್ವೇಷಾಸೂಯೆಗಳು ಸಹಸ್ರಾರು ಗ್ರಂಥಗಳನ್ನು, ಹಸ್ತಪ್ರತಿ ಭಂಡಾರಗಳನ್ನು ನಾಶಪಡಿಸಿದವು. ಈ ಕುರಿತು ರೈಸ್ ಹೀಗೆ ಹೇಳುತ್ತಾರೆ. "ಮೈಸೂರಿನ ಅರಸ ಚಿಕ್ಕ ದೇವರಾಜ (೧೬೭೨–೧೭೦೪) ಆಳುತ್ತಿರುವಾಗ ತನ್ನ ರಾಜ್ಯದಲ್ಲಿದ್ದ ಶಾಸನಗಳ ಯಾದಿ ಮತ್ತು ಅವುಗಳ ಪ್ರತಿಗಳನ್ನು ಮಾಡಿಸಿಟ್ಟಿದ್ದನು. ಈತನ ಉದ್ದೇಶ ದೇವಾಲಯಗಳಿಗಾಗಿ ಬಿಟ್ಟ ದತ್ತಿಗಳನ್ನು ಪರಿಶೀಲಿಸುವುದಾಗಿತ್ತು. ಆದರೆ ಅರಸೊತ್ತಿಗೆಯು ಹೈದರಾಲಿ ಮತ್ತು ಆತನ ಪುತ್ರ ಟೀಪುಸುಲ್ತಾನರ ವಶಕ್ಕೆ ಹೋದಾಗ ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಟೀಪುಸುಲ್ತಾನನ ಆಜ್ಞೆಯ ಮೇರೆಗೆ ಅರಮನೆ ಗ್ರಂಥಾಲಯದ ಗ್ರಂಥಗಳ ಜೊತೆಗೆ ಶಾಸನಗಳನ್ನು, ಯಾದಿಯನ್ನೂ ಕುದರೆಗಳಿಗೆ ಕಾಳನ್ನು ಬೇಯಿಸಲು ಒಲೆಗೆ ಹಾಕಿ ಉರಿಸಲಾಯಿತು"[೩]. ಹಾಗೂ ಝಾನ್ಸಿರಾಣಿ ಲಕ್ಷ್ಮೀಬಾಯಿಯ ಕಾಲದಲ್ಲಿ ಬಹುದೊಡ್ಡ ಗ್ರಂಥಾಲಯಕ್ಕೆ ಬೆಂಕಿ ಬಿದ್ದು ಸುಟ್ಟು ಹೋಗಿವೆಯೆಂದು ಇತಿಹಾಸ ಹೇಳುತ್ತದೆ. ಹೀಗೆ ಎಷ್ಟೋ ಗ್ರಂಥಾಲಯಗಳು ನೆಲಸಮವಾಗಿವೆಯೋ? ಅವುಗಳಲ್ಲಿ ಎಂಥ ಅಮೂಲ್ಯ ಗ್ರಂಥಗಳಿದ್ದವೊ ಯಾರಿಗೆ ಗೊತ್ತು? ಹೀಗೆ ದಿನದಿಂದ ದಿನಕ್ಕೆ ಹುತ್ತಗಟ್ಟುತ್ತ ಬಂದ ಅಲಕ್ಷ್ಯದ ಗೆದ್ದಲು ಬಹಳಷ್ಟು ಹಸ್ತಪ್ರತಿಗಳನ್ನು ತಿಂದು ತೇಗಿದೆ; ತೇಗುತ್ತಲಿದೆ. ಇಂಥ ಪರಿಸ್ಥಿತಿಯನ್ನು ಹತೋಟಿಗೆ ತರಲು ಕೆಲವು ವಿಶ್ವವಿದ್ಯಾಲಯಗಳು ಮಠಮಾನ್ಯಗಳು, ಖಾಸಗಿ ಸಂಸ್ಥೆಗಳು, ಆಸಕ್ತ ವಿದ್ವಾಂಸರು ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಾಧ್ಯವಾದಷ್ಟು ಜಾಗರೂಕತೆಯಿಂದ ಕಾಪಾಡಿಕೊಂಡು ಬಂದಿದ್ದಾರೆ.

ಸಾಹಿತ್ಯ ಸಂಸ್ಕೃತಿಯ ವಾಹಕಗಳಾದ ತಾಳೆಗರಿ, ಕೋರಿಕಾಗದ, ಕಡತರೂಪದ ಹಸ್ತಪ್ರತಿಗಳಲ್ಲಿ ವೈವಿಧ್ಯಮಯವಾದ ವಿಷಯಗಳನ್ನೊಳಗೊಂಡ ಕೃತಿಗಳು ಅಡಕಗೊಂಡಿವೆ. ಇವುಗಳಲ್ಲಿ ಮಾನವನ ಲೌಕಿಕ ಬದುಕಿಗೆ ಅತ್ಯವಶ್ಯಕವಾದ ಲೌಖಿಕಶಾಸ್ತ್ರ ಗ್ರಂಥಗಳೂ ಇವೆ. ಅವುಗಳಲ್ಲಿ ವೈದ್ಯಶಾಸ್ತ್ರ, ಸೂಪಶಾಸ್ತ್ರ, ಗೃಹಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ, ರಟ್ಟಮತಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ನೀತಿಶಾಸ್ತ್ರ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳು ನಮ್ಮಲ್ಲಿ ಹೇರಳವಾಗಿ ದೊರೆಯುತ್ತವೆ. ಅವುಗಳಲ್ಲಿ ಮಾನವ ಮತ್ತು ಪ್ರಾಣಿಗಳ ಸ್ವಾಸ್ಥ್ಯಕ್ಕೆ ಸಂಬಂಧಿಸಿದ ಅತ್ಯಮೂಲ್ಯವಾದ ವೈದ್ಯಶಾಸ್ತ್ರದ ಹಸ್ತಪ್ರತಿಗಳು ತುಂಬ ಕುತೂಹಲವನ್ನು ಹುಟ್ಟಿಸುತ್ತವೆ. ಭಾರತದೇಶ ಇಡೀ ಪ್ರಪಂಚಕ್ಕೆ ವೈದ್ಯಶಾಸ್ತ್ರದ ಪ್ರಾಚೀನತೆಯಲ್ಲಿ ವಿಶೇಷಸ್ಥಾನ ಪಡೆದಿದೆ. ಮೂಲ ದೇಶೀಯ ವೈದ್ಯಗ್ರಂಥಗಳು ಸಂಸ್ಕೃತ ಭಾಷೆಯಲ್ಲಿ ರಚನೆಯಾಗಿದ್ದರೂ, ಹಲವಾರು ವರ್ಷಗಳಿಂದ ನಮ್ಮ ಪೂರ್ವಿಕರು ತಮ್ಮ ಪ್ರಾದೇಶಿಕ ಭಾಷೆಗಳಲ್ಲಿ ರಚನೆಮಾಡಿ ಅಧ್ಯಯನಕ್ಕೆ ಸುಲಭಮಾರ್ಗ ಮಾಡಿಕೊಟ್ಟಿದ್ದಾರೆ. ಕನ್ನಡ ಭಾಷೆಯಲ್ಲಿ ರಚನೆಯಾದ ವೈದ್ಯಶಾಸ್ತ್ರ ಹಸ್ತಪ್ರತಿಗಳು ಭಂಡಾರಗಳಲ್ಲಿ ಸಂಗ್ರಹಗೊಂಡಿವೆ. ಕೆಲವು ವೈಯಕ್ತಿಕ ಮನೆತನಗಳಲ್ಲಿಯೂ

ಉಳಿದುಕೊಂಡಿವೆ. ಸಾಹಿತ್ಯ ಹಾಗೂ ಶಾಸನ ಪ್ರಕಟಣೆಗೆ ಕೊಟ್ಟಷ್ಟು ಮಹತ್ವವನ್ನು ವೈದ್ಯಶಾಸ್ತ್ರ ಹಸ್ತಪ್ರತಿಗಳ ಅಧ್ಯಯನದಲ್ಲಿ ವಿದ್ವಾಂಸರು ಕೊಟ್ಟಿಲ್ಲ. ನೂರಾರು ಪಂಡಿತರ ವಂಶಸ್ಥರು ತಮ್ಮ ಮನೆಯಲ್ಲಿ ಇದ್ದ ಓಲೆಗರಿ ಕಾಗದದ ಹಸ್ತಪ್ರತಿಗಳನ್ನು ಸರಿಯಾಗಿ ರಕ್ಷಿಸದ ಕಾರಣ ಇದ್ದಲ್ಲೇ ನಾಶವಾಗಿ ಹೋಗಿವೆ. ಈ ಎಲ್ಲದರ ಜೊತೆ ದೇಶೀಯ ವೈದ್ಯಪದ್ಧತಿಯನ್ನು ಬಳಸದೆ ಬೇರೆ (ಪಾಶ್ಚಾತ್ಯ) ವೈದ್ಯಪದ್ಧತಿಯನ್ನು ಬಳಸುವುದರಿಂದ ದೇಶೀಯ ವೈದ್ಯಶಾಸ್ತ್ರದ ಬೆಳವಣಿಗೆ ಬದಲು ತನ್ನ ನೆಲದಲ್ಲೆ ಅತಂತ್ರ ಸ್ಥಿತಿಯನ್ನು ತಲುಪಿತು.

## ೨.೧. ವೈದ್ಯಶಾಸ್ತ್ರ ಹಸ್ತಪ್ರತಿಗಳು

ಕನ್ನಡದಲ್ಲಿ ವೈದ್ಯಶಾಸ್ತ್ರಕ್ಕೆ ಸಂಬಂಧಪಟ್ಟಂತೆ ರಚನೆಗೊಂಡ ಕೃತಿಗಳಲ್ಲಿ: ಕರ್ನಾಟಕ ಕಲ್ಯಾಣಕಾರಕ, ವೈದ್ಯಸಾರ ಸಂಗ್ರಹ, ವೈದ್ಯಾಮೃತ, ಸಕಲವೈದ್ಯ ಸಂಹಿತಾಸಾರಾರ್ಣವ, ಗೋವೈದ್ಯ, ವೈದ್ಯಕಂದ, ಖಗೇಂದ್ರಮಣಿಮಣಿದರ್ಪಣ, ವೈದ್ಯಸಾಂಗತ್ಯ, ವೈದ್ಯನಿಘಂಟು (ಅಕಾರಾದಿ ನಿಘಂಟು), ಸ್ತ್ರೀವೈದ್ಯ, ಅಶ್ವವೈದ್ಯ, ಗಜವೈದ್ಯ, ಬಾಲಗ್ರಹ ಚಿಕಿತ್ಸೆ, ಆರೋಗ್ಯ ಚಿಂತಾಮಣಿ, ವೈದ್ಯಾಮೃತಚಿಂತಾಮಣಿ, ಆರೋಗ್ಯಾಮೃತ, ವೈದ್ಯಶಾಸ್ತ್ರ, ವೈದ್ಯಗ್ರಂಥ, ಆಯುರ್ವೇದ ಇತ್ಯಾದಿ ಹೆಸರಿನ ನೂರಾರು ಹಸ್ತಪ್ರತಿ ಕಟ್ಟುಗಳು ನಾಡಿನ ಹಾಗೂ ಹೊರನಾಡಿನ ಹಸ್ತಪ್ರತಿ ಭಂಡಾರಗಳಲ್ಲಿವೆ. ಅವುಗಳಲ್ಲಿ ಕೆಲವು ಸೂಚೀಕರಣಗೊಂಡಿವೆ, ಕೆಲವು ಸೂಚೀಕರಣಗೊಂಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯ ಮತ್ತು ಹಸ್ತಪ್ರತಿ ಸೂಚಿ ಸಂಪುಟಗಳ ಸಹಾಯದಿಂದ ಗಮನಿಸಿದ ಪ್ರಕಟಿತ ಮತ್ತು ಅಪ್ರಕಟಿತ ವೈದ್ಯಶಾಸ್ತ್ರ ಹಸ್ತಪ್ರತಿಗಳ ಅವಲೋಕನ ಇಲ್ಲಿದೆ.

### ಲಭ್ಯವಾದ ವೈದ್ಯಶಾಸ್ತ್ರ ಹಸ್ತಪ್ರತಿಗಳು

| ಕ್ರ.ಸಂ. | ಕೃತಿಯ ಹೆಸರು | ಹಸ್ತಪ್ರತಿ ಸಂಖ್ಯೆ | ಕವಿ | ಪ್ರಕಾರ | ಸಮಗ್ರ/ ಅಸಮಗ್ರ | ಪ್ರತಿ ಇರುವ ಸ್ಥಳ |
|---|---|---|---|---|---|---|
| ೧. | ಅನುಭವ ವೈದ್ಯ | ತಾ.ಪ್ರ.೨೩೪ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨. | ಅಕಾರದಿ ವೈದ್ಯ ನಿಘಂಟು | ತಾ.ಪ್ರ.೨೨೨೮ | – | ಗದ್ಯ | ಅಸಮಗ್ರ | ಪ್ರಾ.ವಿ.ಸಂ. ಮೈಸೂರು |
| ೩. | ಅಜೀರ್ಣವ್ಯಾದಿ ಚಿಕಿತ್ಸಾ | ತಾ.ಪ್ರ.೯೦೧೨.೭ | – | ಗದ್ಯ | ಅಸಮಗ್ರ | ಪ್ರಾ.ವಿ.ಸಂ. ಮೈಸೂರು |
| ೪. | ಅನುಭವವೈದ್ಯ ಸಮುಚ್ಚಯ | ತಾ.ಪ್ರ.೮೭೦೨.೭ | – | ಗದ್ಯ | ಅಸಮಗ್ರ | ಪ್ರಾ.ವಿ.ಸಂ. ಮೈಸೂರು |
| ೫. | ಅಭಿದಾನ ರತ್ನಮಾಲಾ | ತಾ.ಪ್ರ.೯೨೪೪.೧ | – | ಶ್ಲೋ.ಟೀ | ಸಮಗ್ರ | ಪ್ರಾ.ವಿ.ಸಂ. ಮೈಸೂರು |
| ೬ | ಅಕಾರಾದಿವೈದ್ಯ ನಿಘಂಟು | ತಾ.ಪ್ರ.೪೪೭.೧ | ಅಮೃತ ನಂದಿ | ಗದ್ಯ | ಅಸಮಗ್ರ | ಕ.ಸಾ.ಪ.ಬೆಂ |
| ೭ | ಅಷ್ಟಾಂಗ ಹೃದಯ ತಾತ್ಪರ್ಯ | ತಾ.ಪ್ರ.೯೦೮.೧೩ | ಶಿಂಗ್ರಾರ್ಯ | ಶ್ಲೋ.ಟೀ | ಅಸಮಗ್ರ | ಪ್ರಾ.ವಿ.ಸಂ. ಮೈಸೂರು |
| ೮. | ಅಕಾರಾದಿ ನಿಘಂಟು | ತಾ.ಪ್ರ.೧೬೪.೧ | ಅಮೃತ ನಂದಿ | ಗದ್ಯ | ಸಮಗ್ರ | ಕ.ಅ.ಸಂ.ಮೈ |

| | | | | | | |
|---|---|---|---|---|---|---|
| ೯. | ಅಕಾರಾದಿ ನಿಘಂಟು | ತಾ.ಪ್ರ.೧೩೨ | ಲಕ್ಮಣ ಪಂಡಿತ | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೧೦. | ಅಶ್ವವೈದ್ಯ | ತಾ.ಪ್ರ.೧೮೬೫ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೧. | ಅಶ್ವವೈದ್ಯ | ತಾ.ಪ್ರ.೧೦೩೭.೨ | ಅಭಿನವ ಚಂದ್ರ | ಕಂ.ಪ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೧೨. | ಅಶ್ವವೈದ್ಯ | ತಾ.ಪ್ರ.೫೭೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೩. | ಅಶ್ವವೈದ್ಯ ಸಂಗ್ರಹಗಳು | ತಾ.ಪ್ರ.೧೦೩೭.೧ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೧೪. | ಅಶ್ವವೈದ್ಯ ನಾನಾಸಂಗ್ರಹ | ಕಾ.ಪ್ರ.೫೫೨ | ಅಭಿನವ ಚಂದ್ರ | ಕಂ.ಪ.ಟೀ | ಸಮಗ್ರ | ಕ.ಅ.ಸಂ.ಮೈ |
| ೧೫. | ಅಶ್ವವೈದ್ಯ | ತಾ.ಪ್ರ.೯೯೧ | ಅಭಿನವ ಚಂದ್ರ | ಕಂ.ಪ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೧೬. | ಆಯುರ್ವೇದ | ತಾ.ಪ್ರ.೨೧೭ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೭. | ಆಯುರ್ವೇದ | ತಾ.ಪ್ರ.೬೦೫ | ಮನ್ವಾಚಾರ ಬೊಮ್ಮಣ್ಣ | ಶ್ಲೋ.ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೮. | ಆಯುರ್ವೇದ | ತಾ.ಪ್ರ.೯೬೩ | – | ಶ್ಲೋ.ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯. | ಆಯುರ್ವೇದ | ಕಾ.ಪ್ರ.೪೭೧ | ವೆಂಕಣ್ಣ ಶೆಟ್ಟಿ | ಗದ್ಯ | ಅಸಮಗ್ರ | ಶ್ರೀ.ಮ.ಸಂ.ಸಂ ಧರ್ಮಸ್ಥಳ |
| ೨೦. | ಆಯುರ್ವೇದ ಪ್ರಕಾಶ | ಕಾ.ಪ್ರ.೭೩೮ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೧. | ಆಯುರ್ವೇದ | ಕಾ.ಪ್ರ.೨೭೩೨ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೨. | ಆಯುರ್ವೇದ | ಕಾ.ಪ್ರ.೨೭೧೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೩. | ಆರ್ಗೈನನ್ | ಕಾ.ಪ್ರ.೧೩೧೨.೧೦ | ಗ್ರಾಮಿಣಿ ಸಿಂಗಾರಾರ್ಯ | ಗದ್ಯ | ಸಮಗ್ರ | ಪ್ರಾ.ವಿ.ಸಂ ಮೈಸೂರು |
| ೨೪. | ಆಯುರ್ವೇದ | ಕಾ.ಪ್ರ.೨೭೩೨ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೫. | ಆಯುರ್ವೇದ | ಕಾ.ಪ್ರ.೨೭೧೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೬. | ಆರೋಗ್ಯಾಮೃತ | ತಾ.ಪ್ರ.೯೮೫ | ಚಿಕು ಪಾಧ್ಯಾಯ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೭. | ಆರೋಗ್ಯಾಮೃತ | ತಾ.ಪ್ರ.೧೦೨೩ | ಚಿಕು ಪಾಧ್ಯಾಯ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |

| | | | | | | |
|---|---|---|---|---|---|---|
| ೨೮. | ಔಷಧಿಗಳ ಹೆಸರು | ತಾ.ಪ್ರ.೫೫.೨ | – | ಗದ್ಯ | ಅಸಮಗ್ರ | ಶ್ರೀಬೃಹನ್ಮಠ ಚಿತ್ರದುರ್ಗ |
| ೨೯. | ಔಷಧಿ ಪುಸ್ತಕ | ಕಾ.ಪ್ರ.೩೦೪೯ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೩೦. | ಔಷಧಿ ಕ್ರಮ | ತಾ.ಪ್ರ.೧೪೯ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೩೧. | ಕಲ್ಪದ ವಿವರ | ತಾ.ಪ್ರ.೪೧ | – | ಗದ್ಯ | ಅಸಮಗ್ರ | ಬೃಹನ್ಮಠ ಚಿತ್ರದುರ್ಗ |
| ೩೨. | ಕಲ್ಯಾಣಕಾರಕ | ತಾ.ಪ್ರ.೧೨೦೫ | ಪೂಜ್ಯಪಾದ | ಶ್ಲೋ.ಟೀ | ಅಸಮಗ್ರ | ಕ.ಅ.ಕೇ.ಬೆಂ |
| ೩೩. | ಕರ್ನಾಟಕ ಕಲ್ಯಾಣಕಾರಕ | ಕಾ.ಪ್ರ.೨೩೨ | ಜಗದ್ದಳ ಸೋಮನಾಥ | ಕಂ.ವೃತ್ತ | ಅಸಮಗ್ರ | ಕ.ಅ.ಸಂ.ಮೈ |
| ೩೪. | ಖಗೇಂದ್ರಮಣಿ ದರ್ಪಣಂ | ಕಾ.ಪ್ರ.೮೪ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |
| ೩೫. | ಖಗೇಂದ್ರಮಣಿ ದರ್ಪಣಂ | ಮೈ.ಫಿ.೨೦೫೪ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |
| ೩೬. | ಖಗೇಂದ್ರಮಣಿ ದರ್ಪಣಂ | ಕಾ.ಪ್ರ.೧೭ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |
| ೩೭. | ಖಗೇಂದ್ರಮಣಿ ದರ್ಪಣಂ | ಕಾ.ಪ್ರ.೨೦೮ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |
| ೩೮. | ಖಗೇಂದ್ರಮಣಿ ದರ್ಪಣಂ | ತಾ.ಪ್ರ.೩೬೪.೧೦ | ಮಂಗರಾಜ | ಚಂಪೂ | ಅಸಮಗ್ರ | ರಾ.ಪ್ರಾ.ಅ. ಸಂ.ಕೇ.ಶ್ರ.ಬೆ. |
| ೩೯. | ಖಗೇಂದ್ರಮಣಿ ದರ್ಪಣಂ | ತಾ.ಪ್ರ.೨೭೮ | ಮಂಗರಾಜ | ಚಂಪೂ | ಅಸಮಗ್ರ | ರಾ.ಪ್ರಾ.ಅ. ಸಂ.ಕೇ.ಶ್ರ.ಬೆ. |
| ೪೦. | ಖಗೇಂದ್ರಮಣಿ ದರ್ಪಣಂ | ತಾ.ಪ್ರ.೩೮೧೪.೬ | ಮಂಗರಾಜ | ಚಂಪೂ | ಅಸಮಗ್ರ | ಪ್ರಾ.ವಿ.ಸಂ ಮೈಸೂರು |
| ೪೧. | ಖಗೇಂದ್ರಮಣಿ ದರ್ಪಣಂ | ತಾ.ಪ್ರ.೮೦ | ಮಂಗರಾಜ | ಚಂಪೂ | ಅಸಮಗ್ರ | ಕ.ಸಾ.ಪ.ಬೆಂ |
| ೪೨. | ಖಗೇಂದ್ರಮಣಿ ದರ್ಪಣಂ | ತಾ.ಪ್ರ.೧೪೭೪ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |
| ೪೩. | ಖಗೇಂದ್ರಮಣಿ ದರ್ಪಣಂ | ತಾ.ಪ್ರ.೧೫೭೪.೧ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |
| ೪೪. | ಖಗೇಂದ್ರಮಣಿ ದರ್ಪಣಂ | ತಾ.ಪ್ರ.೧೮೧೪ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |
| ೪೫. | ಖಗೇಂದ್ರಮಣಿ ದರ್ಪಣಂ | ಕಾ.ಪ್ರ.೪೦೭ | ಮಂಗರಾಜ | ಚಂಪೂ | ಅಸಮಗ್ರ | ಕ.ಅ.ಸಂ.ಮೈ |

| | | | | | | |
|---|---|---|---|---|---|---|
| ೪೬. | ಗಂಧಯುಕ್ತ ಕ್ರಮ | ತಾ.ಪ್ರ.೧೫೧೧.೩. | ಪೂಜ್ಯ ಪಾದಾಚಾರ್ಯ | ಶ್ಲೋ.ಟೀ. | ಅಸಮಗ್ರ | ರಾ.ಪ್ರಾ.ಅ. ಸಂ.ಕೇ.ಶ್ರ.ಬೆ. |
| ೪೭. | ಗರ್ಭರಕ್ಷಾಧಿ ವಿಧಾನ | ತಾ.ಪ್ರ.೨೫೬.೧ | – | ಗದ್ಯ | ಅಸಮಗ್ರ | ಕೊ.ಜೈ.ಹ.ಸೂ |
| ೪೮. | ಗೋವೈದ್ಯ | ತಾ.ಪ್ರ.೨೧೨.೩ | ಅನಾಮ ದೇಯ | ಕಂದ ವೃತ್ತ | ಅಸಮಗ್ರ | ಕ.ಅ.ಸಂ.ಮೈ |
| ೪೯. | ಗೋವೈದ್ಯ | ಕಾ.ಪ್ರ.೮೭೫.೩ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೫೦. | ಗೋವೈದ್ಯ | ತಾ.ಪ್ರ.೧೫೭೪.೩ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೫೧. | ಚಿಕಿತ್ಸಾ ಮೂಲಿಕೆ | ಕಾ.ಪ್ರ.೯೧೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೫೨. | ಚಿಕಿತ್ಸಾ ಕ್ರಮೌಷಧ ನಿರ್ಮಾಣ | ತಾ.ಪ್ರ.೩೮೩೫.೧ | – | ಶ್ಲೋ.ಟೀ | ಅಸಮಗ್ರ | ಪ್ರಾ.ವಿ.ಸಂ ಮೈಸೂರು |
| ೫೩. | ಚಿಕಿತ್ಸಾ ವಿಧಾನ | ತಾ.ಪ್ರ.೯೮೦ | – | ಶ್ಲೋ.ಟೀ | ಅಸಮಗ್ರ | ಪ್ರಾ.ವಿ.ಸಂ ಮೈಸೂರು |
| ೫೪. | ನಾಡೀದರ್ಪಣ | ಕಾ.ಪ್ರ.೭೧.೨ | – | ಗದ್ಯ | ಅಸಮಗ್ರ | ರಾ.ಸಂ.ಪ್ರಾ. ಅ.ಸಂ.ಶ.ಬೆ. |
| ೫೫. | ನಾಡೀಶಾಸ್ತ್ರ | ಕಾ.ಪ್ರ.೭೦೦.೨ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೫೬. | ನಾಡೀಪರೀಕ್ಷೆ | ತಾ.ಪ್ರ.೧೫೦೬.೨ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೫೭. | ನಾಟೀವೈದ್ಯ | ಕಾ.ಪ್ರ.೧೪೮೮.೨ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೫೮. | ನಾಟೀವೈದ್ಯ | ಕಾ.ಪ್ರ.೧೨೦೮.೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೫೯. | ನಾಡಿಪರೀಕ್ಷೆ | ಕಾ.ಪ್ರ.೧೨೪೦ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೬೦. | ನಾಡೀವಿಜ್ಞಾನ | ತಾ.ಪ್ರ.೧೫೪೧ | – | ಶೋ.ಟೀ | ಸಮಗ್ರ | ಕ.ವಿವಿ.ಹಂಪಿ |
| ೬೧. | ಬಾಲಗ್ರಹಚಿಕಿತ್ಸಾ | ಕಾ.ಪ್ರ.೬೦೮ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೬೨. | ಬಾಲಗ್ರಹಚಿಕಿತ್ಸಾ | ತಾ.ಪ್ರ.೪೮ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಬಿ.ಎಂ.ಶ್ರೀ.ಸ್ಮಾ. ಪ್ರ.ಬೆಂ |
| ೬೩. | ಬಾಲಗ್ರಹಚಿಕಿತ್ಸೆ | ತಾ.ಪ್ರ.೫೦೬ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಸಾ.ಪ.ಬೆಂ |
| ೬೪. | ಬಾಲಗ್ರಹ | ಕಾ.ಪ್ರ.೪೧೧ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಸಾ.ಪ.ಬೆಂ |
| ೬೫. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೪೮೫ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ರಾ.ಸಂ.ಪ್ರಾ ಅ.ಸಂ.ಕೇ.ಶ್ರ.ಬೆ. |
| ೬೬. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೪೩೦ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ರಾ.ಸಂ.ಪ್ರಾ ಅ.ಸಂ.ಕೇ.ಶ್ರ.ಬೆ. |

| | | | | | | |
|---|---|---|---|---|---|---|
| ೬೭. | ಬಾಲವೈದ್ಯ | ತಾ.ಪ್ರ.೮೩೬.೧ | ದೇವೇಂದ್ರ ಮುನಿ | ಗದ್ಯ | ಸಮಗ್ರ | ರಾ.ಸಂ.ಪ್ರಾ ಅ.ಸಂ.ಕೇ.ಶ್ರ.ಬೆ. |
| ೬೮. | ಬಾಲವೈದ್ಯ | ತಾ.ಪ್ರ.೩೫೫ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ರಾ.ಸಂ.ಪ್ರಾ ಅ.ಸಂ.ಕೇ.ಶ್ರ.ಬೆ. |
| ೬೯. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೩೫೮ | ದೇವೇಂದ್ರ ಮುನಿ | ಗದ್ಯ | ಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೭೦. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೪೮ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಬಿ.ಎಂ.ಶ್ರೀ. ಸ್ಮಾ.ಪ್ರ.ಬೆಂ. |
| ೭೧. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೨೮೪.೧ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೭೨. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೩೮೨.೩ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೭೩. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೧೦೨೫.೧ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೭೪. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೧೭೨೩.೧ | ದೇವೇಂದ್ರ ಮುನಿ | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೭೫. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೧೭೨೩.೨ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೭೬. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೯೧೭.೧ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೭೭. | ಬಾಲಗ್ರಹ ಚಿಕಿತ್ಸೆ | ತಾ.ಪ್ರ.೨೫೬.೨ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕೊ.ಲ.ಜೈ. ಹ.ಸೂ. |
| ೭೮. | ಬಾಲರ ಚಿಕಿತ್ಸೆ | ತಾ.ಪ್ರ.೧೯೪.೪ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಬಿ.ಎಂ.ಶ್ರೀ. ಸ್ಮಾ.ಪ್ರ.ಬೆಂ. |
| ೭೯. | ಬಾಲವೈದ್ಯ | ತಾ.ಪ್ರ.೩೫೫೨ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ರಾ.ಸಾ.ಅ. ಸಂ.ಕೇ.ಶ್ರ.ಬೆ. |
| ೮೦. | ಬಾಲವೈದ್ಯ | ತಾ.ಪ್ರ.೧೭೨೩.೪ | ದೇವೇಂದ್ರ ಮುನಿ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೮೧. | ಬಾಹಟ ಟೀಕೆ | ಕಾ.ಪ್ರ.೨೦೧ | ಕೃಷ್ಣರಾಜ | ಶ್ಲೋ.ಟೀ. | ಅಸಮಗ್ರ | ಕ.ಅ.ಸಂ.ಮೈ |
| ೮೨. | ಭಷ್ಮವೈದ್ಯ | ಕಾ.ಪ್ರ.೨೯೭.೨ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೮೩. | ಭಷ್ಮಕ್ರಮ | ಕಾ.ಪ್ರ.೨೯೭.೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೮೪. | ಭೇಷಜಕಲ್ಪ | ತಾ.ಪ್ರ.೯೭೬ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ. |
| ೮೫. | ಭೇಷಜಕಲ್ಪ | ತಾ.ಪ್ರ.೨೫೪.೧ | – | ವ್ಯಾಖ್ಯಾನ | ಅಸಮಗ್ರ | ಕೊ.ಲ.ಜೈ ಹ.ಸೂಚಿ |
| ೮೬. | ಭೇಷಜಶಾಸ್ತ್ರ | ತಾ.ಪ್ರ.೯೦೫ | – | ಪದ್ಯ | ಅಸಮಗ್ರ | ಶ್ರೀ.ಮಂ.ಸಂ. ಸ.ಧರ್ಮಸ್ಥಳ |
| ೮೭. | ಭೇಷಜಶಾಸ್ತ್ರ | ತಾ.ಪ್ರ.೧೭೧೭ | – | ಸಾಂಗತ್ಯ | ಅಸಮಗ್ರ | ಶ್ರೀ.ಮಂ.ಸಂ ಸ.ಧರ್ಮಸ್ಥಳ |
| ೮೮. | ಮಂತ್ರೌಷಧಗಳು | ತಾ.ಪ್ರ.೪೦೩ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |

| | | | | | |
|---|---|---|---|---|---|
| ೮೯. | ಮಂತ್ರೌಷಧಗಳು | ತಾ.ಪ್ರ.೮೮೦ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೯೦. | ರಣವೈದ್ಯ | ತಾ.ಪ್ರ.೮೮.೩ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೯೧. | ವ್ರಣಚಿಕಿತ್ಸೆ | ತಾ.ಪ್ರ.೧೬೫ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೯೨. | ವೈದ್ಯ | ತಾ.ಪ್ರ.೧೦೪೮ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೯೩. | ವೈದ್ಯ | ತಾ.ಪ್ರ.೧೯೯೨.೧೦ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೯೪. | ವೈದ್ಯ | ತಾ.ಪ್ರ.೧೧೮೨.೧ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೯೫. | ವೈದ್ಯ | ತಾ.ಪ್ರ.೧೮೫೩ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೯೬. | ವೈದ್ಯ | ತಾ.ಪ್ರ.೧೫೭೪ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೯೭. | ವೈದ್ಯ | ತಾ.ಪ್ರ.೧೫೮೭.೨ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೯೮. | ವೈದ್ಯ | ತಾ.ಪ್ರ.೧೫೯೦.೨ | – | ಶೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೯೯. | ವೈದ್ಯ | ಕಾ.ಪ್ರ.೧೬೫೪.೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೦. | ವೈದ್ಯ | ತಾ.ಪ್ರ.೧೬೮೫.೨ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೧. | ವೈದ್ಯ | ತಾ.ಪ್ರ.೧೭೬೫ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೨. | ವೈದ್ಯ | ತಾ.ಪ್ರ.೧೮೦೭ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೧೦೩. | ವೈದ್ಯ | ಕಾ.ಪ್ರ.೩೫೪ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೪. | ವೈದ್ಯ | ಕಾ.ಪ್ರ.೪೩೧.೫ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೫. | ವೈದ್ಯ | ಕಾ.ಪ್ರ.೬೬೨.೩ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೬. | ವೈದ್ಯ | ತಾ.ಪ್ರ.೧೭೨೫.೪ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೭. | ವೈದ್ಯ | ತಾ.ಪ್ರ.೧೯೩.೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೦೮. | ವೈದ್ಯ | ತಾ.ಪ್ರ.೧೭೪ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೦೯. | ವೈದ್ಯ | ತಾ.ಪ್ರ.೧೮೩.೩ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೦. | ವೈದ್ಯ | ತಾ.ಪ್ರ.೬೦೩ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೧. | ವೈದ್ಯ | ತಾ.ಪ್ರ.೬೧೦.೩ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೨. | ವೈದ್ಯ | ತಾ.ಪ್ರ.೮೫೦ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೩. | ವೈದ್ಯ | ತಾ.ಪ್ರ.೮೫೬ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೪. | ವೈದ್ಯ | ತಾ.ಪ್ರ.೮೫೭.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೫. | ವೈದ್ಯ | ತಾ.ಪ್ರ.೮೫೮ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೬. | ವೈದ್ಯ | ತಾ.ಪ್ರ.೧೦೫೭ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೭. | ವೈದ್ಯ | ತಾ.ಪ್ರ.೧೧೧೦ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೮. | ವೈದ್ಯ | ತಾ.ಪ್ರ.೧೧೧೧ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೧೯. | ವೈದ್ಯ | ತಾ.ಪ್ರ.೧೧೧೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೦. | ವೈದ್ಯ | ತಾ.ಪ್ರ.೧೧೮೬.೩ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೧. | ವೈದ್ಯ | ತಾ.ಪ್ರ.೧೨೦೨.೩ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |

| | | | | | |
|---|---|---|---|---|---|
| ೧೨೨. ವೈದ್ಯ | ತಾ.ಪ್ರ೧೨೦೪ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೩. ವೈದ್ಯ | ತಾ.ಪ್ರ೧೨೯.೧ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೪. ವೈದ್ಯ | ತಾ.ಪ್ರ೧೨೧೫.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೫. ವೈದ್ಯ | ತಾ.ಪ್ರ೧೨೨೨. | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೬. ವೈದ್ಯ | ತಾ.ಪ್ರ೧೨೩೦.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೭. ವೈದ್ಯ | ತಾ.ಪ್ರ೧೨೩೩.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೮. ವೈದ್ಯ | ತಾ.ಪ್ರ೧೨೩೯ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೨೯. ವೈದ್ಯ | ತಾ.ಪ್ರ೧೨೫೪.೩ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೦. ವೈದ್ಯ | ತಾ.ಪ್ರ೧೨೫೮.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೧. ವೈದ್ಯ | ತಾ.ಪ್ರ೧೨೬೫.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೨. ವೈದ್ಯ | ತಾ.ಪ್ರ೧೨೬೬.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೩. ವೈದ್ಯ | ತಾ.ಪ್ರ೧೨೭೦.೩ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೪. ವೈದ್ಯ | ತಾ.ಪ್ರ೧೨೭೨.೧ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೫. ವೈದ್ಯ | ತಾ.ಪ್ರ೧೪೨೧ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೬. ವೈದ್ಯ | ಕಾ.ಪ್ರ೬೮೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೭. ವೈದ್ಯ | ಕಾ.ಪ್ರ೭೩೯.೧ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೮. ವೈದ್ಯ | ಕಾ.ಪ್ರ೯೦೫ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೩೯. ವೈದ್ಯ | ಕಾ.ಪ್ರ೯೧೪.೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೪೦. ವೈದ್ಯ | ಕಾ.ಪ್ರ೯೯೨ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೪೧. ವೈದ್ಯ | ಕಾ.ಪ್ರ೧೧೩೪.೧ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೪೨. ವೈದ್ಯ | ಕಾ.ಪ್ರ೧೧೩೫ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೪೩. ವೈದ್ಯ | ಕಾ.ಪ್ರ೧೫೬೬ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೧೪೪. ವೈದ್ಯ | ತಾ.ಪ್ರ೧೦೮೧ | – | ಶ್ಲೋ.ಟೀ. | ಅಸಮಗ್ರ | ಕ.ಅ.ಕೇ.ಬೆಂ |
| ೧೪೫. ವೈದ್ಯ | ತಾ.ಪ್ರ೧೩೩೯ | – | ಶ್ಲೋ.ಟೀ | ಅಸಮಗ್ರ | ಕ.ಅ.ಕೇ.ಬೆಂ |
| ೧೪೬. ವೈದ್ಯ | ತಾ.ಪ್ರ೨೮೨.೧ | – | ಶ್ಲೋ.ಟೀ | ಅಸಮಗ್ರ | ಶ್ರೀ.ಮಂ.ಸಂ. ಧರ್ಮಸ್ಥಳ |
| ೧೪೭. ವೈದ್ಯ | ತಾ.ಪ್ರ೩೦೯.೩ | – | ಗದ್ಯ | ಅಸಮಗ್ರ | ಶ್ರೀ.ಬ್ರಹನ್ಮಠ ಚಿತ್ರದುರ್ಗ |
| ೧೪೮. ವೈದ್ಯ | ತಾ.ಪ್ರ೫೮೨.೧ | – | ಗದ್ಯ | ಅಸಮಗ್ರ | ಶ್ರೀ.ಬ್ರಹನ್ಮಠ ಚಿತ್ರದುರ್ಗ |
| ೧೪೯. ವೈದ್ಯ | ತಾ.ಪ್ರ೫೧೮.೫ | – | ಗದ್ಯ | ಅಸಮಗ್ರ | ಶ್ರೀ.ಬ್ರಹನ್ಮಠ ಚಿತ್ರದುರ್ಗ |
| ೧೫೦. ವೈದ್ಯ | ತಾ.ಪ್ರ೬೬೮.೨ | – | ಗದ್ಯ | ಅಸಮಗ್ರ | ಶ್ರೀ.ಬ್ರಹನ್ಮಠ ಚಿತ್ರದುರ್ಗ |
| ೧೫೧. ವೈದ್ಯ | ಕಾ.ಪ್ರ೧೪ | – | ಗದ್ಯ | ಅಸಮಗ್ರ | ಗ.ತೋ.ಮಠ |

| | | | | | |
|---|---|---|---|---|---|
| ೧೫೨. ವೈದ್ಯ | ತಾ.ಪ್ರ.೩೩೬.೨ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೧೫೩. ವೈದ್ಯ | ಕಾ.ಪ್ರ.೧೮೨ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೫೪. ವೈದ್ಯ | ತಾ.ಪ್ರ.೧೫೭ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೫೫. ವೈದ್ಯ | ತಾ.ಪ್ರ.೨೯೮.೨ | – | ಶ್ಲೋ.ಟೀ | ಅಸಮಗ್ರ | ಕ.ಸಾ.ಪ.ಬೆಂ |
| ೧೫೬. ವೈದ್ಯ | ತಾ.ಪ್ರ.೪೫೩.೩ | – | ಗದ್ಯ | ಅಸಮಗ್ರ | ಕ.ಸಾ.ಪ.ಬೆಂ |
| ೧೫೭. ವೈದ್ಯ | ತಾ.ಪ್ರ.೪೬೫.೩ | – | ಗದ್ಯ | ಅಸಮಗ್ರ | ಕ.ಸಾ.ಪ.ಬೆಂ |
| ೧೫೮. ವೈದ್ಯ | ತಾ.ಪ್ರ.೨೬೭ | – | ಶ್ಲೋ.ಕ | ಸಮಗ್ರ | ರಾ.ಸಂ.ಪ್ರಾ ಅ.ಸಂ.ಕೇ.ಶ್ರ.ಬೆ. |
| ೧೫೯. ವೈದ್ಯ | ತಾ.ಪ್ರ.೧೬೧೮ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೧೬೦. ವೈದ್ಯ | ತಾ.ಪ್ರ.೧೮೫೦ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೧೬೧. ವೈದ್ಯ | ತಾ.ಪ್ರ.೧೪೮೦ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೧೬೨. ವೈದ್ಯ | ತಾ.ಪ್ರ.೧೪೯೫ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೧೬೩. ವೈದ್ಯ | ತಾ.ಪ್ರ.೧೪೯೬ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೧೬೪. ವೈದ್ಯ | ತಾ.ಪ್ರ.೧೪೯೭ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೧೬೫. ವೈದ್ಯ | ತಾ.ಪ್ರ.೧೫೦೩ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೧೬೬. ವೈದ್ಯಕಂದ | ಕಾ.ಪ್ರ.೧೭೮ | ಬೊಮ್ಮಯ್ಯ | ಕಂದ | ಅಸಮಗ್ರ | ಕ.ಅ.ಸಂ.ಮೈ |
| ೧೬೭. ವೈದ್ಯಕಂದ | ಕಾ.ಪ್ರ.೬೫೮ | ಬೊಮ್ಮಯ್ಯ | ಕಂದ | ಅಸಮಗ್ರ | ಕ.ವಿವಿ.ಹಂಪಿ |
| ೧೬೮. ವೈದ್ಯಕಂದ | ತಾ.ಪ್ರ.೧೪೯೨.೨ | ಬೊಮ್ಮಯ್ಯ | ಕಂದ | ಅಸಮಗ್ರ | ಕ.ಅ.ಕೇ.ಬೆಂ |
| ೧೬೯. ವೈದ್ಯಗ್ರಂಥ | ತಾ.ಪ್ರ.೭೦೩ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೦. ವೈದ್ಯಗ್ರಂಥ | ತಾ.ಪ್ರ.೭೨೦ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೧. ವೈದ್ಯಗ್ರಂಥ | ತಾ.ಪ್ರ.೭೪೧ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೧೭೨. ವೈದ್ಯಗ್ರಂಥ | ತಾ.ಪ್ರ.೭೬೬.೨ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೩. ವೈದ್ಯಗ್ರಂಥ | ತಾ.ಪ್ರ.೮೫೯ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೧೭೪. ವೈದ್ಯಗ್ರಂಥ | ತಾ.ಪ್ರ.೮೬೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೫. ವೈದ್ಯಗ್ರಂಥ | ತಾ.ಪ್ರ.೪೨೦ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೬. ವೈದ್ಯಗ್ರಂಥ | ತಾ.ಪ್ರ.೮೭೧.೨ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೭. ವೈದ್ಯಗ್ರಂಥ | ತಾ.ಪ್ರ.೧೪೨೯ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೮. ವೈದ್ಯಗ್ರಂಥ | ತಾ.ಪ್ರ.೧೪೩೩ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೭೯. ವೈದ್ಯಗ್ರಂಥ | ತಾ.ಪ್ರ.೧೬೩೩.೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೮೦. ವೈದ್ಯಗ್ರಂಥ | ತಾ.ಪ್ರ.೧೮೧೩ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೧೮೧. ವೈದ್ಯಗ್ರಂಥ | ತಾ.ಪ್ರ.೧೮೧೬ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೧೮೨. ವೈದ್ಯಗ್ರಂಥ | ತಾ.ಪ್ರ.೩೯೬ | – | ಗದ್ಯ | ಅಸಮಗ್ರ | ಕ.ಸಾ.ಪ.ಬೆಂ |
| ೧೮೩. ವೈದ್ಯಗ್ರಂಥ | ತಾ.ಪ್ರ.೩೮೮ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |

| | | | | | |
|---|---|---|---|---|---|
| ೧೮೪. ವೈದ್ಯಗ್ರಂಥ | ತಾ.ಪ್ರ.೬೧ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೧೮೫. ವೈದ್ಯಗ್ರಂಥ | ತಾ.ಪ್ರ.೨೫೫ | – | ಶ್ಲೋ.ಟೀ | ಸಮಗ್ರ | ಕ.ವಿವಿ.ಹಂಪಿ |
| ೧೮೬. ವೈದ್ಯಗ್ರಂಥ | ತಾ.ಪ್ರ.೩೧೬ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೮೭. ವೈದ್ಯಗ್ರಂಥ | ತಾ.ಪ್ರ.೫ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೮೮. ವೈದ್ಯಗ್ರಂಥ | ತಾ.ಪ್ರ.೧೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೮೯. ವೈದ್ಯಗ್ರಂಥ | ಕಾ.ಪ್ರ.೩೦೮೨ | – | ಗದ್ಯ | ಸಮಗ್ರ | ಕ.ವಿವಿ.ಹಂಪಿ |
| ೧೯೦. ವೈದ್ಯಗ್ರಂಥ | ಕಾ.ಪ್ರ.೨೮೪೩ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೧. ವೈದ್ಯಗ್ರಂಥ | ಕಾ.ಪ್ರ.೨೮೮೯ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೨. ವೈದ್ಯಗ್ರಂಥ | ಕಾ.ಪ್ರ.೨೯೫೬ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೩. ವೈದ್ಯಗ್ರಂಥ | ಕಾ.ಪ್ರ.೨೯೨೪ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೪. ವೈದ್ಯಗ್ರಂಥ | ಕಾ.ಪ್ರ.೩೧೬೫ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೫. ವೈದ್ಯಗ್ರಂಥ | ಕಾ.ಪ್ರ.೨೬೨೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೬. ವೈದ್ಯಗ್ರಂಥ | ಕಾ.ಪ್ರ.೨೭೦೮ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೭. ವೈದ್ಯಗ್ರಂಥ | ಕಾ.ಪ್ರ.೨೫೮೮ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೧೯೮. ವೈದ್ಯಗ್ರಂಥ | ತಾ.ಪ್ರ.೨೦.೭.೪ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೧೯೯. ವೈದ್ಯಗ್ರಂಥ | ತಾ.ಪ್ರ.೩೬೭ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೦೦. ವೈದ್ಯಗ್ರಂಥ | ತಾ.ಪ್ರ.೩೮೮.೩ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೦೧. ವೈದ್ಯಗ್ರಂಥ | ತಾ.ಪ್ರ.೩೬೮.೨ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೦೨ ವೈದ್ಯಗ್ರಂಥ | ಕಾ.ಪ್ರ.೧೧೯೦ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೨೦೩. ವೈದ್ಯಗ್ರಂಥ | ಕಾ.ಪ್ರ.೧೩೦೩ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೨೦೪. ವೈದ್ಯಗ್ರಂಥ | ಕಾ.ಪ್ರ.೧೪೦೮ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೨೦೫. ವೈದ್ಯಗ್ರಂಥ | ಕಾ.ಪ್ರ.೧೮೮೨ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೨೦೬. ವೈದ್ಯಗ್ರಂಥ | ಕಾ.ಪ್ರ.೧೪೭೬ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೨೦೭. ವೈದ್ಯಗ್ರಂಥ | ಕಾ.ಪ್ರ.೧೪೮೪ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೨೦೮. ವೈದ್ಯಗ್ರಂಥ | ಕಾ.ಪ್ರ.೧೪೮೭ | – | ಗದ್ಯ | ಅಸಮಗ್ರ | ಕ.ಅ.ಸಂ.ಗು. |
| ೨೦೯. ವೈದ್ಯಗ್ರಂಥ | ಕಾ.ಪ್ರ.೫೮೩.೨ | – | ಶ್ಲೋ.ಟೀ | ಅಸಮಗ್ರ | ಕ.ವಿವಿ.ಧಾ. |
| ೨೧೦. ವೈದ್ಯಗ್ರಂಥ | ಕಾ.ಪ್ರ.೯೦೩.೧ | – | ಶ್ಲೋ.ಟೀ | ಅಸಮಗ್ರ | ಕ.ವಿವಿ.ಧಾ. |
| ೨೧೧. ವೈದ್ಯಗ್ರಂಥ | ಕಾ.ಪ್ರ.೭೭೨.೧ | – | ಶ್ಲೋ.ಟೀ | ಅಸಮಗ್ರ | ಕ.ವಿವಿ.ಧಾ |
| ೨೧೨. ವೈದ್ಯಗ್ರಂಥ | ಕಾ.ಪ್ರ.೨೪೫.೭ | – | ಗದ್ಯ | ಅಸಮಗ್ರ | ಕೊ.ಲ.ಜೈ ಹ.ಸೂ |
| ೨೧೩. ವೈದ್ಯಗ್ರಂಥ | ಕಾ.ಪ್ರ.೯೭.೧ | – | ಗದ್ಯ | ಅಸಮಗ್ರ | ಕೊ.ಲ.ಜೈ. ಹ.ಸೂ |

| | | | | | |
|---|---|---|---|---|---|
| ೨೧೪. ವೈದ್ಯಗ್ರಂಥ | ಕಾ.ಪ್ರ.೨೪೯.೧ | – | ಗದ್ಯ | ಅಸಮಗ್ರ | ಕೊ.ಲ.ಜೈ. ಹ.ಸೂ |
| ೨೧೫. ವೈದ್ಯಗ್ರಂಥ | ತಾ.ಪ್ರ.೨೯೮.೨ | – | ವೃತ್ತ.ಟೀ | ಅಸಮಗ್ರ | ಕೊ.ಲ.ಜೈ. ಹ.ಸೂ |
| ೨೧೬. ವೈದ್ಯಗ್ರಂಥ | ತಾ.ಪ್ರ.೨೮೮ | – | ಗದ್ಯ | ಅಸಮಗ್ರ | ಕೊ.ಲ.ಜೈ. ಹ.ಸೂ |
| ೨೧೭. ವೈದ್ಯಗ್ರಂಥ | ಕಾ.ಪ್ರ.೨೧೦ | – | ಗದ್ಯ | ಅಸಮಗ್ರ | ಕೊ.ಲ.ಜೈ. ಹ.ಸೂ |
| ೨೧೮. ವೈದ್ಯಗ್ರಂಥ | ಕಾ.ಪ್ರ.೧೮.೨ | – | ಗದ್ಯ | ಅಸಮಗ್ರ | ಕೊ.ಲ.ಜೈ. ಹ.ಸೂ |
| ೨೧೯. ವೈದ್ಯಪುಸ್ತಕ | ಕಾ.ಪ್ರ.೪೬ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೨೦. ವೈದ್ಯಪುಸ್ತಕ | ತಾ.ಪ್ರ.೪೩ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೨೧. ವೈದ್ಯಪುಸ್ತಕ | ಕಾ.ಪ್ರ.೭೬೫.೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೨೨. ವೈದ್ಯಪುಸ್ತಕ | ತಾ.ಪ್ರ.೪೨೮ | – | ಶ್ಲೋ.ಟೀ | ಅಸಮಗ್ರ | ಕ.ವಿ.ವಿ.ಧಾ |
| ೨೨೩. ವೈದ್ಯಪುಸ್ತಕ | ತಾ.ಪ್ರ.೪೩೩ | – | ಶ್ಲೋ.ಟೀ | ಅಸಮಗ್ರ | ಕ.ವಿ.ವಿ.ಧಾ |
| ೨೨೪. ವೈದ್ಯಪುಸ್ತಕ | ತಾ.ಪ್ರ.೧೩೦೮ | – | ಗದ್ಯ.ಪದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೨೫. ವೈದ್ಯಪುಸ್ತಕ | ತಾ.ಪ್ರ.೧೧೦೫ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೨೨೬. ವೈದ್ಯಪುಸ್ತಕ | ತಾ.ಪ್ರ.೧೧೦೬ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೨೭. ವೈದ್ಯಪುಸ್ತಕ | ತಾ.ಪ್ರ.೧೪೩೦.೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೨೮. ವೈದ್ಯಪುಸ್ತಕ | ಕಾ.ಪ್ರ.೧೩೮೪.೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೨೯. ವೈದ್ಯಪುಸ್ತಕ | ತಾ.ಪ್ರ.೩೫೮.೧ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೨೩೦. ವೈದ್ಯಪುಸ್ತಕ | ತಾ.ಪ್ರ.೩೫೧ | ಚನ್ನಬಸಪ್ಪ | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೩೧. ವೈದ್ಯಪುಸ್ತಕ | ತಾ.ಪ್ರ.೨೮೯ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೩೨. ವೈದ್ಯಪುಸ್ತಕ | ಕಾ.ಪ್ರ.೩೧೨೭.೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೩೩. ವೈದ್ಯಪುಸ್ತಕ | ಕಾ.ಪ್ರ.೭೬೫.೧ | – | ಗದ್ಯ | ಸಮಗ್ರ | ಕ.ವಿವಿ.ಹಂಪಿ |
| ೨೩೪. ವೈದ್ಯಪುಸ್ತಕ | ಕಾ.ಪ್ರ.೨೯೩೫ | – | ಗದ್ಯ | ಸಮಗ್ರ | ಕ.ವಿವಿ.ಹಂಪಿ |
| ೨೩೫. ವೈದ್ಯಪುಸ್ತಕ | ಕಾ.ಪ್ರ.೨೯೪೧ | – | ಗದ್ಯ | ಸಮಗ್ರ | ಕ.ವಿವಿ.ಹಂಪಿ |
| ೨೩೬. ವೈದ್ಯಪುಸ್ತಕ | ತಾ.ಪ್ರ.೪೨೮ | – | ಶ್ಲೋ.ಟೀ | ಸಮಗ್ರ | ಕ.ಅ.ಸಂ.ಮೈ |
| ೨೩೭. ವೈದ್ಯಪುಸ್ತಕ | ತಾ.ಪ್ರ.೪೩೩ | – | – | ಸಮಗ್ರ | ಕ.ಅ.ಸಂ.ಮೈ |
| ೨೩೮. ವೈದ್ಯಶಾಸ್ತ್ರ | ತಾ.ಪ್ರ.೮೭೯ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೨೩೯. ವೈದ್ಯಶಾಸ್ತ್ರ | ತಾ.ಪ್ರ.೮೩೬ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೨೪೦. ವೈದ್ಯಶಾಸ್ತ್ರ | ತಾ.ಪ್ರ.೯೩೭ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೨೪೧. ವೈದ್ಯಶಾಸ್ತ್ರ | ತಾ.ಪ್ರ.೧೪೩೨ | – | ಶ್ಲೋ.ಟೀ | ಸಮಗ್ರ | ಕ.ಅ.ಸಂ.ಮೈ |
| ೨೪೨. ವೈದ್ಯಶಾಸ್ತ್ರ | ತಾ.ಪ್ರ.೩೫೫ | ಪದ್ಮರಾಜ | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೨೪೩. ವೈದ್ಯಶಾಸ್ತ್ರ | ತಾ.ಪ್ರ.೭೮೯.೪ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |

| | | | | | |
|---|---|---|---|---|---|
| ೨೪೪. ವೈದ್ಯಶಾಸ್ತ್ರ | ಮೈ.ಫಿಲಂ.೧೨೭೦ | – | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೨೪೫. ವೈದ್ಯಶಾಸ್ತ್ರ | ಮೈ.ಫಿಲಂ.೧೨೭೩ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೪೬. ವೈದ್ಯಶಾಸ್ತ್ರ | ಮೈ.ಫಿಲಂ.೧೨೮೭ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೪೭. ವೈದ್ಯಶಾಸ್ತ್ರ | ಮೈ.ಫಿಲಂ.೨೪೭೧ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೨೪೮. ವೈದ್ಯಶಾಸ್ತ್ರ | ತಾ.ಪ್ರ.೧೫೮ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆ. |
| ೨೪೯. ವೈದ್ಯಶಾಸ್ತ್ರ | ತಾ.ಪ್ರ.೭೭ | – | ಗದ್ಯ | ಅಸಮಗ್ರ | ಬಿ.ಎಂ.ಶ್ರೀ. ಸ್ಮಾ.ಪ್ರ.ಬೆಂ |
| ೨೫೦. ವೈದ್ಯಶಾಸ್ತ್ರ | ತಾ.ಪ್ರ.೫೩೩ | – | ಶ್ಲೋ.ಟೀ. | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೫೧. ವೈದ್ಯಶಾಸ್ತ್ರ | ತಾ.ಪ್ರ.೧೭೩ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೫೨. ವೈದ್ಯಶಾಸ್ತ್ರ | ತಾ.ಪ್ರ.೪೦೦ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೫೩. ವೈದ್ಯಶಾಸ್ತ್ರ | ತಾ.ಪ್ರ.೩೯೮ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೫೪. ವೈದ್ಯಶಾಸ್ತ್ರ | ತಾ.ಪ್ರ.೩೫೫.೧ | – | ಶ್ಲೋ.ಟೀ. | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೫೫. ವೈದ್ಯಶಾಸ್ತ್ರ | ತಾ.ಪ್ರ.೨೮೯ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೫೬. ವೈದ್ಯಶಾಸ್ತ್ರ | ಕಾ.ಪ್ರ.೪೫೪ | – | ಗದ್ಯ | ಸಮಗ್ರ | ಕ.ಅ.ಕೇ.ಗು |
| ೨೫೭. ವೈದ್ಯಶಾಸ್ತ್ರ | ಕಾ.ಪ್ರ.೧೧೨೮ | – | ಗದ್ಯ | ಅಸಮಗ್ರ | ಕ.ಅ.ಕೇ.ಗು |
| ೨೫೮. ವೈದ್ಯಶಾಸ್ತ್ರ | ಕಾ.ಪ್ರ.೧೧೪೬ | – | ಗದ್ಯ | ಅಸಮಗ್ರ | ಕ.ಅ.ಕೇ.ಗು |
| ೨೫೯. ವೈದ್ಯಶಾಸ್ತ್ರ | ಕಾ.ಪ್ರ.೧೧೯೧.೧ | – | ಗದ್ಯ | ಅಸಮಗ್ರ | ಕ.ಅ.ಕೇ.ಗು |
| ೨೬೦. ವೈದ್ಯಶಾಸ್ತ್ರ | ತಾ.ಪ್ರ.೪೨೬ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೨೬೧. ವೈದ್ಯಶಾಸ್ತ್ರ | ತಾ.ಪ್ರ.೪೬೦ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೬೨. ವೈದ್ಯಶಾಸ್ತ್ರ | ತಾ.ಪ್ರ.೪೬೭ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೬೩. ವೈದ್ಯಶಾಸ್ತ್ರ | ತಾ.ಪ್ರ.೮೪೧ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೨೬೪. ವೈದ್ಯಶಾಸ್ತ್ರ | ತಾ.ಪ್ರ.೪೨೬ | – | ಶ್ಲೋ.ಟೀ | ಅಸಮಗ್ರ | ಕ.ವಿವಿ.ಧಾ. |
| ೨೬೫. ವೈದ್ಯಶಾಸ್ತ್ರ | ತಾ.ಪ್ರ.೪೬೦ | – | ಗದ್ಯ | ಅಸಮಗ್ರ | ಕ.ವಿವಿ.ಧಾ. |
| ೨೬೬. ವೈದ್ಯಶಾಸ್ತ್ರ | ತಾ.ಪ್ರ.೪೬೭ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೬೭. ವೈದ್ಯಶಾಸ್ತ್ರ | ಕಾ.ಪ್ರ.೬೧೬ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೬೮. ವೈದ್ಯಶಾಸ್ತ್ರ | ಕಾ.ಪ್ರ.೪೨೬.೧ | ರಂಗಪ್ಪ ಬಳಗಾನೂರು | ಗದ್ಯ | ಸಮಗ್ರ | ಕ.ವಿವಿ.ಹಂಪಿ |
| ೨೬೯. ವೈದ್ಯಶಾಸ್ತ್ರ | ಕಾ.ಪ್ರ.೬೦೭ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೭೦. ವೈದ್ಯಶಾಸ್ತ್ರ | ಕಾ.ಪ್ರ.೬೧೫ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೭೧. ವೈದ್ಯಶಾಸ್ತ್ರ | ಕಾ.ಪ್ರ.೮೬೪ | – | ಶ್ಲೋ.ಟೀ | ಅಸಮಗ್ರ | ಕ.ವಿವಿ.ಹಂಪಿ |
| ೨೭೨. ವೈದ್ಯಶಾಸ್ತ್ರ | ತಾ.ಪ್ರ.೪೩ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |

| | | | | | | |
|---|---|---|---|---|---|---|
| ೨೭೩. | ವೈದ್ಯಶಾಸ್ತ್ರ | ತಾ.ಪ್ರ.೩೧೫.೨ | – | ಗದ್ಯ | ಅಸಮಗ್ರ | ಬ್ರಹನ್ಮಠ ಚಿತ್ರದುರ್ಗ |
| ೨೭೪. | ವೈದ್ಯಶಾಸ್ತ್ರ | ತಾ.ಪ್ರ.೪೦೦ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೭೫. | ವೈದ್ಯಶಾಸ್ತ್ರ | ತಾ.ಪ್ರ.೩೬೮ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೭೬. | ವೈದ್ಯಶಾಸ್ತ್ರ | ತಾ.ಪ್ರ.೨೮೯ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೭೭. | ವೈದ್ಯಶಾಸ್ತ್ರ | ತಾ.ಪ್ರ.೧೫೮ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೨೭೮. | ವೈದ್ಯಶಾಸ್ತ್ರ | ತಾ.ಪ್ರ.೧೭೪ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೨೭೯. | ವೈದ್ಯಶಾಸ್ತ್ರ | ತಾ.ಪ್ರ.೧೫೮ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೨೮೦. | ವೈದ್ಯಶಾಸ್ತ್ರ | ಕಾ.ಪ್ರ.೫೦೫.೮ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೨೮೧. | ವೈದ್ಯಚಿಕಿತ್ಸೆ | ತಾ.ಪ್ರ.೧೬೧೧.೧ | – | ಶ್ಲೋ.ಟೀ. | ಅಸಮಗ್ರ | ಕ.ಅ.ಸಂ.ಮೈ |
| ೨೮೨. | ವೈದ್ಯಚಿಕಿತ್ಸೆ | ತಾ.ಪ್ರ.೧೬೧೬ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೮೩. | ವೈದ್ಯಪ್ರಮೆ | ಕಾ.ಪ್ರ.೨೫೩೧ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೮೪. | ವೈದ್ಯರತ್ನ | ಕಾ.ಪ್ರ.೨೬೮೪ | – | ಗದ್ಯ | ಅಸಮಗ್ರ | ಕ.ವಿವಿ.ಹಂಪಿ |
| ೨೮೫. | ವೈದ್ಯನಿಘಂಟು | ತಾ.ಪ್ರ.೧೬೪.೧ | – | ಪ್ರತಿಪದ | ಅಸಮಗ್ರ | ಕ.ಅ.ಸಂ.ಮೈ |
| ೨೮೬. | ವೈದ್ಯನಿಘಂಟು | ಕಾ.ಪ್ರ.೧೧೮ | – | ಪ್ರತಿಪದ | ಅಸಮಗ್ರ | ಕ.ಅ.ಸಂ.ಮೈ |
| ೨೮೭. | ವೈದ್ಯನಿಘಂಟು | ತಾ.ಪ್ರ.೧೨೬.೧ | – | ಪ್ರತಿಪದ | ಅಸಮಗ್ರ | ಕ.ಸಾ.ಪ.ಬೆಂ |
| ೨೮೮. | ವೈದ್ಯಪ್ರಕಾಶ | ತಾ.ಪ್ರ.೪೧೬೬ | – | ಶ್ಲೋ.ಟೀ. | ಅಸಮಗ್ರ | ಕ.ಸಾ.ಪ.ಬೆಂ |
| ೨೮೯. | ವೈದ್ಯಾಮೃತ | ತಾ.ಪ್ರ.೯೦೬.೨ | ಶ್ರೀಧರದೇವ | ಚಂಪೂ | ಅಸಮಗ್ರ | ಕ.ವಿವಿ.ಧಾ |
| ೨೯೦. | ವೈದ್ಯಾಮೃತ | ತಾ.ಪ್ರ.೧೫೭೪ | ಶ್ರೀಧರದೇವ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೨೯೧. | ವೈದ್ಯಾಮೃತ | ಮೈ.ಫಿ.೨೦೭೩ | ಶ್ರೀಧರದೇವ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೨೯೨. | ವೈದ್ಯಾಮೃತ | ತಾ.ಪ್ರ.೧೨೩ | ಶ್ರೀಧರದೇವ | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೯೩. | ವೈದ್ಯಾಮೃತ | ತಾ.ಪ್ರ.೪೦೬.೨ | ಶ್ರೀಧರದೇವ | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೨೯೪. | ವೈದ್ಯಾಮೃತ | ತಾ.ಪ್ರ.೨೧೨.೨ | ಶ್ರೀಧರದೇವ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೨೯೫. | ವೈದ್ಯಾಮೃತ | ತಾ.ಪ್ರ.೬೦೫ | ಶ್ರೀಧರದೇವ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೨೯೬. | ವೈದ್ಯಾಮೃತ | ತಾ.ಪ್ರ.೧೩೩೪ | ಶ್ರೀಧರದೇವ | ಗದ್ಯ | ಸಮಗ್ರ | ಕ.ಅ.ಕೇ.ಬೆಂ. |
| ೨೯೭. | ವೈದ್ಯಾಮೃತ | ತಾ.ಪ್ರ.೧೨೧೧.೪ | ಶೀಧರದೇವ | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೨೯೮. | ವೈದ್ಯಾಮೃತ | ತಾ.ಪ್ರ.೧೨೩೩.೧ | ಶ್ರೀಧರದೇವ | ಗದ್ಯ | ಸಮಗ್ರ | ಕ.ಅ.ಕೇ.ಬೆಂ |
| ೨೯೯. | ವೈದ್ಯ ಚಿಂತಾಮಣಿ | ತಾ.ಪ್ರ.೭೬೫ | ವಲ್ಲಭೇಂದ್ರ | ಶ್ಲೋ.ಟಿ | ಅಸಮಗ್ರ | ಕ.ಅ.ಸಂ.ಮೈ |
| ೩೦೦. | ವೈದ್ಯ ಚಿಂತಾಮಣಿ | ತಾ.ಪ್ರ.೯೭೬ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೦೧. | ವೈದ್ಯ ಚಿಂತಾಮಣಿ | ತಾ.ಪ್ರ.೧೦೨೪ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೦೨. | ವೈದ್ಯ ಚಿಂತಾಮಣಿ | ಕಾ.ಪ್ರ.೫೫ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |

| | | | | | | |
|---|---|---|---|---|---|---|
| ೩೦೩. | ವೈದ್ಯ ಚಿಂತಾಮಣಿ | ಕಾ.ಪ್ರ.೬೩೩ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೦೪. | ವೈದ್ಯ ಚಿಂತಾಮಣಿ | ಕಾ.ಪ್ರ.೬೬೩ | ವಲ್ಲಭೇಂದ್ರ | ಶ್ಲೋ.ಟೀ | ಸಮಗ್ರ | ಕ.ಅ.ಸಂ.ಮೈ |
| ೨೦೫. | ವೈದ್ಯ ಚಿಂತಾಮಣಿ | ತಾ.ಪ್ರ.೪೫೬ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೦೬. | ವೈದ್ಯ ಚಿಂತಾಮಣಿ | ಕಾ.ಪ್ರ.೧೩೬೫ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ವಿವಿ.ಹಂಪಿ |
| ೩೦೭. | ವೈದ್ಯ ಚಿಂತಾಮಣಿ | ತಾ.ಪ್ರ.೧೨೪೯.೧ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಕೇ.ಬೆಂ |
| ೩೦೮. | ವೈದ್ಯ ಚಿಂತಾಮಣಿ | ತಾ.ಪ್ರ.೧೨೧೨.೧ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಕೇ.ಬೆಂ |
| ೩೦೯. | ವೈದ್ಯ ಚಿಂತಾಮಣಿ | ಕಾ.ಪ್ರ.೧೫೬೦.೪ | ವಲ್ಲಭೇಂದ್ರ | ಶ್ಲೋ.ಟೀ | ಅಸಮಗ್ರ | ಕ.ಅ.ಕೇ.ಬೆಂ |
| ೩೧೦. | ವೈದ್ಯ ಚಿಂತಾಮಣಿ | ಕಾ.ಪ್ರ.೩೦೬೯ | ವಲ್ಲಭೇಂದ್ರ | ಶ್ಲೋ.ಟೀ | ಸಮಗ್ರ | ಕ.ವಿವಿ.ಹಂಪಿ |
| ೩೧೧. | ವೈದ್ಯಾಮೃತಸಾರ ಸಂಗ್ರಹ | ತಾ.ಪ್ರ.೧೭೨೭ | ಚಿಕುಪಾಧ್ಯಾಯ | ಶ್ಲೋ.ಟೀ | ಸಮಗ್ರ | ಕ.ಅ.ಸಂ.ಮೈ |
| ೩೧೨. | ವೈದ್ಯಾಮೃತಸಾರ ಸಂಗ್ರಹ | ಕಾ.ಪ್ರ.೮೬೬ | ಚಿಕುಪಾಧ್ಯಾಯ | ಶ್ಲೋ.ಟೀ | ಸಮಗ್ರ | ಕ.ವಿವಿ.ಹಂಪಿ |
| ೩೧೩. | ವೈದ್ಯಸಾರ ಸಂಗ್ರಹ | ಕಾ.ಪ್ರ.೧೪೦೮ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ಅ.ಕೇ.ಬೆಂ |
| ೩೧೪. | ವೈದ್ಯಸಾರ ಸಂಗ್ರಹ | ತಾ.ಪ್ರ.೧೨೬೫ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ಅ.ಕೇ.ಬೆಂ |
| ೩೧೫. | ವೈದ್ಯಸಾರ ಸಂಗ್ರಹ | ತಾ.ಪ್ರ.೧೩೮೯ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೧೬. | ವೈದ್ಯಸಾರ ಸಂಗ್ರಹ | ತಾ.ಪ್ರ.೨೯೨ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೧೭. | ವೈದ್ಯಸಾರ ಸಂಗ್ರಹ | ತಾ.ಪ್ರ.೨೧೨.೧ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೧೮. | ವೈದ್ಯಸಾರ ಸಂಗ್ರಹ | ತಾ.ಪ್ರ.೨೮೨ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೧೯. | ವೈದ್ಯಸಾರ ಸಂಗ್ರಹ | ತಾ.ಪ್ರ.೪೩೯ | ನಂಜಿನಾಥ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೨೦. | ವೈದ್ಯಸಾರ ಸಂಗ್ರಹ | ತಾ.ಪ್ರ.೫೩೩ | ನಂಜಿನಾಥ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೨೧. | ವೈದ್ಯಸಾರ ಸಂಗ್ರಹ | ತಾ.ಪ್ರ.೨೨೮ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೨೨. | ವೈದ್ಯಸಾರ ಸಂಗ್ರಹ | ತಾ.ಪ್ರ.೨೮೪ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೨೩. | ವೈದ್ಯಸಾರ ಸಂಗ್ರಹ | ತಾ.ಪ್ರ.೨೧೨.೧ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ವಿವಿ.ಧಾ |
| ೩೨೪. | ವೈದ್ಯಸಾರ ಸಂಗ್ರಹ | ತಾ.ಪ್ರ.೨೮೭ | ನರಸಿಂಹಶಾಸ್ತ್ರಿ | ಶ್ಲೋ.ಟೀ | ಅಸಮಗ್ರ | ಕ.ವಿವಿ.ಧಾ |
| ೩೨೫. | ವೈದ್ಯಸಂಗ್ರಹ | ತಾ.ಪ್ರ.೬೯೭ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೨೬. | ವೈದ್ಯಸಂಗ್ರಹ | ತಾ.ಪ್ರ.೧೫೭೮.೨ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೨೭. | ವೈದ್ಯಸಂಗ್ರಹ | ತಾ.ಪ್ರ.೧೭೨೮ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |

| | | | | | | |
|---|---|---|---|---|---|---|
| ೩೨೮. | ವೈದ್ಯಸಂಗ್ರಹ | ಕಾ.ಪ್ರ.೭೦೦.೧ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೨೯. | ವೈದ್ಯಸಂಗ್ರಹ | ಕಾ.ಪ್ರ.೭೨೬ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೩೦. | ವೈದ್ಯಸಂಗ್ರಹ | ಕಾ.ಪ್ರ.೮೫ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೩೧. | ವೈದ್ಯಸಂಗ್ರಹ | ಕಾ.ಪ್ರ.೯೦ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೩೨. | ವೈದ್ಯಸಂಗ್ರಹ | ತಾ.ಪ್ರ.೩೧೦ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೩೩. | ವೈದ್ಯಸಂಗ್ರಹ | ತಾ.ಪ್ರ.೨೮೪ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೩೪. | ವೈದ್ಯಸಂಗ್ರಹ | ತಾ.ಪ್ರ.೩೧೪ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೩೫. | ವೈದ್ಯಸಂಗ್ರಹ | ತಾ.ಪ್ರ.೨೦೫ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೩೬. | ವೈದ್ಯಸಂಗ್ರಹ | ತಾ.ಪ್ರ.೩೭೮ | – | ಶ್ಲೋ.ಟೀ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೩೭. | ವೈದ್ಯಸಂಗ್ರಹ | ತಾ.ಪ್ರ.೫೩೬ | – | ಶ್ಲೋ.ಟೀ | ಅಸಮಗ್ರ | ಕ.ಅ.ಸಂ.ಮೈ |
| ೩೩೮. | ವೈದ್ಯಸಂಗ್ರಹ | ತಾ.ಪ್ರ.೯೧೪.೨ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೩೯. | ವೈದ್ಯಸಂಗ್ರಹ | ತಾ.ಪ್ರ.೧೨೩೧ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೪೦. | ವೈದ್ಯಸಂಗ್ರಹ | ತಾ.ಪ್ರ.೬೬೫ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೪೧. | ವೈದ್ಯಸಂಗ್ರಹ | ಮೈ.ಫಿ.೧೦೩೮ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೪೨. | ವೈದ್ಯಸಂಗ್ರಹ | ಮೈ.ಫಿ.೧೧೬೯ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೪೩. | ವೈದ್ಯಸಂಗ್ರಹ | ಮೈ.ಫಿ.೧೨೬೮ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೪೪. | ವೈದ್ಯಸಂಗ್ರಹ | ಮೈ.ಫಿ.೨೦೧೫ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೪೫. | ವೈದ್ಯಸಂಗ್ರಹ | ತಾ.ಪ್ರ.೧೧೩ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೪೬. | ವೈದ್ಯಸಂಗ್ರಹ | ತಾ.ಪ್ರ.೩೫೫.೩ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೪೭. | ವೈದ್ಯಸಂಗ್ರಹ | ತಾ.ಪ್ರ.೩೬೯ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೪೮. | ವೈದ್ಯಸಂಗ್ರಹ | ತಾ.ಪ್ರ.೩೬೮.೧ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೪೯. | ವೈದ್ಯಸಂಗ್ರಹ | ತಾ.ಪ್ರ.೩೦೯.೨ | – | ಗದ್ಯ | ಅಸಮಗ್ರ | ರಾ.ಪ್ರಾ.ಅ ಸಂ.ಕೇ.ಶ್ರ.ಬೆ. |
| ೩೫೦. | ವೈದ್ಯಸಂಗ್ರಹ | ತಾ.ಪ್ರ.೪೧೧.೨ | – | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೫೧. | ವೈದ್ಯಸಂಗ್ರಹ | ತಾ.ಪ್ರ.೧೩೬೧ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೩೫೨. | ವೈದ್ಯಸಂಗ್ರಹ | ತಾ.ಪ್ರ.೧೩೪೦ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |
| ೩೫೩. | ವೈದ್ಯಸಂಗ್ರಹ | ಕಾ.ಪ್ರ.೫೦೬ | – | ಗದ್ಯ | ಅಸಮಗ್ರ | ಕ.ಅ.ಕೇ.ಬೆಂ |

| | | | | | | |
|---|---|---|---|---|---|---|
| ೩೫೪. | ವೈದ್ಯಸಂಗ್ರಹ | ತಾ.ಪ್ರ.೪೧೧.೨ | – | ಗದ್ಯ | ಅಸಮಗ್ರ | ಕ.ವಿ.ವಿ.ಧಾ |
| ೩೫೫. | ವೈದ್ಯಸಂಗ್ರಹ | ತಾ.ಪ್ರ.೫೩೬ | – | ಗದ್ಯ | ಅಸಮಗ್ರ | ಕ.ವಿ.ವಿ.ಧಾ |
| ೩೫೬. | ಸಕಲವೈದ್ಯ ಸಂಹಿತಾಸಾರಾರ್ಣವ | ತಾ.ಪ್ರ.೨೪೩ | ವೀರ ರಾಜೇಂದ್ರ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೫೭. | ಸಕಲವೈದ್ಯ ಸಂಹಿತಾಸಾರಾರ್ಣವ | ಕಾ.ಪ್ರ.೯೭ | ವೀರ ರಾಜೇಂದ್ರ | ಗದ್ಯ | ಸಮಗ್ರ | ಕ.ಅ.ಸಂ.ಮೈ |
| ೩೫೮. | ಸಕಲವೈದ್ಯ ಸಂಹಿತಾಸಾರಾರ್ಣವ | ಕಾ.ಪ್ರ.೮೯ | ವೀರ ರಾಜೇಂದ್ರ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೫೯. | ಸಕಲವೈದ್ಯ ಸಂಹಿತಾಸಾರಾರ್ಣವ | ತಾ.ಪ್ರ.೧೪೩೦.೨ | ವೀರ ರಾಜೇಂದ್ರ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೬೦. | ಸಕಲವೈದ್ಯ ಸಂಹಿತಾಸಾರಾರ್ಣವ | ತಾ.ಪ್ರ.೯೧೫ | ವೀರ ರಾಜೇಂದ್ರ | ಗದ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೬೧. | ವೈದ್ಯಸಾಂಗತ್ಯ | ತಾ.ಪ್ರ.೧೫೦೬.೩ | ಸಾಳ್ವ | ಸಾಂಗತ್ಯ | ಅಸಮಗ್ರ | ಕ.ಅ.ಸಂ.ಮೈ |
| ೩೬೨. | ವೈದ್ಯಸಾಂಗತ್ಯ | ತಾ.ಪ್ರ.೪೬೨ | ಸಾಳ್ವ | ಸಾಂಗತ್ಯ | ಅಸಮಗ್ರ | ಕ.ಅ.ಸಂ.ಮೈ |

ಈ ಮೇಲಿನ ಅವಲೋಕಿತ ವೈದ್ಯಶಾಸ್ತ್ರದ ಹಸ್ತಪ್ರತಿಗಳೆಲ್ಲವೂ ಸುಮಾರು ಒಂದುವರೆಸಾವಿರ ವರ್ಷಗಳ ಹಿಂದಿನಿಂದಲೂ ಭರತ ಖಂಡದ ಧಾರ್ಮಿಕ ಕೇಂದ್ರಗಳಲ್ಲಿ, ಸಾಂಸ್ಕೃತಿಕ ಕೇಂದ್ರಗಳಲ್ಲಿಯೂ, ಅರಮನೆಗಳಲ್ಲಿಯೂ ವಿದ್ವಾಂಸರ ಮತ್ತು ವಿದ್ಯಾಭಿಮಾನಿಗಳ ಮನೆಗಳಲ್ಲಿಯೂ ಹಸ್ತಪ್ರತಿ ಭಂಡಾರಗಳಲ್ಲಿ ಇದ್ದವು. ಅವುಗಳ ಪ್ರಯೋಜನವನ್ನು ಬಯಸಿದವರೆಲ್ಲರೂ ಪಡೆಯಬಹುದಾಗಿದ್ದಿತು. "ಆದರೆ ಇಂದಿನ ಅರ್ಥದಲ್ಲಿ ಅವು ಸಾರ್ವಜನಿಕ ಗ್ರಂಥಭಂಡಾರಗಳಲ್ಲ. ಅಂತಹ ಒಂದು ಆಧುನಿಕ ಕನ್ನಡ ಹಸ್ತಪ್ರತಿ ಭಂಡಾರವು ಅದು ಇತರ ಭಾಷೆಗಳ ಪ್ರತಿಗಳೊಂದಿಗೇ ಇರಲಿ ಎಂದು ಮದರಾಸಿನಲ್ಲಿ ಪ್ರಾರಂಭವಾಯಿತು. ಅದರ ತಾಯಿಬೇರು ಕರ್ನಲ್ ಮೆಕೆಂಜಿಯ ಸಂಗ್ರಹ. ಅದರಲ್ಲಿದ್ದ ಕನ್ನಡ ಹಸ್ತಪ್ರತಿಗಳ ಸಂಖ್ಯೆ೧೫೦, ಸಿ.ಪಿ.ಬ್ರೌನ್ ಮೊದಲಾದವರಿಂದ ಈ ಸಂಖ್ಯೆ ೧೫೪೦ಕ್ಕೆ ಏರಿತು"[೪]. ಈ ಸಂಸ್ಥೆಯು ಆರಂಭವಾದಾಗಿನಿಂದ ಸುಮಾರು ೭೦(ಎಪ್ಪತ್ತು) ವರ್ಷಗಳ ಕಾಲ ಹಸ್ತಪ್ರತಿಗಳನ್ನು ಸಂಗ್ರಹಿಸುವ ಮತ್ತು ಸಂರಕ್ಷಿಸುವ ಕಾರ್ಯ ಬಹುತೃಪ್ತಿಕರವಾಗಿ ನಡೆಯುತ್ತಿದ್ದಿತೆಂದು ಗೊತ್ತಾಗುತ್ತದೆ. ಈಗ ಅಲ್ಲಿದ್ದ ಎಲ್ಲಾ ಕನ್ನಡ ಹಸ್ತಪ್ರತಿಗಳು ಮೈಸೂರು ವಿಶ್ವವಿದ್ಯಾಲನಿಲಯ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಿಗೆ ವರ್ಗವಣೆಯಾಗಿವೆ. ಅವುಗಳಲ್ಲಿ ಹೆಚ್ಚಾಗಿ ವೈದ್ಯಶಾಸ್ತ್ರ ಮತ್ತು ಇತರ ಕಾವ್ಯಗಳ ಹಸ್ತಪ್ರತಿಗಳು ಮೈಸೂರಿಗೆ, ವೀರಶೈವ ಧರ್ಮದ ಹಸ್ತಪ್ರತಿಗಳು ಧಾರವಾಡಕ್ಕೆ ಬಂದಿವೆ.

೧೮೮೦ರಲ್ಲಿ ಸ್ಥಾಪನೆಯಾಗಿದ್ದ ಮೈಸುರು ಪ್ರಾಚ್ಯವಸ್ತು ಸಂಶೋಧನಾಲಯದಲ್ಲಿ ಅನೇಕ ಕನ್ನಡ ಮತ್ತು ಸಂಸ್ಕೃತ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿತ್ತು. ಅಲ್ಲಿನ ಕನ್ನಡದ ಎಲ್ಲಾ ಹಸ್ತಪ್ರತಿಗಳನ್ನು ೧೯೧೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ವಹಿಸಲಾಯಿತು. ಈಗ ಈ ಸಂಸ್ಥೆಯಲ್ಲಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯು ಹಸ್ತಪ್ರತಿಗಳ ಸಂರಕ್ಷಣಾ ಕಾರ್ಯ ಮುನ್ನಡೆಸಿಕೊಂಡು ಹೋಗುತ್ತಿದೆ. ಈಗ ಇಲ್ಲಿರುವ ಹಸ್ತಪ್ರತಿಗಳ ಸಂಖ್ಯೆ ಮದರಾಸಿನಿಂದ ಬಂದವೂ ಸೇರಿ ೬೦೦೦ಕ್ಕೂ ಮಿಕ್ಕಿವೆ. ಬೇರೆ ಬೇರೆ ರಾಜ್ಯಗಳ ಜೈನ ಭಂಡಾರಗಳ ಮೈಕ್ರೊಫಿಲ್ಮ ಮಾಡಿಸಿದ ಹಸ್ತಪ್ರತಿಗಳನ್ನು ಸೇರಿ ವೈದ್ಯಶಾಸ್ತ್ರದ ಹಸ್ತಪ್ರತಿಗಳ ಸಂಖ್ಯೆ೧೩೦.

೧೯೨೦ರಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಕರ್ನಾಟಕ ಇತಿಹಾಸ ಸಂಶೋಧನ ಮಂಡಳದ ಮುಖ್ಯ ಉದ್ದೇಶ ಕರ್ನಾಟಕ ಇತಿಹಾಸವನ್ನು ರಚಿಸುವುದಾಗಿದ್ದಿತು. ಆದರೂ ಅಲ್ಲಿ ಕೆಲವು ಹಸ್ತಪ್ರತಿಗಳು ಸಂಗ್ರಹಗೊಂಡಿವೆ. ಅವುಗಳಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳಿಲ್ಲ. ೧೯೩೯ರಲ್ಲಿ ಸ್ಥಾಪಿತವಾದ ಕನ್ನಡ ಸಂಶೋಧನಾ ಸಂಸ್ಥೆಯು ೪೫೦೦ ಕನ್ನಡ ಹಸ್ತಪ್ರತಿಗಳನ್ನು ಸಂಗ್ರಹಿಸಿದೆ. ಇದರಲ್ಲಿ ಫ.ಗು.ಹಳಕಟ್ಟಿ ಅವರ ಸಂಗ್ರಹವು ಸೇರಿವೆ. ಇದರಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು ಕೇವಲ ೩೦. ಬೆಂಗಳೂರು ಜ್ಞಾನಭಾರತಿಯ ಕನ್ನಡ ಅಧ್ಯಯನ ಕೇಂದ್ರದಲ್ಲಿ ಸುಮಾರು ೩೦೦೦ ಕನ್ನಡ ಹಸ್ತಪ್ರತಿಗಳಿದ್ದು ಅವುಗಳಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು ಸು.೬೦. ಕನ್ನಡ ಅಧ್ಯಯನ ಕೇಂದ್ರ ಗುಲಬುರ್ಗಾ ವಿಶ್ವವಿದ್ಯಾಲಯದಲ್ಲಿಯೂ ಹಸ್ತಪ್ರತಿ ಭಂಡಾರವಿದ್ದು ಅದರಲ್ಲಿ ಸು.೫೦೦ ಹಸ್ತಪ್ರತಿಗಳಿದ್ದು ವೈದ್ಯಶಾಸ್ತ್ರದ ಹಸ್ತಪ್ರತಿಗಳು ಸು.೨೦. ಕನ್ನಡ ಸಾಹಿತ್ಯ ಪರಿಷತ್ತಿನ ಕೇಂದ್ರ ಕಚೇರಿಯಲ್ಲಿ ನೂರಾರು ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿದೆ. ಅವುಗಳಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು ಸುಮಾರು ೧೫. ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿಯೂ ೧೦ ವೈದ್ಯಶಾಸ್ತ್ರದ ಹಸ್ತಪ್ರತಿಗಳಿವೆ.

ಹತ್ತೊಂಬತ್ತನೆಯ ಶತಮಾನದ ಆರಂಭ ಕಾಲದಿಂದಲೂ ಕನ್ನಡ ನಾಡಿನ ಹಲವು ಸಂಸ್ಥೆಗಳು ಹಲವಾರು ಜನ ವ್ಯಕ್ತಿಗಳು ಸಾಹಿತ್ಯ ಪ್ರಚಾರ, ಧರ್ಮಪ್ರಸಾರ, ಶಾಸ್ತ್ರಪ್ರಸಾರ ಮಾಡುವ ಉದ್ದೇಶದಿಂದ ಹಸ್ತಪ್ರತಿಗಳನ್ನು ಸಂಗ್ರಹಿಸುತ್ತಲೂ ಗ್ರಂಥ ಪ್ರಕಟಣೆ ಮಾಡುತ್ತಲೂ ಬಂದಿರುವರು. ಕನ್ನಡ ನಾಡಿನ ಮತ್ತು ಕನ್ನಡದ ನೆರೆ ನಾಡಿನ ಮಠೀಯ ಸಂಸ್ಥೆಗಳಲ್ಲಿ ಹಸ್ತಪ್ರತಿಗಳ ದೊಡ್ಡ ದೊಡ್ಡ ರಾಶಿಗಳೇ ಬಿದ್ದಿವೆ. ಶ್ರವಣಬೆಳಗೊಳ, ಮೂಡಬಿದಿರೆ, ಹೊಂಬುಚ, ವರಾಂಗ, ಕಾರಂಜಿಯಾ, ಕಾರ್ಕಳ, ಇಲ್ಲಿರುವ ಜೈನ ಮಠಗಳಲ್ಲಿ, ಕೋಲಾರದ ಲಕ್ಷೀಸೇನ ಭಟ್ಟಾರಕರ ಬಸದಿಯಲ್ಲಿ, ಮೂಡಬಿದಿರೆಯ ಸಿದ್ಧಾಂತ ಭವನದಲ್ಲಿ ಜೈನ ಹಸ್ತಪ್ರತಿಗಳ ಸಂಗ್ರಹಗಳಿವೆ. ಶೃಂಗೇರಿ, ಉಡುಪಿ, ಮೇಲುಕೋಟೆ, ರಾಮಚಂದ್ರಾಪುರ, ಧರ್ಮಸ್ಥಳ. ಮುಂತಾದ ಬ್ರಾಹ್ಮಣರ ಮಠಗಳಲ್ಲಿ ಮತ್ತು ಸಿರಿಗೆರೆಯ ಬ್ರಹನ್ಮಠ, ಚಿತ್ರದುರ್ಗದ ಮುರುಘಾಮಠ, ಹೂಲಿಯ ಪಂಚವಣಿಗೆ ಮಠ, ಹೊಸಪೇಟೆಯ ಕೊಟ್ಟುರುಸ್ವಾಮಿಯ ಮಠ, ಹುಬ್ಬಳ್ಳಿಯ ಮೂರುಸಾವಿರ ಮಠ, ಗದಗ ತೋಂಟದಾರ್ಯ ಮಠ, ಅನಂತಪುರ ಮುರುಘಾಮಠ, ಅಥಣಿಯ ಮುರುಘಾಮಠ, ಬಾದಾಮಿಯ ಬಳಿ ಇರುವ ಶಿವಯೋಗಮಂದಿರ ಮುಂತಾದ ವೀರಶೈವ ಮಠಮಾನ್ಯಗಳಲ್ಲಿ ಕನ್ನಡ ಹಸ್ತಪ್ರತಿಗಳಿವೆ. ಅಲ್ಲದೆ ಇನ್ನೂ ಕೆಲವು ವೈಯಕ್ತಿಕ ಮನೆಗಳಲ್ಲೂ ಹಲವು ಕನ್ನಡ ಹಸ್ತಪ್ರತಿಗಳಿವೆ. ಇವುಗಳಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳೂ ಹರಡಿವೆ. ಕ್ಷೇತ್ರಕಾರ್ಯದಿಂದ ಹಲವು ಸಂಸ್ಥೆಯಲ್ಲಿರುವ ವೈದ್ಯಶಾಸ್ತ್ರದ ಹಸ್ತಪ್ರತಿಗಳನ್ನು ಮೇಲಿನ ಪಟ್ಟಿಯಲ್ಲಿ ನೀಡಲಾಗಿದೆ.

ಇಡೀ ಕರ್ನಾಟಕದ ಎಲ್ಲ ಹಸ್ತಪ್ರತಿಗ ಭಂಡಾರಗಳನ್ನು ಅವಲೋಕಿಸಿದಾಗ ಮೈಸೂರಿನಲ್ಲಿ ಪ್ರಾಚ್ಯವಿದ್ಯಾ ಸಂಶೋಧನಾಲಯ ಮತ್ತು ಕನ್ನಡ ಅಧ್ಯಯನ ಸಂಸ್ಥೆಯವರಿಂದ ಹಸ್ತಪ್ರತಿಗಳ ಅನ್ವೇಷಣೆ ತಕ್ಕಮಟ್ಟಿಗೆ ನಡೆದಿದೆಯೆಂದು ಹೇಳಬಹುದು. ಆದರೆ ಯೋಜನಾಬದ್ಧವಾಗಿ ಪರಿಷ್ಕಾರ ನಡೆದಿಲ್ಲ. ಉತ್ತರ ಕರ್ನಾಟಕ ಭಾಗದಲ್ಲಿ ಕನ್ನಡ ವಿಶ್ವವಿದ್ಯಾಲಯವು ಇತ್ತೀಚೆಗೆ ಈ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಶ್ರವಣಬೆಳಗೊಳ ಮತ್ತು ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಸಂಸ್ಥೆ ಧಾರವಾಡದಲ್ಲಿ ಸಂರಕ್ಷಣೆ ಮತ್ತು ಸಂಪಾದನಾ ಕಾರ್ಯ ನಡೆಯುತ್ತಿದೆ. ಮಲೆನಾಡು ಹಾಗೂ ಕರಾವಳಿ ಪ್ರದೇಶಗಳಾದ ಕೊಡಗು, ಕೊಳ್ಳೆಗಾಲ, ಉತ್ತರ ಕನ್ನಡ, ದಕ್ಷಿಣ ಕನ್ನಡ ಪ್ರಾಂತ್ಯಗಳಲ್ಲಿಯೂ ಈ ಕೆಲಸ ಇನ್ನೂ ಮುಂದೆ ನಡೆಯಬೇಕಾಗಿದೆ. ಕರ್ನಾಟಕದಿಂದ ಹೊರಗುಳಿದಿರುವ

ಸೊಲ್ಲಾಪುರ, ಕೊಲ್ಲಾಪುರ, ಅಕ್ಕಲಕೋಟೆ, ಕಾಸರಗೋಡು, ಆಲೂರು, ಆದವಾನಿ, ಹೊಸೂರು, ಕೋಯಿಮತ್ತೂರು, ವೈನಾಡು, ನಿಲಗಿರಿ ಮುಂತಾದ ಕಡೆಗಳಲ್ಲಿ ಸಹಸ್ರಾರು ಕನ್ನಡ ಹಸ್ತಪ್ರತಿಗಳು ಇವೆ ಎಂದು ತಿಳಿದುಬರುತ್ತದೆ. ಹೀಗೆ ಕನ್ನಡನಾಡಿನ ಒಳಗೆ, ಹೊರಗೆ ಇರಬಹುದಾದ ಕನ್ನಡ ಹಸ್ತಪ್ರತಿಗಳಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು ಇರಲೇಬೇಕು. ಏಕೆಂದರೆ ಇವುಗಳು ಕೇವಲ ಕೆಲ ಜನಾಂಗೀಯ, ಧರ್ಮಿಯ ವರ್ಗದವರಿಗೆ ಮಾತ್ರ ಸೀಮಿತವಾದವುಗಳಲ್ಲ. ಎಲ್ಲಾ ಜನಾಂಗದವರಿಗೂ, ಧರ್ಮಿಯರಿಗೂ ಅತ್ಯಮೂಲ್ಯವಾದ ಜೀವನೋಪಯೋಗಿ ಗ್ರಂಥಗಳಾಗಿದ್ದವು. ಆದ್ದರಿಂದ ಎಲ್ಲಾ ಜನಾಂಗದವರು, ಧರ್ಮಿಯರು ಅವುಗಳನ್ನು ಇಟ್ಟುಕೊಂಡಿರುತ್ತಾರೆ. ಇವೆಲ್ಲವುಗಳು ಅನ್ವೇಷಕರ ಬರವನ್ನೇ ಹಾರೈಸುತ್ತಿವೆ. ಆದರೆ ಈ ಕಾರ್ಯ ಒಬ್ಬರೇ ಸ್ವಂತ ಖರ್ಚಿನಿಂದ ಕೈಗೊಳ್ಳುವ ಕಾರ್ಯವಲ್ಲ. ಆದುದರಿಂದ ಹಸ್ತಪ್ರತಿಗಳ ಸಂಶೋಧನೆ ಕರ್ನಾಟಕ ಮತ್ತು ಅದರ ನೆರೆನಾಡಿನಲ್ಲಿರುವ ನಗರಗಳಲ್ಲಿ, ಹಳ್ಳಿಗಳಲ್ಲಿ ಅತಿ ತ್ವರಿತವಾಗಿ ಸರ್ಕಾರದಿಂದ ನಡೆಯಬೇಕಾದ ಕಾರ್ಯ. ಈ ಅಧ್ಯಯನಕ್ಕೆ ಹಸ್ತಪ್ರತಿ ಭಂಡಾರಗಳಲ್ಲಿ ಸಂಗ್ರಹಗೊಂಡಿರುವ ಪ್ರತಿಗಳನ್ನು ಮಾತ್ರ ಗಮನಿಸಿ ಅಧ್ಯಯನ ಮಾಡಲಾಗಿದೆ.

**೨.೩. ಪ್ರಕಟಿತ ಮತ್ತು ಅಪ್ರಕಟಿತ ವೈದ್ಯಶಾಸ್ತ್ರ ಹಸ್ತಪ್ರತಿಗಳ ಸ್ವರೂಪ ಮತ್ತು ವೈವಿಧ್ಯ**

ಯಾವುದೇ ಭಾಷೆಯ ಪ್ರಾಚೀನ ಸಾಹಿತ್ಯವನ್ನು ಅನುಲಕ್ಷಿಸಿದಾಗ ಅದು ಪದ್ಯ ಪ್ರಕಾರದಿಂದಲೇ ಸೃಷ್ಟಿಯಾದದ್ದು ಹೆಚ್ಚಾಗಿ ಕಂಡುಬರುತ್ತದೆ. ಅದರಂತೆ ನಮ್ಮ ಪೂರ್ವಿಕರು ಸಕಲ ಶಾಸ್ತ್ರಗಳನ್ನು ಪದ್ಯರೂಪದಲ್ಲಿ ಬರೆದರು. ಆದರೆ ಶಾಸ್ತ್ರಸಾಹಿತ್ಯ ಸ್ವರೂಪದ ದೃಷ್ಟಿಯಿಂದ ಕಾವ್ಯ ಗ್ರಂಥಗಳಷ್ಟು ವಿಶಾಲವಾದ ಕ್ಷೇತ್ರವಲ್ಲದಿದ್ದರೂ 'ಅಲ್ಪದರಲ್ಲಿಯೇ ಕಲ್ಪವನ್ನು' ಒದಗಿಸುವಂತಹದ್ದು. ಶಾಸ್ತ್ರಜ್ಞಾನವನ್ನು ಕುರಿತು ರತ್ನಾಕರಾಧೀಶ್ವರ ಶತಕದಲ್ಲಿ ಹೀಗೆ ವಿವರಿಸುತ್ತದೆ.

"ಶಾಸ್ತ್ರಂ ಬಂದೊಡೆ ಶಾಂತಿ ನಿಗರ್ವ ನೀತಿ ಮೇಲ್ವಾತು ಮು
ಕ್ತಿಸ್ತ್ರೀ ಚಿಂತೆ ನಿಜಾತ್ಮ ಚಿಂತೆ ನಿಲವೇಟ್ಕಂತಲ್ಲದಡೆ ಆ ಶಾಸ್ತ್ರದಿಂ
ದುಸ್ತ್ರೀಚಿಂತನೆ ದುರ್ಮುಖಂ ಕಲಹಂ ಉದಗರ್ವ ಮನಂಗೊಂಡೊಡಾ
ಶಾಸ್ತ್ರಂಶಸ್ತ್ರ ಮೆ, ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾಧೀಶ್ವರ"

ಪ್ರಾಚೀನ ಗ್ರಂಥಗಳಲ್ಲಿ ಗದ್ಯಗ್ರಂಥಗಳೇ ವಿರಳ. ಗದ್ಯದಲ್ಲಿ ಬರೆಯುವುದಕ್ಕಿಂತ ಛಂದೋಬದ್ಧವಾದ ಪದ್ಯದಲ್ಲಿ ಬರೆದರೆ ಹೆಚ್ಚುಕಾಲ ಸ್ಮರಣೆಯಲ್ಲಿಟ್ಟುಕೊಳ್ಳಲು ಸಹಾಯಕ ಎಂದು ಕವಿಗಳು, ಶಾಸ್ತ್ರಜ್ಞರು ಭಾವಿಸಿರಬೇಕು. ಶಾಸ್ತ್ರವನ್ನು ಶ್ಲೋಕ ಅಥವಾ ಪದ್ಯರೂಪದಲ್ಲಿ ಬರೆಯುತ್ತಿದ್ದುದರ ಕಾರಣವನ್ನು ಕುರಿತು ಎಂ.ವಿ.ಸೀತಾರಾಮಯ್ಯ ಈ ರೀತಿ ವಿವರಣೆ ಕೊಡುತ್ತಾರೆ. "ಕಾವ್ಯವನ್ನು ನೆನಪಿನಲ್ಲಿಟ್ಟುಕೊಳ್ಳಬೇಕಾದ ಅಗತ್ಯವಿಲ್ಲ. ಆದರೆ ಶಾಸ್ತ್ರವನ್ನು ನೆನಪಿನಲ್ಲಿಟ್ಟುಕೊಳ್ಳುವ ಅಗತ್ಯವಿತ್ತು. ಮುದ್ರಣ ಸೌಕರ್ಯವಿಲ್ಲದ ಪ್ರಾಚೀನಕಾಲದ ಶಿಷ್ಯರು ಶಾಸ್ತ್ರಜ್ಞಾನವನ್ನು ಗುರುಮುಖದಿಂದ ಕಲಿತು ಬಾಯಿಪಾಠ ಮಾಡಿ ನೆನಪಿನಲ್ಲಿ ಇಟ್ಟುಕೊಳ್ಳುವುದು ಅನಿವಾರ್ಯವಾಗಿತ್ತು. ಹೀಗಾಗಿ ಸಂದೇಹಕ್ಕೆ ಆಸ್ಪದಕೊಡದ ನೇರ ಶ್ಲೋಕಗಳಲ್ಲಿ ರಚಿಸುವ ಪದ್ಧತಿಯನ್ನು ಕಾಣಬಹುದು"[೫].

ಮನುಷ್ಯನ ದೈಹಿಕ ಆರೋಗ್ಯ, ಮಾನಸಿಕ ನೆಮ್ಮದಿಗೆ ಸಂಬಂಧಪಟ್ಟ ವೈದ್ಯಶಾಸ್ತ್ರ ಗ್ರಂಥಗಳು ಅವುಗಳ ಶೈಲಿ, ಅಲಂಕಾರ, ಬೆಡಗು, ಬಣ್ಣವನ್ನು ಹೊಂದಿರಬೇಕಾಗಿಲ್ಲ. ಪ್ರತಿಯಾಗಿ ಇದಕ್ಕೆ ಬೇಕಾದುದು ಸ್ಪಷ್ಟತೆ,

ಖಚಿತತೆ. ಅಂದರೆ ಇಲ್ಲಿ ವಾಸ್ತವ ಅರಿವಿಗೆ ಮತ್ತು ಅನುಭವಕ್ಕೆ ಪ್ರಾಧಾನ್ಯವೇ ಹೊರತು ಊಹೆ ಕಲ್ಪನೆಗಳಿಗಲ್ಲ. ಈ ಕುರಿತು ಅನೇಕ ಶಾಸ್ತ್ರಜ್ಞರು ತಮ್ಮ ಗ್ರಂಥದಲ್ಲಿ ಹೇಳಿಕೊಂಡಿದ್ದಾರೆ. ಕನ್ನಡ ವೈದ್ಯಶಾಸ್ತ್ರ ಗ್ರಂಥಗಳು ಕಂದ, ಚಂಪೂ, ಸಾಂಗತ್ಯ, ಹಾಗೂ ಗದ್ಯ ಪ್ರಕಾರಗಳಲ್ಲಿ ರಚನೆಯಾಗಿದ್ದು, ತನ್ನದೇ ಆದ ಸ್ವರೂಪವನ್ನು ಹೊಂದಿವೆ. ಜನೋಪಯೋಗಿ ಕೃತಿಗಳೆಂದೇ ಪ್ರಸಿದ್ಧಿ ಪಡೆದ ಇವುಗಳನ್ನು ಶಾಸ್ತ್ರಜ್ಞರು ಜನರ ಹಿತಕ್ಕಾಗಿ ರಚಿಸಿದ್ದಾಗಿ ಹೇಳಿಕೊಂಡಿದ್ದಾರೆ. ಈ ಬಗೆಯ ಗ್ರಂಥಗಳನ್ನು ಮೀಮಾಂಸಕರು ಲೌಕಿಕ ಗ್ರಂಥಗಳೆಂದೇ ಗುರುತಿಸುತ್ತಾರೆ.

ಲೋಕೋಪಕಾರಕ್ಕಾಗಿಯೇ ಹುಟ್ಟಿಕೊಂಡ ವೈದ್ಯಶಾಸ್ತ್ರ ಕೃತಿಗಳು ಮಾರ್ಗ ಸಾಹಿತ್ಯವನ್ನು ತೊರೆದು ದೇಶಿಛಂದಸ್ಸಿನಲ್ಲಿ ರಚನೆಯಾಗಿದ್ದಲ್ಲದೆ, ಸಾಮಾನ್ಯರಿಗೂ ಅರ್ಥವಾಗಲೆಂಬ ಉದ್ದೇಶದಿಂದ ಟೀಕು, ವ್ಯಾಖ್ಯಾನ, ಭಾಷ್ಯ, ಭಾವಾನುವಾದಗಳಂಥ ಗ್ರಂಥಗಳು ಹುಟ್ಟಿಕೊಂಡವು. ರಾಘವಾಂಕ ಹೇಳುವ 'ಜನ ಬದುಕಲೆಂದತಿ ಕೃತಾರ್ಥತೆಯಿಂದ ನಿರಪೇಕ್ಷೆಯಿಂದ' ಎಂಬ ಮಾತನ್ನು ಗಮನಿಸುವುದಾದರೆ, 'ಜೀವನಕ್ಕಾಗಿ ಕಾವ್ಯ' ಎಂಬ ಸೈದ್ಧಾಂತಿಕ ಮನೋಧರ್ಮ ಕವಿಗಳಲ್ಲಿ ಗಾಢವಾಗಿತ್ತು. ಈ ಧೋರಣೆಗೆ ವೈದ್ಯಶಾಸ್ತ್ರ ಕವಿಗಳು ಹೊರತಾಗಿಲ್ಲ.

ಈ ಹಿನ್ನೆಲೆಯಲ್ಲಿ ವೀರರಾಜೇಂದ್ರನ 'ಸಕಲವೈದ್ಯಸಂಹಿತಾಸಾರಾರ್ಣವ' (ಗದ್ಯ); ಬೊಮ್ಮಯ್ಯನ 'ವೈದ್ಯಕಂದ'(ಕಂದ); ಮಂಗರಾಜನ 'ಖಗೇಂದ್ರಮಣಿಮಣಿ ದರ್ಪಣಂ'(ಚಂಪೂ); ಜಗದ್ದಳ ಸೋಮನಾಥನ 'ಕರ್ನಾಟಕ ಕಲ್ಯಾಣಕಾರಕ' (ಕಂದ, ವೃತ್ತ); ದೇವೇಂದ್ರಮುನಿಯ 'ಬಾಲಗ್ರಹ ಚಿಕಿತ್ಸೆ (ಗದ್ಯ); ಚಿಕ್ಕುಪಾಧ್ಯಾಯನ 'ಆರೋಗ್ಯಾಮೃತವೆಂಬ ಕರ್ನಾಟಕ ವೈದ್ಯಸಾರ ಸಂಗ್ರಹ '(ಗದ್ಯ); ಸಾಳ್ವನ 'ವೈದ್ಯಸಾಂಗತ್ಯ' (ಸಾಂಗತ್ಯ); ಕೀರ್ತಿವರ್ಮನ 'ಗೋವೈದ್ಯ' (ಗದ್ಯ, ಪದ್ಯ); ಶ್ರೀಧರದೇವನ 'ವೈದ್ಯಾಮೃತ' (ಚಂಪು); ವಲ್ಲಭೇಂದ್ರನ 'ವೈದ್ಯಚಿಂತಾಮಣಿ' (ಶ್ಲೋಕ ಟೀಕು); ನರಸಿಂಹಶಾಸ್ತ್ರಿಗಳ 'ವೈದ್ಯಸಾರ ಸಂಗ್ರಹ' (ಶ್ಲೋ.ಟೀ); ರಂಗಪ್ಪ ಬಳಗಾನೂರರ 'ವೈದ್ಯಶಾಸ್ತ್ರ' (ಗದ್ಯ). ಇವು ಕನ್ನಡ ವೈದ್ಯಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಪ್ರಮುಖ ಕೃತಿಗಳು. ವೈದ್ಯಶಾಸ್ತ್ರ, ವೈದ್ಯಗ್ರಂಥ, ವೈದ್ಯಪುಸ್ತಕ, ವೈದ್ಯಪ್ರಮೆ ಇತ್ಯಾದಿ ಹೆಸರು ಹೊಂದಿರುವ ಅನೇಕ ಹಸ್ತಪ್ರತಿಗಳು ಗದ್ಯ, ಶ್ಲೋಕ–ಟೀಕು. ರೂಪದಲ್ಲಿ ರಚನೆಯಾಗಿವೆ. ಈ ಎಲ್ಲ ಕೃತಿಗಳು ಸಾಮಾನ್ಯವಾಗಿ ಕಂದ, ಷಟ್ಪದಿ, ಸಾಂಗತ್ಯ, ಗದ್ಯ ಪ್ರಕಾರಗಳಲ್ಲಿ ರಚನೆಗೊಂಡಿರುವುದನ್ನು ಕಾಣುತ್ತೇವೆ. ಈ ರೀತಿ ವೈದ್ಯಶಾಸ್ತ್ರ, ಗ್ರಂಥಗಳು ಸ್ವರೂಪದ ದೃಷ್ಟಿಯಿಂದ ವೈವಿಧ್ಯಪೂರ್ಣವಾದ ದೇಶೀ ಛಂದೋಬಂದಗಳಲ್ಲಿ ರಚನೆಗೊಂಡಿವೆ.

### ೨.೨.೧. ಪ್ರಕಟಿತ ಹಸ್ತಪ್ರತಿಗಳು

### ೨.೨.೧.೧. ಖಗೇಂದ್ರಮಣಿದರ್ಪಣಂ

ಈ ಕೃತಿಯನ್ನು ಒಂದನೇ ಮಂಗರಾಜ ಬರೆದಿದ್ದಾನೆ. ಇವನು ಜೈನಕವಿ. ಹೊಯ್ಸಳ ರಾಜ್ಯದಲ್ಲಿಯ ದೇವಳಿಗೆಯೆಂಬ ನಾಡಿನ ಮುಗಳಿಪುರದ ವಿಭು. ಕಾಲ ಕ್ರಿ.ಶ.ಸು.೧೩೬೦. ಈತನು ರಾಜನಾಗಿದ್ದು ಇಂಥ ಶಾಸ್ತ್ರಗ್ರಂಥವನ್ನು ರಚಿಸಿದ್ದು ವಿಶೇಷ. ಈತನಿಗೆ ಸುಲಲಿತ, ಕವಿಪಿತಸಂತ, ವಿಭುವಂಶಲಲಾಮ, ಕವಿಜನೈಕಮಿತ್ರ ಮೊದಲಾದ ಹಲವು ಬಿರುದುಗಳಿದ್ದವು. ಈ ಕೃತಿ ಚಂಪೂಬಂಧದಲ್ಲಿ ರಚಿತವಾಗಿದ್ದು ೧೯೪೨ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಶ್ರೀ.ಎಂ.ವೆಂಕಟರಾಮ್ ಮತ್ತು ಪಂಡಿತ ಎಚ್.ಶೇಷಯ್ಯಂಗಾರ್ ಅವರಿಂದ ಸಂಪಾದಿತವಾಗಿ ಪ್ರಕಟವಾಗಿತ್ತು. ಇತ್ತೀಚಿಗೆ ಶ್ರೀ.ಬಿ.ಎಸ್.ಸಣ್ಣಯ್ಯನವರಿಂದ ಸಂಪಾದನೆಗೊಂಡು ಗದ್ಯ ಸಮೇತ ಕನ್ನಡ ಸಾಹಿತ್ಯ ಪರಿಷತ್ತಿನಿಂದ ೨೦೦೪ರಲ್ಲಿ ಪ್ರಕಟಗೊಂಡಿದೆ. ಇವರು ತಮ್ಮ ಸಂಪಾದನೆಗೆ 'ಕ' ಮೈಸೂರ

ಬೊಮ್ಮರಸ ಪಂಡಿತರಲ್ಲಿದ್ದ ತಾಳಪ್ರತಿ. 'ಖ' ಆರಾ ಜೈನ ಲೈಬ್ರರಿಯಲ್ಲಿರುವ ತಾಳಪ್ರತಿ. 'ಗ' ಗೋವಿಂದ ಪೈಗಳ ವಶದಲ್ಲಿದ್ದದು. 'ಘ' ಬೆಂಗಳೂರಿನ ಭಿಷಗ್ರತ್ನಂ ಹೆಚ್.ನರಸಿಂಹಶಾಸ್ತ್ರಿಗಳು ಕಳುಹಿಸಿಕೊಟ್ಟ ಪ್ರತಿ. 'ತ' ಮೂಡಬಿದಿರೆಯ ಶ್ರೀಮಾನ್ ಲೋಕನಾಥಶಾಸ್ತ್ರಿಗಳು ಕಳುಹಿಸಿಕೊಟ್ಟ ಪ್ರತಿ. 'ಜ' ಮತ್ತು 'ಶ್ರ' ಶ್ರವಣಬೆಳಗೊಳದ ಆಗಮ ದರ್ಶನ ಹಸ್ತಪ್ರತಿ ಭಂಡಾರದಲ್ಲಿರುವ ಕೆಎ ೧೭ ಸಂಖ್ಯೆಯ ಕಾಗದ ಪ್ರತಿ ಮತ್ತು ಕೆ೨೭೮ ಸಂಖ್ಯೆಯ ಓಲೆಯ ಪ್ರತಿ. 'ಅ' ಎಚ್.ಶೇಷಯ್ಯಂಗಾರ್ ಅವರು ತಮ್ಮ ಪರಿಷ್ಕರಣದಲ್ಲಿ ಅಂಗೀಕರಿಸಿರುವ ಪಾಠ. ಇವೆಲ್ಲವುಗಳನ್ನು ಬಳಸಿಕೊಂಡು ಸಂಪಾದಿಸಿದ್ದಾರೆ.

'ಖಗೇಂದ್ರಮಣಿಮಣಿ ದರ್ಪಣಂ'ದಲ್ಲಿ ೧೬ ಅಧಿಕಾರಗಳಿವೆ. ಕವಿಯು ಆದಿಯಲ್ಲಿ ಶಿಷ್ಟಾಚಾರವನ್ನನುಸರಿಸಿ ಗ್ರಂಥದ ನಿರ್ವಿಘ್ನತಾ ಪರಿಸಮಾಪ್ತಿಗಾಗಿ ತಾನು ಜೈನಮತದವನಾದುದರಿಂದ ಜೈನ ಸಂಪ್ರದಾಯದಂತೆ ಪಂಚಮೇಷ್ಠಿಗಳು, ಸರಸ್ವತಿ, ಯಕ್ಷ ಯಕ್ಷಿಯರನ್ನು ಸ್ತುತಿಸಿ; ಪೂಜ್ಯಪಾದರು, ವೀರಸೇನ, ಕುಂದಕುಂದಮುನಿ ಮತ್ತು ಭಾನುಕೀರ್ತಿ, ಮಲಧಾರಿ, ಸೋಮ, ಲಕ್ಷ್ಮೀಸೇನ, ಮಾಣಿಕ್ಯನಂದಿ, ಕೇಶವವರ್ಯ ಮುಂತಾದವರನ್ನು ವಂದಿಸಿ "ಖಗೇಂದ್ರಮಣಿದರ್ಪಣಂ'ವೆಂಬ ವಿಷವೈದ್ಯಶಾಸ್ತ್ರವನ್ನು ಬರೆಯುವುದಾಗಿ ಪ್ರತಿಜ್ಞೆ ಮಾಡಿರುವನು. ಈ ಗ್ರಂಥದಲ್ಲಿ ಸ್ಥಾವರವಿಷ ಪ್ರಕ್ರಿಯೆಯ ಭಾಗವನ್ನು ಪೂಜ್ಯಪಾದನ ಕಲ್ಯಾಣಕಾರಕ ವೈದ್ಯಗ್ರಂಥದಿಂದ ಸಂಗ್ರಹಿಸಿರುವಂತೆ ಈ ಪದ್ಯದಲ್ಲಿ ಹೇಳುತ್ತಾನೆ.

"ಪುರಜಿವಚನಾಮಭೋರಾಶಿಯೊಳ್ ತಮ್ಮಧೀಮಂ।
ದಂಸುಮಥನಜಾತಂ ವೈದ್ಯಶಾಸ್ತ್ರಮೃತಂ ತ॥
ದ್ವರಮುನಿಪತಿಪ್ಪೀಪೂಜ್ಯಪಾದೋಕ್ತಿಯೊಳ್ ಸ್ಥಾ।
ವರ ವಿಷಹರಮಂ ಸಂಕ್ಷೇಪದಿಂದೊಪ್ಪ ಪೇಳ್ದೆಂ॥"

(ಖಗೇಂದ್ರಮಣಿಮಣಿ ದರ್ಪಣಂ ೨-೨೧೬)

ಮೊದಲನೆಯ ಅಧಿಕಾರದಲ್ಲಿ : ವಿಷವು ಹತ್ತು ವಿಧವಾಗಿರುವುದು. ಅವು ಸ್ಥಾವರ, ಜಂಗಮ, ಕೃತ್ರಿಮಗಳೆಂದು ಮೂರು ಬಗೆ. ಸ್ಥಾವರವು ೨೫ ವಿಧ. ಅವುಗಳಲ್ಲಿ ಎಂಟು ಜಾತಿಗಳುಂಟು ಸ್ವಶಾನಾದಿ ವಿಷಮ ಸ್ಥಳದಲ್ಲಿರುವ ಸರ್ಪದಷ್ಟನ ವಿಷೋದ್ಧರಣವು ಚಿಕಿತ್ಸೆಗೆ ಅಸಾಧ್ಯವಾದುದು. ಔಷಧಿಗಳ ಸಂಗ್ರಹಣಕಾಲ, ಔಷಧದಲ್ಲಿ ಪ್ರಸವಾದಿ ಪಂಚವಿಧಗಳ ಉತ್ತರೋತ್ತರ ಶಕ್ತ್ಯಾಧಿಕ್ಯ, ಸದ್ವೈದ್ಯಲಕ್ಷಣ, ದುರ್ವೈದ್ಯಲಕ್ಷಣ ಇವುಗಳನ್ನು ಹೇಳಿರುವನು.

ಎರಡನೆಯ ಅಧಿಕಾರ : ಸ್ಥಾವರ ವಿಷಭೇದ, ವಿಷಕ್ರಾಂತ ಲಕ್ಷಣ ಇವುಗಳ ಪರಿಹಾರಕ್ಕೆ ನಸ್ಯ, ಪೇಯ, ಲೇಪ, ಅಂಜನಾದಿ ನಾಲ್ಕು ಬಗೆಯ ಔಷಧಗಳು, ಮಂತ್ರಗಳು ಇವೆ.

ಮೂರನೆಯ ಅಧಿಕಾರ : ಇಲ್ಲಿ ದಷ್ಟನಿಗೆ ಮಾಡತಕ್ಕ ಸಂಗ್ರಹಾದಿ ಎಂಟು ಬಗೆಯ ಕಾರ್ಯಗಳು, ಅಷ್ಟಕುಲ ಸರ್ಪಲಕ್ಷಣ, ಅವುಗಳ ದಂಶಪ್ರಕಾರ, ಲಕ್ಷಣ, ದಂಶನವಾರ, ವೈದ್ಯ ಅಥವಾ ಮಾಂತ್ರಿಕನಲ್ಲಿ ಬರುವ ಧೂತ ಲಕ್ಷಣದಿಂದ ಸಾಧ್ಯಾಸಾಧ್ಯ ನಿಶ್ಚಯ ಮೊದಲಾಗಿ ಹಲವು ಬಗೆಯ ದಷ್ಟಶೋಧನ ಪ್ರಕಾರಗಳು ಉಕ್ತವಾಗಿವೆ.

ನಾಲ್ಕನೆಯ ಅಧಿಕಾರಲ್ಲಿ : ದಷ್ಟನಿಗೆ ಮಾಡತಕ್ಕ ಸಂಗ್ರಹಾದ್ಯಷ್ಟ ವಿಧ ಶೋಧನ ಕಾರ್ಯವಿಧಾನವು ಹಲವು ಮಂತ್ರಗಳೊಡನೆ ಹೇಳಲಾಗಿದೆ. ಐದನೆಯ ಅಧಿಕಾರದಲ್ಲಿ : ವಿಷಯವನ್ನು ನಿರ್ಮೂಲಿಸುವ ಹಲವು

ಬಗೆಯ ಪಾನೌಷಧಿಗಳು ಮಂತ್ರಗಳೊಡನೆ ಹೇಳಲಾಗಿದೆ. ಆರನೆಯ ಅಧಿಕಾರ : ಇದರಲ್ಲಿ ವಿಷಹರಣಕ್ಕೆ ತಕ್ಕ ಹಲವು ಅಂಜನಗಳನ್ನು ಹೇಳಲಾಗಿದೆ. ಏಳನೆಯ ಅಧಿಕಾರ : ವಿಷಹರಣಕ್ಕೆ ತಕ್ಕ ನಸ್ಯ ವಿಧಾನಗಳನ್ನು ಹೇಳಲಾಗಿದೆ. ಎಂಟನೆಯ ಅಧಿಕಾರದಲ್ಲಿ : ನಿರ್ವಿಷಿಕರಣಕ್ಕೆ ಹಲವು ಲೇಪ ವಿಧಾನಗಳನ್ನು ಹೇಳಲಾಗಿದೆ. ಒಂಬತ್ತನೆಯ ಅಧಿಕಾರಲ್ಲಿ : ಪಾನಾದಿ ಸಕಲಕ್ರಿಯೆಗೂ ತಕ್ಕ ಔಷಧಿ ಕ್ರಮಗಳನ್ನು ಹೇಳಲಾಗಿದೆ. ಹತ್ತನೆಯ ಅಧಿಕಾರದಲ್ಲಿ : ಮಂಡಲ ಹಾವುಗಳ ಭೇದ, ಅವುಗಳ ವಂಶಲಕ್ಷಣ, ತತ್ಪರಿಹಾರಕ ಮಂತ್ರೌಷಧಗಳು (ಪಾನ, ಲೇಪನ, ನಸ್ಯ, ಅಂಜನಗಳು) ಹೇಳಲ್ಪಟ್ಟಿವೆ. ಹನ್ನೊಂದನೆಯ ಅಧಿಕಾರ : ಇದರಲ್ಲಿ ಚೇಳಿನ ಭೇದಗಳು ಅವುಗಳ ಕಡಿತಕ್ಕೆ ನಿವಾರಕವಾದ ಪಾನಾಂಜನ ನಸ್ಯ ಲೇಪನಾದಿಗಳ ವಿವರಣೆ ಇದೆ. ಹನ್ನೆರಡನೆಯ ಅಧಿಕಾರ : ಇದರಲ್ಲಿ ಇಲಿ ಹೆಗ್ಗಣಗಳ ಜಾತಿಭೇದ ಅವುಗಳ ವಿಷಕ್ಕೆ ತಕ್ಕ ನಸ್ಯಪಾನ ಲೇಪಾಂಜನೌಷಧಗಳ ವಿವರಣೆ ಇದೆ. ಇಲ್ಲಿ ಹೆಗ್ಗಣಗಳಲ್ಲಿ ಹದಿನೆಂಟು ವಿಧದ ಇಲಿಗಳನ್ನು ಗುರುತಿಸಿದ್ದು ಹೀಗೆ;

"ಶ್ವೇತಂ ಕೃಷ್ಣನಲಕ್ತಕಂ ಕಪಿಲನುಂ ನೀಲಾಭ ಧೂಮ್ರಾಭಮಾ
ಪೀತಂ ಪಿಂಗಲ ಲೂತಿದಂಷ್ಟ್ರ ಕಪಿಲ ಕ್ರೋಡಾಸ್ಯ ದೀರ್ಘಾಸ್ಯಸಂ
ಭೂತಂ ಕಾವಳ ದಿರ್ಘಕರ್ಣ ಕಳಕಂಠಂ ರೇಣುಕಾಂಗಂ ಲಸತ್
ಖ್ಯಾತಂ ಪುಚ್ಛವಿಹೀನನೆಂದು ಪದಿನೆಣ್ ಭೇದಂಗಳಕ್ಕಾಖುಗಳ್"

(ಖಗೇಂದ್ರಮಣಿಮಣಿದರ್ಪಣಂ ೧೨-೩)

ಹದಿಮೂರನೆಯ ಅಧಿಕಾರದಲ್ಲಿ : ತೋಳ, ಹುಲಿ, ಆನೆ, ಹಂದಿ, ನರಿ ಮೊದಲಾದ ಮೃಗಗಳು, ಶಿಂಶುಮಾರ, ಆಮೆ, ಮಕರ ಮೊದಲಾದ ಜಲಚರಗಳು ಲಾವಿಗೆ, ಪಾರಿವಾಳ ಮೊದಲಾದ ಪಕ್ಷಿಗಳು. ಇರಿವೆ ನೊಣ ಮೊದಲಾದ ಕ್ಷುದ್ರ ಜೀವಿಗಳು. ದಂತ ನಖಗಳು ಇವೇ ಮೊದಲಾದ ಸರ್ವಜಂಗಮ ವಿಷ ಸ್ವರೂಪ ತನ್ನಿವಾರಣ ಔಷಧಗಳು, ಮಂತ್ರಗಳೊಡನೆ ಹೇಳಲ್ಪಟ್ಟಿವೆ.

ಹದಿನಾಲ್ಕನೆಯ ಅಧಿಕಾರ : ಇಲ್ಲಿ ಸರ್ವಕೃತ್ರಿಮ ವಿಷಸ್ವರೂಪ, ತನ್ನಿವಾರಣೋಪಾಯಗಳು ವರ್ಣಿತವಾಗಿವೆ. ಈ ಅಧಿಕಾರದಲ್ಲಿ ಕೆಲವು ಮಂತ್ರಗಳೂ ಇವೆ. ಅವುಗಳಲ್ಲಿ ಕೆಲವು ಇಂತಿವೆ; "೧. ಓಂ ನಮೋ ಭಗವತೇ ಪಾರ್ಶ್ವಚಮದ್ರಾಯ ಧರಣೇಮದ್ರ ಪದ್ಮಾವತೀ ಸಹಿತಾಯ ಅಷ್ಟಮಹಾಸಿದ್ಧಿ ಪ್ರದಾಯಕಾಯ ಲೂತಿ ಜಾಳ ಗರ್ದಭ ಕರ್ಣಶೂಲ ನೇತ್ರಶೂಲ ಮೂಲವ್ಯಾಧಿ ದುಷ್ಟವ್ರಣ ವಿನಾಶನಾಯ ಅನೇಕ ವಿಷಸಂಹರಾಯ ಛಿಂದ ಭಿಂದ ಚಂಡ್ರೊ ದಾಹಸಂತಾಪಂ ಹನ ರಣ ಖುಣ ಇಲಿ ಶಿಳಿ ಚಿಳಿ ಮಿಳಿ ಕಿಳಿ ಓಂ ಹ್ರಾಂ ಹಂ ಸಃ ಓಂ, ಹ್ರೀಂ ಹಂ ಸಃ, ಓಂ ಹ್ರೌಂ ಹಂ ಸಃ ಓಂ ಹ್ರಃ ಹಂ ಸಃ ಗ್ಲೌಂ ಕ್ಷ್ವಾ ಠ ಫಟ್ ಸ್ವಾಹಾ"[೬]

ಹದಿನೈದನೆಯ ಅಧಿಕಾರದಲ್ಲಿ : ಬಾಷ್ಪ(ಪ್ಪ) ವಿಧಾನವನ್ನು ಹೇಳಲಾಗಿದೆ. ಈ ಬಾಷ್ಪವು ಪಿತ್ತಶ್ಲೇಷ್ಮಾದಿ ಇಪ್ಪತ್ತೊಂದು ಬಗೆಯೆಂದು ವಿಂಗಡಿಸಿ ಅದಕ್ಕೆ ಪರಿಹಾರವನ್ನು ಹೇಳಲಾಗಿದೆ. ಈ ಬಾಷ್ಪ ಬೇಧಗಳು ೮೪ ಎಂದೂ, ಇದೊಂದು ಬಹುಮುಖ್ಯವಿಧಾನವೆಂದೂ ಹೇಳಲಾಗಿದೆ.

ಹದಿನಾರನೆಯ ಅಧಿಕಾರದಲ್ಲಿ : ನಾಗಕೃಷ್ಣ, ನಾಗಸಹಾಗಮನ ಮೊದಲಾದ ನಾಗಕ್ರೀಡೆಗಳನ್ನು ಮಂತ್ರಗಳೊಡನೆ ವಿವರಿಸಿದೆ. ಹಾಗೂ ವಿಷಭಕ್ಷಣವನ್ನು ಮಾಡತಕ್ಕ ಕ್ರಮ, ಶಬ್ದ ನಿರ್ವಿಷ ಮಂತ್ರ ವಿಧಾನ, ಭೂತ ನಿರ್ವಿಷ ವಿಧಾನ, ಸರ್ಪೋಚ್ಚಾಟನ, ವಿಷಕ್ಕೆ ಕವಳ ಪ್ರಯೋಗ, ವಾಂತಿಯ ಔಷಧ, ಮೂಷಕ

ವಿಷಭಾದ್ಯುಚ್ಚಾಟನ, ವೃಶ್ಚಿಕಾದಿಗಳ ಉಚ್ಚಾಟನ ಧೂಪ ವಿಧಾನ, ಎಣ್ಣೆಯ ಮುದ್ದು ವಿಷವ್ರಣಹಾರಕಗಳಾದ ಕರಿಕು, ವ್ಯಾಘ್ರ ಮುಖಸ್ತಂಭನಾದಿ ಮಂತ್ರವಿಧಾನ, ನಿರ್ವಿಷದ ಉಂಗುರ ನಿರ್ಮಾಣ ವಿಧಾನ, ಸರ್ವವಿಷಹರತೌಷಧ, ವಿಷವು ದೇಹಕ್ಕೆ ವ್ಯಾಪಿಸದಂತೆ ಔಷಧಿ ಸೇವನೆ ಮಾಡುವಿಕೆ ಮುಂತಾದ ಸಂಕೀರ್ಣ ವಿಷಯಗಳು ಹೇಳಲ್ಪಟ್ಟಿವೆ. ಕವಿ ಪ್ರತಿ ಅಧಿಕಾರಗಳ ಕೊನೆಯಲ್ಲಿ ಹೇಳಿದ್ದು ಹೀಗೆ;

"ಇದು ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತ ಪಯಃಪಯೋನಿಧಿಪಾರಗ ಶ್ರೀ ಪೂಜ್ಯಪಾದ ಮುನೀಂದ್ರ ಚಾರುಚರಣಾರವಿಂದ ಗಂಧಗುರ್ಣಾನಂದಿತ ಮಾನಸಂ ಶ್ರೀಮದಖಿಲ ಕಲಾಗಮೋತ್ತುಂಗ ಮಂಗವಿಭು ವಿರಚಿತಮಪ್ಪ ಖಗೇಂದ್ರಮಣಿಮಣಿದರ್ಪಣದೊಳ್" ಎಂದು ಹೇಳಿದ್ದಾನೆ. ಈ ಗ್ರಂಥಾಂತ್ಯದಲ್ಲಿ ಷೋಢಶಾದಿಕಾರಂ ಖಗೇಂದ್ರಮಣಿದರ್ಪಣಂ ಸಮಾಪ್ತಂ ಎಂದು ಮುಗಿದಿದೆ.

### ೨.೨.೧.೨. ವೈದ್ಯಸಾರ ಸಂಗ್ರಹ

ವೈದ್ಯಶ್ರೇಷ್ಠ ನರಸಿಂಹಶಾಸ್ತ್ರಿಗಳಿಂದ ರಚಿತವಾದ ಈ ಗ್ರಂಥಕ್ಕೆ ನಾರಸಿಂಹಭಟ್ಟಸಂಹಿತೆ ಎಂಬ ಹೆಸರೂ ಇದೆ. ನರಸಿಂಹಶಾಸ್ತ್ರಿಗಳ ಕಾಲ ಕ್ರಿ.ಶ.ಸು.೧೫೭೦. ಕವಿಯು ಗ್ರಂಥದಲ್ಲಿ ತನ್ನ ಕುರಿತು ಪ್ರತ್ಯೇಕವಾಗಿ ಎಲ್ಲಿಯೂ ಹೇಳಿಕೊಂಡಿರುವುದಿಲ್ಲ. ಆದರೆ ಪ್ರತಿ ಪ್ರಕರಣದ ಸಮಾಪ್ತಿ ವಚನದಲ್ಲಿ;

ಇತಿ ಕರ್ಣಾಟಕದೇಶಾನ್ತರ್ಗತಹಂಸಲದೇಶಮಧ್ಯೋಲ್ಲಸತ್
ಸ್ವರ್ಣನದೀತೀರಸ್ಥಿತಬಾಲಚಂದ್ರಪುರಸ್ಥಿತ ನಂಜನಾಥಾತ್ಮಜ ಸರ್ವವಿದ್ಯಾ
ವಿಶಾರದ ನರಸಿಂಹಶಾಸ್ತ್ರಿವರ್ಯ ವಿರಚಿತೇ ಸರ್ವ ಲೋಕೋಪಕಾರ
ಕರ್ಣಾಟಕ ಭಾಷಾವಿಶದೀಕೃತೇ ವೈದ್ಯಸಾರಸಂಗ್ರಹೇ'

ಎಂದು ಇರುವುದದರಿಂದ ೧೫೭೦ರಲ್ಲಿ ಬಾಲಚಂದ್ರಪುರದಲ್ಲಿ ಚನ್ನರಾಜನೆಂಬಾತ ಆಳುತ್ತಿದ್ದ. ಆತನ ಆಸ್ಥಾನ ಕವಿ ಇರಬೇಕು. ಈ ಗ್ರಂಥವನ್ನು ಜಿ.ಶ್ರೀನಿವಾಸಮೂರ್ತಿ ಮತ್ತು ಎನ್.ಆರ್.ಭಟ್ ಅವರು ಎರಡು ಭಾಗಗಳಲ್ಲಿ ಸಂಪಾದಿಸಿ ಮದ್ರಾಸ್ ಸರ್ಕಾರದಿಂದ ಪ್ರಕಟಿಸಿದ್ದಾರೆ. ಈ ಗ್ರಂಥವು ಒಟ್ಟು ಹದಿನಾಲ್ಕು ಪ್ರಕರಣಗಳನ್ನು ಒಳಗೊಂಡಿದೆ. ಒಂದನೆಯ ಭಾಗ ೧೯೫೧ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಒಂದರಿಂದ ಎಂಟು ಪ್ರಕರಣಗಳು ಇವೆ. ಎರಡನೆಯ ಭಾಗ ೧೯೫೩ರಲ್ಲಿ ಪ್ರಕಟವಾಗಿದ್ದು ಒಂಬತ್ತರಿಂದ ಹದಿನಾಲ್ಕನೆಯ ಪ್ರಕರಣದವರೆಗೂ ಒಳಗೊಂಡಿದೆ. ಈ ಗ್ರಂಥ ಪ್ರಕಟಿಸಲು ನಾಲ್ಕು ಹಸ್ತಪ್ರತಿಗಳನ್ನು ಬಳಸಿಕೊಂಡಿರುವುದಾಗಿ ಸಂಪಾದಕರು ತಿಳಿಸಿದ್ದಾರೆ. ಅದರಲ್ಲಿ ಎರಡು ಪ್ರತಿಗಳು ಮದ್ರಾಸು ಸರಕಾರದ ಓರಿಯಂಟಲ್ ಲೈಬ್ರರಿಯವು ಡಿ.೨೧೪೮ ನಂಬರಿನ ಕಾಗದ ಪ್ರತಿ ಮತ್ತು ಡಿ ೧೩೭೪ ನಂಬರಿನ ಓಲೆಯ ಪ್ರತಿಗಳು. ಮತ್ತೆರಡು ಮೈಸೂರು ಸರಕಾರದ ಓರಿಯಂಟಲ್ ಲೈಬ್ರರಿಯ ೨೭೮ ನಂಬರಿನ ಓಲೆಪ್ರತಿ ಮತ್ತು ೧೯೮೦ ನಂಬರಿನ ಓಲೆ ಪ್ರತಿಗಳು.

ವೈದ್ಯಶಾಸ್ತ್ರದಲ್ಲಿ ನಿರ್ದಿಷ್ಟವಾದ ವಿಷಯಗಳನ್ನು ಸಂಪೂರ್ಣವಾಗಿಯೂ ಪ್ರತ್ಯೇಕವಾಗಿಯೂ ಪ್ರತಿಪಾದಿಸುತ್ತಿರುವ ಚರಕ, ಸುಶ್ರುತ, ಅಗ್ನಿವೇಶಸಂಹಿತೆ, ಕಾಶ್ಯಪಸಂಹಿತೆ, ವಾಗ್ಭಟಸಂಹಿತೆ, ರಸರತ್ನಾಕರ ಮೊದಲಾದ ಪ್ರಾಚೀನ ಋಷಿವರ್ಯರ ಗ್ರಂಥಗಳನ್ನು ಈಗ ನಾಮ ಮಾತ್ರದಿಂದ ಲಭ್ಯವಾಗಿ ಲಿಪ್ತಪ್ರಾಯಗಳಾಗಿರುವ ಪ್ರಾಮಾಣಿಕವಾದ ಇತರ ಅನೇಕ ಗ್ರಂಥಗಳನ್ನು ಮನಗಂಡು ಪರಾಮರ್ಶಿಸಿ ಅವುಗಳಲ್ಲಿ ಮುಖ್ಯವಾದ ಮತ್ತು

ಸಾರವಾದ ಅಂಶಗಳನ್ನು ಸಂಗ್ರಹಿಸಿ ಅವಶ್ಯವಿದ್ದಲ್ಲಿ ಮತಭೇದಗಳನ್ನೂ ತೋರಿಸಿ ಎಲ್ಲಾ ವೈದ್ಯರಿಗೂ, ಸಾಮಾನ್ಯರಿಗೂ ಕೂಡ ಉಪಯೋಗವಾಗುವ ರೀತಿಯಲ್ಲಿ ನಿಧಾನ ಮತ್ತು ಚಿಕಿತ್ಸೆಗಳ ಸಂಗ್ರಹವನ್ನು ಮಾಡಿ ರಚಿಸಲ್ಪಟ್ಟಿರುವ ಈ ಗ್ರಂಥಕ್ಕೆ 'ವೈದ್ಯಸಾರ ಸಂಗ್ರಹ' ಎಂಬ ಹೆಸರು ಅನ್ವರ್ಥಕವೆನ್ನುವುದರಲ್ಲಿ ಸಂದೇಹವಿಲ್ಲ"[೭] ಎಂದು ಸಂಪಾದಕರು ಅಭಿಪ್ರಾಯಪಡುತ್ತಾರೆ. ಅಂದರೆ ಪ್ರಾಚೀನ ಕಾಲದ ಸಂಸ್ಕೃತ ಭಾಷೆಯ ಗ್ರಂಥಗಳನ್ನು ಅಧ್ಯಯನ ಮಾಡಿ ಅವುಗಳಲ್ಲಿರುವ ಅಂಶಗಳನ್ನು ಕ್ರೋಢಿಕರಿಸಿ ರಚನೆಮಾಡಿದ್ದಾರೆ. ಆದ್ದರಿಂದ ಈ ಗ್ರಂಥವು ಸಂಸ್ಕೃತ ಶ್ಲೋಕ ಕನ್ನಡ ಟೀಕುಗಳೊಂದಿಗೆ ರಚನೆಗೊಂಡಿದೆ. ಹಾಗೂ ಈ ಕೃತಿಯ ಹಲವು ಹಸ್ತಪ್ರತಿಗಳು ಚಂದ್ರರಾಜ ಮತ್ತು ನಂಜರಾಜನ ಹೆಸರಿನಲ್ಲಿ ಕಂಡು ಬರುತ್ತವೆ. ಈ ವಿಷಯ ಕುರಿತು ಸಂಪಾದಕರು ಈ ಗ್ರಂಥದ ಪ್ರಖ್ಯಾತಿಯನ್ನು ಕಂಡು ಹಲವು ರಾಜರು ತಮ್ಮ ಹೆಸರು ಪ್ರಖ್ಯಾತವಾಗಲೆಂದು ತಮಗೆ ಸಿಕ್ಕಿದ್ದ ಪ್ರತಿಗಳನ್ನೆಲ್ಲಾ ತಿದ್ದಿಸಿ ತಮ್ಮ ಹೆಸರಿಗೆ ಬಲತ್ಕಾರವಾಗಿ ಅಂಕಿತ ಮಾಡಿಕೊಂಡಿರಬಹುದೆಂದು ಊಹಿಸಿದ್ದಾರೆ.

ಕ್ರಿ.ಶ. ೧೮೯೮ರಲ್ಲಿಯೇ ಈ ಕೃತಿಯನ್ನು ಕಂ.ಟಿ.ಶ್ರೀನಿವಾಸಾಚಾರ್ಯರು ಕರ್ನಾಟಕ ಮುದ್ರಶಾಲೆಯಲ್ಲಿ ನಂಜಿನಾಥನ ವೈದ್ಯಸಾರಸಂಗ್ರಹ ಎಂದು ಪ್ರಕಟಿಸಿದ್ದಾರೆ. ಇವರು ತಮ್ಮ ಪೀಠಿಕೆಯಲ್ಲಿ "೩೬ ಜ್ವರ ಹಾಗೂ ಇತರ ವ್ಯಾದಿಗಳು ಸೇರಿ ೮೦ ವಿಧವಾದ ರೋಗಗಳಿವೆ" ಎಂದು ನಿರ್ದಿಷ್ಟವಾಗಿ ಹೇಳಿದ್ದಾರೆ. ಪ್ರಸ್ತುತ ಗ್ರಂಥದಲ್ಲಿ ವಾತ ಪಿತ್ತ ಶ್ಲೇಷ್ಮದಿಂದ ಉಂಟಾಗುವ ಎಲ್ಲ ಬಗೆಯ ರೋಗಗಳಿಗೂ ಔಷದೋಪಚಾರವನ್ನು ಸೂಚಿಸಿದೆ.

ಈ ವಿಭಿನ್ನ ಹೆಸರಿನಿಂದ ದೊರೆಯುವ ಕೃತಿಗಳ ವಿಷಯವಸ್ತು ಮಾತ್ರ ಒಂದೇ ತೆರನಾಗಿದೆ. ಎಲ್ಲಿಯೂ ವ್ಯತ್ಯಾಸ ಇರುವುದಿಲ್ಲ. ಆದ್ದರಿಂದ ಸಂಪಾದಕರಾದ ಜಿ.ಶ್ರೀನಿವಾಸಮೂರ್ತಿ ಮತ್ತು ಎನ್.ಆರ್.ಭಟ್ ಅವರು ಹೇಳಿದಂತೆ, ರಾಜರು ಈ ಕೃತಿಯನ್ನು ತಮ್ಮ ಹೆಸರಿಗೆ ಬದಲಾಯಿಸಿಕೊಂಡಿರಬಹುದು. ಆದರೆ ನರಸಿಂಹಶಾಸ್ತ್ರಿಯ 'ವೈದ್ಯಸಾರಸಂಗ್ರಹ'ವು ಸಂಪಾದಕರು ಹೇಳುವ ಹಾಗೆ ನಂಜರಾಜನ ಹೆಸರಿನಲ್ಲಿ ಇರುವುದಿಲ್ಲ. "ಬಾಲಚಂದ್ರ ಪುರಸ್ಥಿತ ಶ್ರೀನಂಜುನಾಥಾತ್ಮಜಸರ್ವವಿದ್ಯಾವಿಶಾರದ ಶ್ರೀ. ನರಸಿಂಹಶಾಸ್ತ್ರಿ ವಿರಚಿತೆ" ಎಂದಿರುವುದರಿಂದ ಹಾಗೆ ಹೇಳಿರುವರು. ಅವರು ಹೇಳಿದ ನಂಜರಾಜ ಬಾಲಚಂದ್ರಪುರದವನಲ್ಲ ಕಳಲೆಯ ದೊರೆಯ ಕುರಿತು ಹಾಗೇನಾದರು ಆಗಿದ್ದರೂ ವೀರರಾಜನ (೧೭೨೦) ಮಗ ನಂಜರಾಜ(೧೭೪೦) ತನ್ನ ಹೆಸರಿಗೆ ಬದಲಾಯಿಸಿರಬಹುದು. ಇದು ಸ್ಪಷ್ಟಮಾಹಿತಿ ದೊರೆತಿರುವುದಿಲ್ಲ. 'ನಂಜುನಾತ್ಮಜ' ಎಂದಿರುವುದರಿಂದ ನಂಜುನಾಥನು ನರಸಿಂಹಶಾಸ್ತ್ರಿಗಳ ತಂದೆಯಾಗುತ್ತಾನೆ.

ಕವಿಚರಿತೆಕಾರರು ಇದೇ ಕೃತಿಯನ್ನು ಕುರಿತು "ಇತಿ ಶ್ರೀಮತ್ಕಾರ್ಣಾಟದೇಶಾಂತರ್ಗತ ಹೋಸಣದೇಶಮಧ್ಯೋಲ್ಲಸತ್ಕಾವೇರಿ ದಕ್ಷಿಣ ಭಾಗಸ್ಥಿತ ಬಾಲಚಂದ್ರಪುರಸ್ಥಗೌರೀಶ್ವರ ಕೃಪಾಲಬ್ದ ವಿಭವ ಬಾಲಚಂದ್ರಪುರಾಧೀಶ್ವರ ಚೆನ್ನರಾಜ ಭೂಪಾಲವಿರಚಿತಮಪ್ಪ ಸರ್ವಲೋಕೋಪಕಾರಕ ಕರ್ಣಾಟಭಾಷಾವಿಶದೀಕೃತ ವೈದ್ಯಸಾರ ಸಂಗ್ರಹೆ"[೮] ಎಂದು ಇರುವುದರಿಂದ ಈ ಕೃತಿಯನ್ನು ಚೆನ್ನರಾಜನ ತಲೆಗೆ ಕಟ್ಟಿದ್ದಾರೆ. ಆದರೆ ಈ ಹೆಸರಿನ ಹಸ್ತಪ್ರತಿಗಳು ಈಗ ಯಾವ ಹಸ್ತಪ್ರತಿ ಭಂಡಾರಗಳಲ್ಲಿ ದೊರೆಯುತ್ತಿಲ್ಲ.

ಅದೇನೆಯಿದ್ದರೂ ಕನ್ನಡದಲ್ಲಿ ರಚನೆಯಾದ ಈ ಮಹದ್ಗ್ರಂಥ ನಮ್ಮ ದೇಶೀ ವೈದ್ಯಶಾಸ್ತ್ರದ ಎಲ್ಲಾ ವಿಷಯವಸ್ತುವನ್ನು ಕ್ರೋಢಿಕರಿಸಿದ ಶ್ರೇಷ್ಟಗ್ರಂಥ ಎಂಬುದರಲ್ಲಿ ಎರಡು ಮಾತಿಲ್ಲ. ಈ ಗ್ರಂಥ ಹೊಂದಿರುವ

ಹದಿನಾಲ್ಕು ಪ್ರಕರಣಗಳಲ್ಲಿ ಒಂದರಿಂದ ಎಂಟನೇ ಪ್ರಕರಣಗಳವರೆಗೆ ಒಂದನೇ ಭಾಗದಲ್ಲಿ ಮುದ್ರಿಸಲಾಗಿದೆ. ಪ್ರಕರಣಗಳು ಈ ಕೆಳಗಿನ ವಿಷಯಗಳನ್ನು ಒಳಗೊಂಡಿವೆ.

ಒಂದನೆಯ ಪ್ರಕರಣ–ನಾಡೀ ಪರೀಕ್ಷೆ, ಜೀಹ್ವಾಪರೀಕ್ಷೆ, ಮೂತ್ರಪರೀಕ್ಷೆ ಚಿಕಿತ್ಸೋಪಕ್ರಮ, ಚಿಕಿತ್ಸಾಂಗ, ಪಂಚಕರ್ಮಗಳನ್ನು ಒಳಗೊಂಡಿದೆ. ಎರಡನೆಯ ಪ್ರಕರಣ–ಜ್ವರ, ಪಿತ್ತಜ್ವರ, ವಾತಜ್ವರ, ಶ್ಲೇಷ್ಮಜ್ವರ, ಸನ್ನಿಪಾತಜ್ವರಗಳ ಲಕ್ಷಣ ಮತ್ತು ಚಿಕಿತ್ಸೋಪಕ್ರಮಗಳನ್ನು ವಿವರವಾಗಿ ಹೇಳಲ್ಪಟ್ಟಿದೆ.

ಮೂರನೆಯ ಪ್ರಕರಣ–ಇಲ್ಲಿ ರಕ್ತಪಿತ್ತ, ಅಸೃಗ್ದರ, ಅಸ್ಥಿಸ್ರಾವ, ಶ್ವಾಸ, ಕಾಸ, ಹಿಕ್ಕಾ, ಕ್ಷಯ, ಈ ರೋಗಗಳಿಗೆ ನಿದಾನ ಮತ್ತು ಔಷಧೋಪಚಾರಗಳಿವೆ.

ನಾಲ್ಕನೆಯ ಪ್ರಕರಣ–ಸ್ವರಸಾದ, ಛರ್ದಿ, ಹೃದ್ರೋಗ, ತೃಷ್ಣಾ, ಮದ, ಮೂರ್ಛಾ, ಸಂನ್ಯಾಸ, ಅರ್ಶಸ್ ಈ ರೋಗಗಳಿಗೆ ಲಕ್ಷಣ ಮತ್ತು ಚಿಕಿತ್ಸೆಗಳಿವೆ.

ಐದನೆಯ ಪ್ರಕರಣ–ಇದರಲ್ಲಿ ಉದಾವರ್ತ ಅತಿಸಾರ, ಗುದಭ್ರಂಶ, ಗ್ರಹಣಿ, ಪ್ರವಾಹಿಕಾ, ವಿಷೂಚಿಕಾ ಈ ರೋಗಗಳ ಲಕ್ಷಣ ಮತ್ತು ಔಷದೋಪಚಾರಗಳಿವೆ.

ಆರನೆಯ ಪ್ರಕರಣ–ಇಲ್ಲಿ ಮೂತ್ರಕೃಛ್ರ, ಅಶ್ವರಿ, ಪ್ರಮೇಹ, ಸೋಮರೋಗ, ನಿದ್ರಧಿ, ಗುಲ್ಮ, ಶೂಲ, ಪ್ಲೀಹ, ಜಲಕೂರ್ಮ, ಆಧ್ಮಾನ, ಅಷ್ಠೀಲ, ಮಹೋದರ ಎಂಬ ರೋಗಗಳ ಲಕ್ಷಣ ಮತ್ತು ಅವುಗಳಿಗೆ ಚಿಕಿತ್ಸೋಪಚಾರಗಳು ಒಳಗೊಂಡಿದೆ.

ಏಳನೆಯ ಪ್ರಕರಣ–ಇಲ್ಲಿ ಪಾಂಡು, ಕಾಮಲಾ, ಕುಂಭಕಾಮಲಾ, ಹಲೀಮಕ, ವಿಸರ್ಪ, ಮಸೂರಿಕಾ, ವಿಸ್ಫೋಟ, ಆಮ್ಲಪಿತ್ತ, ಕ್ಷುದ್ರಮಸೂರಿಕಾ, ಕುಷ್ಟ, ಕೃಮಿ, ಈ ಎಲ್ಲಾ ರೋಗಗಳಿಗೆ ನಿಧಾನ ಮತ್ತು ಚಿಕಿತ್ಸೋಪಚಾರಗಳಿವೆ.

ಎಂಟನೆಯ ಪ್ರಕರಣ–ಈ ಭಾಗದಲ್ಲಿ ವಾತ, ಅರ್ದಿತವಾತ, ಶೋಣಿತವಾತ, ಆವರಣ, ಪಿತ್ತ, ಆಮ್ಲಪಿತ್ತ, ಗರ್ಭಿಣಿರೋಗ, ಬಾಲಕರೋಗಗಳಿಗೆ ಲಕ್ಷಣ ಮತ್ತು ಔಷಧೋಪಚಾರಗಳನ್ನು ಹೇಳಲಾಗಿದೆ.

ಒಂಭತ್ತರಿಂದ ಹದಿನಾಲ್ಕನೆಯ ಪ್ರಕರಣದವರೆಗೂ ಎರಡನೇ ಭಾಗದಲ್ಲಿ ಮುದ್ರಿತವಾಗಿದೆ. ಈ ಆರು ಪ್ರಕರಣಗಳು ಕೆಳಗಿನಂತೆ ವಿಷಯವಸ್ತುವನ್ನು ಒಳಗೊಂಡಿವೆ.

ಒಂಭತ್ತನೆಯ ಪ್ರಕರಣ– ಇದರಲ್ಲಿ ಬಾಲಗ್ರಹಚಿಕಿತ್ಸೆಯು ವಿಸ್ತೃತವಾಗಿ ನಿರೂಪಿಸಲ್ಪಟ್ಟಿದೆ. ಎಂಟನೆಯ ಪ್ರಕರಣದಲ್ಲಿರುವ ಗರ್ಭಿಣಿರೋಗ ಚಿಕಿತ್ಸೆಯಲ್ಲಿ ಪ್ರಥಮ ಮಾಸದಿಂದ ದಶಮ ಮಾಸದವರೆಗಿನ ಪ್ರತ್ಯೇಕಮಾಸ ಚಿಕಿತ್ಸಾಕ್ರಮವೂ ಈ ಪ್ರಕರಣದಲ್ಲಿರುವ ಬಾಲಗ್ರಹ ತಂತ್ರ, ದಿನಗ್ರಹಚಿಕಿತ್ಸಾ, ಮಾಸಗ್ರಹ ಚಿಕಿತ್ಸಾ, ವರ್ಷಗ್ರಹ ಚಿಕಿತ್ಸಾ, ಬಾಲಗ್ರಹ ಸ್ತೋತ್ರ ಒಳಗೊಂಡಿದೆ. ಇಲ್ಲಿಯ ಚಿಕಿತ್ಸಾ ಕ್ರಮವು ವೈದ್ಯ ವಿಷಯಕ್ಕಿಂತಲೂ ಮಂತ್ರ ಮತ್ತು ತಂತ್ರ ವಿಷಯಕ್ಕೆ ಹೆಚ್ಚಾಗಿ ಸೇರಬಹುದು. ಆದರೆ ಈ ಗ್ರಂಥಕರ್ತನು ಎಲ್ಲ ರೋಗಗಳಿಗೂ ಚಿಕಿತ್ಸಾ ಮಾತ್ರವಲ್ಲದೆ ಪೂಜೆ, ದಾನ, ನಕ್ಷತ್ರ ದೋಷಪರಿಹಾರಗಳನ್ನು ಅಲ್ಲಲ್ಲಿ ಹೇಳಿರುವನು.

ಹತ್ತನೆಯ ಪ್ರಕರಣದಲ್ಲಿ–ವಂಧ್ಯಾರೋಗ, ಪುಷ್ಪಾವರ್ತ, ಉನ್ಮಾದ, ಅಪಸ್ಮಾರ, ಭೂತ, ಕಾರ್ಶ್ಯ ಸ್ಥೌಲ್ಯ, ನಿದ್ರಾಭಂಗ, ಅಕ್ಷಿರೋಗ, ಕರ್ಣವರ್ಧನ, ಸ್ತನವರ್ಧನ, ನಾಸಾರೋಗ, ಜಿಹ್ವಾರೋಗ. ಈ ರೋಗಗಳ ಲಕ್ಷಣ ಮತ್ತು ಚಿಕಿತ್ಸೆಗಳಿವೆ.

ಹನ್ನೊಂದನೆಯ ಪ್ರಕರಣ–ಇಲ್ಲಿ ತಾಲರೋಗ, ಕಂಠರೋಗ, ಅಕ್ಷಿರೋಗ, ದಂತರೋಗ, ಆಸ್ಯರೋಗ, ಶಿರೋರೋಗ, ರೋಮಖಂಡನ, ರೋಮನಾಶನ, ರೋಮವರ್ಧನ, ರೋಮೋದ್ಭವ, ಶಿರೋವ್ರಣ, ವಾಕ್ಸಿದ್ಧಿಕರಪ್ರಯೋಗ ಎಂಬ ಈ ರೋಗಗಳ ಲಕ್ಷಣ ಮತ್ತು ಚಿಕಿತ್ಸೆಗಳು ಹಲವು ಪ್ರಯೋಗಗಳು ಇವೆ.

ಹನ್ನೆರಡನೆಯ ಪ್ರಕರಣ–ಈ ಪ್ರಕರಣದಲ್ಲಿ ಸ್ತನರೋಗಚಿಕಿತ್ಸೆ, ವ್ರಣಚಿಕಿತ್ಸೆ, ಕ್ಷಯಚಿಕಿತ್ಸೆ, ದಗ್ಧವ್ರಣಚಿಕಿತ್ಸೆ, ಗ್ರಂಥಿಚಿಕಿತ್ಸೆಗಳ ಲಕ್ಷಣ ಮತ್ತು ಔಷಧೋಪಚಾರ ವಿಷಯವಿದೆ.

ಹದಿಮೂರನೆಯ ಪ್ರಕರಣ–ಇಲ್ಲಿ ಪಾದರೊ–ಗ್ರನ್ಥಿ–ಪುರುಷವ್ಯಾದಿ–ದೇಹಸ್ವೇದ–ಗಣ್ಡಮಾಲಾ–ನಾಡೀರೋಗ–ಸ್ಥಾವರವಿಷ–ಜಂಗಮವಿಷ–ಸರ್ಪವಿಷ–ಮಂಣ್ಡಲವಿಷ–ರಾಜಿಲವಿಷ, ವೃಶ್ಚಿಕವಿಷ, ಮೂಷಕವಿಷಗಳಿಗೆ ಚಿಕಿತ್ಸೆಗಳನ್ನು ಒಳಗೊಂಡಿದೆ.

ಹದಿನಾಲ್ಕನೆಯ ಪ್ರಕರಣ–ಈ ಕೊನೆಯ ಪ್ರಕರಣದಲ್ಲಿ ಶ್ವಾನವಿಷ, ಬೇಕವಿಷ, ವ್ಯಾಘ್ರಾದಿಮೃಗವಿಷ, ಗೌಳೀವಿಷ, ಸರ್ಪಾದಿಪಲಾಯನವಿಧಿ, ಕೃತ್ರಿಮವಿಷ. ಇವುಗಳ ಲಕ್ಷಣ ಮತ್ತು ಚಿಕಿತ್ಸೆಗಳನ್ನು ಹೇಳುವುದರ ಮೂಲಕ ಈ ಪ್ರಕರಣವನ್ನು ಈ ಕೆಳಗಿನಂತೆ ಮುಗಿಸಲಾಗಿದೆ.

"ಇತಿ ಶ್ರೀ ಕರ್ಣಾಟಕದೇಶಾನ್ತರ್ಗತಹೌಸಣದೇಶಮಧ್ಯೋಲ್ಲಸತ್ಕಾವೇರೀದಕ್ಷಿಣಭಾಗಸ್ಥಿತಬಾಲಚಂದ್ರಪುರಸ್ಥಿತ ಸರ್ವವಿದ್ಯಾವಿಶಾರದ ನರಸಿಂಹಶಾಸ್ತ್ರಿಣಾವೀರಚಿತೇ ಸರ್ವಲೋಕೋಪಕಾರ ಕರ್ಣಾಟಕ ಭಾಷಾವಿಶದೀಕೃತೇ ವೈದ್ಯಸಾರ ಸಂಗ್ರಹೇ ಶ್ವಾನವಿಷದುಷ್ಟ ಕೀಟವಿಷ–ಭೇಕವಿಷ–ವೃಕವ್ಯಾಘ್ರಾದಿವಿಷ ಗೃಹಗೋಧಾವಿಷ ಕೃತಿಮವಿಷ–ಫಲಪತ್ರಪುಷ್ಪ ಮೂಲಕನ್ದಧಾತ್ವಾದಿವಿಷ–ಖರ–ಭೃಂಗಾದಿವಿಷಮತ್ಸ್ಯಮಾಂಸಾದಿವಿಷ ಚಿಕಿತ್ಸಿತಂ ನಾಮ ಚತುರ್ದಶರ ಕರಣಮ್"[೯].

ಆದರೆ ಈ ಗ್ರಂಥ ಮುಕ್ತಾಯ ಕುರಿತು ಕವಿ ಹೇಳಿರುವುದಿಲ್ಲ. ಆದ್ದರಿಂದ ಈ ಗ್ರಂಥ ಇನ್ನೂ ಅನೇಕ ವಿಷಯಗಳನ್ನು ಒಳಗೊಂಡಿರಬಹುದು. ಆದರೆ ಅಂತಹ ಹಸ್ತಪ್ರತಿಗಳು ಲಭ್ಯವಾಗಿರುವುದಿಲ್ಲ.

### ೨.೨.೧.೩. ಓಷಧಿಕೋಶಂ

ಕರ್ತೃವಿನ ಹೆಸರು, ಕಾಲ ಮತ್ತು ಇತರ ಪರಿಚಯ ತಿಳಿಯದ ಈ ಅಕಾರಾದಿವೈದ್ಯ ನಿಘಂಟು ಗ್ರಂಥ ಕ್ರಿ.ಶ.ಸು.೧೭೦೦ರ ಸುಮಾರಿನಲ್ಲಿ ರಚಿತವಾಗಿದೆ ಎಂದು ಸಂಪಾದಿಸಿದ ಎಚ್.ಶೇಷಯ್ಯಂಗಾರ್ ಅವರು ಊಹಿಸಿದ್ದರೆ. ಈ ವೈದ್ಯನಿಘಂಟು 'ಆರಾ' ಎಂಬ ಸ್ಥಳದಲ್ಲಿ ಮದರಾಸು ಸರ್ಕಾರದವರು ತಮ್ಮ ಪ್ರಾಚ್ಯವಿದ್ಯಾ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಅಕಾರಾದಿ ವರ್ಣಕ್ರಮವನ್ನನುಸರಿಸಿ ಅಣಿಮಾಡಿ ಕನ್ನಡ ಭಾಷೆಯಲ್ಲಿ ಸಂಸ್ಕೃತ ಶಬ್ದಗಳಿಗೆ ಕನ್ನಡ ಅರ್ಥವನ್ನು ತಿಳಿಸಲಾಗಿದೆ. ಈ ಗ್ರಂಥದಲ್ಲಿ ಸುಮಾರು ೧೨ ಸಾವಿರ ಶಬ್ದಗಳು ಸಂಗ್ರಹಿಸಲ್ಪಟ್ಟಿವೆ. "ಪದ ಸಂಗ್ರಾಹಕನೇ ಕನ್ನಡದ ಅರ್ಥವನ್ನು ಬರೆದನೋ ಅಥವಾ ಬೇರೊಬ್ಬನು ಅರ್ಥವನ್ನು ಬರೆದಿದ್ದಾನೋ ಎಂಬುದು ಸಂದೇಹಾಸ್ಪದ. ಪ್ರತಿ ಅಕ್ಷರ ಶಬ್ದಾಂತ್ಯದಲ್ಲಿ ಚತುರ್ವಿಂಶತಿ ತೀರ್ಥಂಕರರು, ಸರಸ್ವತಿ, ಅಜಿತಸೇನ, ಪೂಜ್ಯಪಾದ, ಅಕಳಂಕ, ಜಿನಸೇನ, ಗುಣಭದ್ರ, ಭಟ್ಟಾಕಳಂಕ ಮೊದಲಾದ ಪ್ರಸಿದ್ಧ ಜೈನ ಗುರುಗಳ ನಮಸ್ಕಾರ ರೂಪವಾದ ಶಬ್ದಗಳಿವೆ. ಇದರಿಂದ ಪದಸಂಗ್ರಾಹಕನೋ ಅಥವಾ ಲೇಖಕನೋ ಅಥವಾ ಇಬ್ಬರೂ ಜೈನ ಮತಕ್ಕೆ ಸೇರಿದವರೆಂದು ಮಾತ್ರವೇ ತಿಳಿದು ಬರುವುದು"[೧೦] ಎಂದು ಸಂಪಾದಕರು ಅಭಿಪ್ರಾಯಪಡುತ್ತಾರೆ.

ಈ ಗ್ರಂಥದ ಆದಿಯಲ್ಲಿ ಮಂಗಳ ನಿಬಂಧವಾಗಲಿ, ಕವಿಕಾವ್ಯ ವಿಚಾರವಾಗಲಿ, ಪೀಠಿಕಾ ಪ್ರಕರಣವಾಗಲಿ ಅಥವಾ ಮತ್ತಾವ ಬಗೆಯ ಸೂಚನವಾಚಕ ಕಂಡು ಬರುವುದಿಲ್ಲ. 'ಅಃ ವಿಷ್ಣು' ಎಂಬ ವಿಷ್ಣುವಾಚಕವಾದ 'ಅ' ಶಬ್ದದಿಂದ ಗ್ರಂಥ ಆರಂಭವಾಗಿದೆ. ಉದಾಹರಣಾರ್ಥವಾಗಿ :

| | | |
|---|---|---|
| ಅ | : | ವಿಷ್ಣು |
| ಅಂಭ | : | ನೀರು |
| ಅಯ | : | ಕಬನ? ಅಗಿಲು, ಲಾಮಜ್ಜ |
| ಅಬ್ಜಂ | : | ತಾವರೆ |
| ಅಬ್ಜ | : | ಕರ್ಪೂರ, ಚಂದ್ರ (ಮನು)"[೧೧]. |

ಈ ಗ್ರಂಥದ ಹೆಸರನ್ನು ನೋಡಿದರೆ ಇದು ಕೇವಲ ಔಷಧಿವಾಚಕ ಶಬ್ದಗಳನ್ನು ಸಂಗ್ರಹಿಸಿರುವ ಕೋಶವೆಂದು ಸಾಮಾನ್ಯವಾಗಿ ತಿಳಿಯಬಹುದು. ಆದರೆ ಈ ಕೋಶದಲ್ಲಿ ಔಷಧಿವಾಚಕ ಶಬ್ದಗಳು ಮಾತ್ರವಲ್ಲದೆ ಅಲ್ಲಲ್ಲಿ ಪಶು, ಪಕ್ಷಿ, ಮೃಗ, ಪಂಚಭೂತಗಳು ಮೊದಲಾದ ಮತ್ತಿನ ಹಲವು ವಸ್ತುವಾಚಕ ಶಬ್ದಗಳೂ ಸಂಗ್ರಹಿಸಲ್ಪಟ್ಟಿವೆ. ಆದರೆ ಔಷಧವಾಚಕ ಶಬ್ದಗಳು ಹೆಚ್ಚಿರುವುದರಿಂದ ಈ ಹೆಸರಿನಿಂದ ಕರೆಯಬಹುದು. ಈ ಗ್ರಂಥದ ಅಂತ್ಯ ಹೀಗಿದೆ.

| | | |
|---|---|---|
| ಸದಾಪುಷ್ಪೀ | : | ಎಕ್ಕೆ |
| ಸರ್ಪದಂಷ್ಟ್ರೀ | : | ತಗ್ಗಿ |
| ಸದಾಪುಷ್ಪೀ | : | ಅದಿರ್ಗಂತಿ |
| ಸರ್ಪಗಿರ | : | ಬಿಳಿಯೆಲಚಿ |
| ಸಸಿನ | : | ಮುಸ್ತೆ |
| ಸಪ್ತಸಪ್ತಿ | : | ರವಿ"[೧೨] |

**೨.೨.೧.೪. ಸಕಲವೈದ್ಯ ಸಂಹಿತಾಸಾರಾರ್ಣವಂ**

"ವೀರರಾಜೇಂದ್ರೋಕ್ತಿ ವಿಲಾಸ ಅಥವಾ ಸಕಲವೈದ್ಯ ಸಂಹಿತಾಸಾರಾರ್ಣವಂ" ಎಂಬ ಈ ವೈದ್ಯಗ್ರಂಥವನ್ನು ಬರೆದಾತನು ಕಳಲೆಯ ಪ್ರಭು ವೀರರಾಜೇಂದ್ರ, ಈತನ ಕಾಲ ೧೭೨೦ ಎಂದು ಕವಿಚರಿತೆಕಾರರು ನಿರ್ಣಯಿಸಿದ್ದಾರೆ. ಗಾತ್ರದಲ್ಲಿ ಈ ಕೃತಿಯನ್ನು ಮೀರಿಸುವಂಥ ವೈದ್ಯಗ್ರಂಥಗಳು ಕನ್ನಡದಲ್ಲಿ ಮತ್ತೊಂದಿಲ್ಲ. ಈ ಕೃತಿಯ ಕರ್ತೃ ತನ್ನನ್ನು ಕುರಿತು; "ಕರ್ಣಾಟಕ ಚಕ್ರವರ್ತಿ ಚಿಕ್ಕದೇವೇಂದ್ರಂಗೆ ದಕ್ಷಿಣ ಭುಜಾದಂಡಮೆನಿಸಿ ಕೀರ್ತಿಪಡೆದ ದಳವಾಯಿ ದೊಡ್ಡೆಂದ್ರನಕುಮಾರಂ ವೀರರಾಜೇಂದ್ರನಳಮೆಯೊಳ್ ಕಾವ್ಯನಾಟಕಾಲಂಕಾರ 'ವ್ಯಾಕರಣತಕಾಯುರ್ವೇದ ಧನುರ್ವೇದಾದಿ ಸಮಸ್ತ ವಿದ್ಯೆಗಳು ಕಲ್ತುಶೌರ್ಯೌದಾರ್ಯ ಸ್ಥೈರ್ಯಗಾಂಭೀರ್ಯಮಾಧುರ್ಯ ಚಾತುರ್ಯವಿನಯಾದಿ ಗುಣಂಗಳಂ ಮೂರ್ತಿಗೊಂಡಂತೆ ಯೌವನದಿಂ ಪಜ್ಜಳಿಸುತ್ತೆ ನೆಗಟ್ತೆವಡೆದು ತಾಂ ಸಕಲ ಕಲಾಕೋವಿದನಪ್ಪುದಜಿಂ ವಿದ್ವತ್ಸಮಾಜದೊಳ್ ಕಾವ್ಯನಾಟಕಾಲಂಕಾರ ತರ್ಕಶಬ್ದ ವಿಚಾರಂಗೈಯ್ಯುತ್ತೆ ಒಂದು ದಿನಮಾಯುರ್ವೇದಮಂ ವಿಚಾರಿಸುತಿರ್ದು ಧರೆಯೊಳ್ ಭೈಷಜಶಾಸ್ತ್ರ ಸುಖಕರಮುಖಿಳರ್ಗಾದೊಡಂ ವೈದ್ಯಬೋದಂ ತರದಿಂತಳ್ಗುತ್ತೆ ಬಂದತ್ತವನಿಯೊಳೆನುತಾ ವೈದ್ಯಶಾಸ್ತ್ರಕ್ಕೆ ಟೀಕಂ ಬರೆದಂ ವೈದ್ಯಪ್ರವೀಣರ್

ಪೊಗಟುತಿರೆ ಮಹಾಸಂಹಿತಾದುಗ್ಧರತ್ನಾಕರದಿಂದೆತ್ತುತ್ತೆ ಸಾರಾಂಶಮನೊಡನೊಲವಿಂ ವಿರರಾಜಕ್ಷಿತೀಂದ್ರಂ"[೧೩] ಎಂದು ಮೊದಲಾಗಿ ಹೇಳಿರುವುದರಿಂದ ವೀರರಾಜನು ಸಾಕಷ್ಟು ವಿದ್ಯಾವಂತನೂ ವಿನಯಶೀಲನೂ ಶೌರ್ಯಧೈರ್ಯಾದಿ ಗುಣಗಳಿಂದ ಕೂಡಿದವನೂ ಆಗಿರಬೇಕು. ಹಾಗೆಯೇ ಆಯುರ್ವೇದದಲ್ಲಿ ಬಹಳ ಆಸಕ್ತನಾಗಿ ಹಲವೆಡೆಗಳಿಂದ ವಿಷಯ ಸಂಗ್ರಹಿಸಿರಬೇಕು. ಮತ್ತು ಸಂಸ್ಕೃತ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಕನ್ನಡದಲ್ಲಿ ಬರೆದಿರಬೇಕು. ಆದುದರಿಂದ ಇಂಥ ಒಂದು ಅಮೂಲ್ಯ ವೈದ್ಯಗ್ರಂಥ ರೂಪಗೊಂಡಿದೆ. ಇದಕ್ಕೆ ಉತ್ತರವೆಂಬಂತೆ ವೀರರಾಜ ತನ್ನ ಗ್ರಂಥದಲ್ಲೇ "ಧನ್ವಂತರಿ ಮೊದಲಾದವರಿಂದೀಯಾಯುರ್ವೇದಂ ಪಲವುವಿಧಮಾಗಿ ನಿಗಟ್ಟೆವೆತ್ತಿರ್ಪುದು ಆ ಸಮಸ್ತ ಗ್ರಂಥಗಳಂ ಕ್ರೂಡೀಕರಿಸಿ ಪರಿಶೋಧಿಸಿ ಲೋಕಹಿತಾರ್ಥಮಾಗಿ ಸಾರಾಂಶಮಂ ಜೆರೆಗೆಯ್ದು ನವರತ್ನದೊಳಾಣಿಮಣಿಯನಾಯ್ದಾಯ್ದು ಹಾರಮಂ ಬಿತ್ತರಿಸುವಂತೆ ಈ ವೈದ್ಯ ಸಂಹಿತಾಸಾರಾರ್ಣವ ಗ್ರಂಥಮಂ ಕನ್ನಡ ವಾಕ್ಯದಿಂದೆ ವಿರಚಿಸಿದೆಂ"[೧೪] ಎಂದು ಹೇಳಿಕೊಂಡಿದ್ದಾನೆ. ಆದರೆ 'ರಾಜಾವಳೀ ಕಥೆ'ಯನ್ನು ಬರೆದ ದೇವಚಂದ್ರನು (೧೮೩೮) ತನ್ನ ಗ್ರಂಥದಲ್ಲಿ "ಕಳಲೆ ವಂಶದ ವೀರರಾಜಂ ದೊಡ್ಡ ಕೃಷ್ಣರಾಯರ ದಿವಸದಲ್ಲಿ ಅನೇಕ ವೈದ್ಯಶಾಸ್ತ್ರಂಗಳೊಳಿರ್ಪ ರೋಗಹರಮಪ್ಪ ಚಿಕಿತ್ಸೆಯಗಳಂ ಕನ್ನಡ ವಾಕ್ಯದೊಳ್ ವೀರರಾಜೋಕ್ತಿ ವಿಲಾಸಮೆಂದು ಬರೆಯಿಸಿದಂ" ಎಂಬ ಹೇಳಿಕೆಯಿಂದ ಬೇರಾರೋ ಈ ಗ್ರಂಥವನ್ನು ರಚಿಸಿರಬಹುದು ಎಂದು ಸಂದೇಹಕ್ಕೆ ಎಡೆಮಾಡಿದೆ. ಎಂದು ಗ್ರಂಥವನ್ನು ಸಂಪಾದಿಸಿದ ಡಿ.ಶ್ರೀನಿವಾಸಾಚಾರ್ ಹಾಗೂ ಡಿ.ಎಲ್.ನರಸಿಂಹಾಚಾರ್ಯರು ಅಭಿಪ್ರಾಯಪಡುತ್ತಾರೆ. ಇದು ವೈದ್ಯಸಾರ ಸಂಗ್ರಹವನ್ನೆ ಅಲ್ಲಲ್ಲಿ ಮಾರ್ಪಾಟು ಮಾಡಿದ ಕೃತಿಯೇ ಹೊರತು ಸ್ವತಂತ್ರ ಕೃತಿ ಇದಲ್ಲ ಎಂಬ ಅಭಿಪ್ರಾಯವೂ ಉಂಟು"[೧೫].

ಅದೇನೆಯಿದ್ದರೂ ಕನ್ನಡ ವೈದ್ಯಕ್ಷೇತ್ರಕ್ಕೆ ಇದೊಂದು ಅಪರೂಪದ ಕೃತಿ ಎಂಬುದಂತೂ ನಿಜ. ಈ ಕೃತಿಯು ಎರಡು ಭಾಗಗಳಲ್ಲಿ ಮುದ್ರಿತವಾಗಿದೆ. ಮೊದಲ ಸಂಪುಟವನ್ನು ಶ್ರೀಯುತ ಡಿ.ಶ್ರೀನಿವಾಸಾಚಾರ್ ಮತ್ತು ಡಿ.ಎಲ್.ನರಸಿಂಹಾಚಾರ್ಯ ಅವರು ೧೯೩೭ರಲ್ಲಿ ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ ಕೇವಲ ಎರಡೇ ಹಸ್ತಪ್ರತಿಗಳ ಆಧಾರದಿಂದ ಪ್ರಕಟಿಸಿದ್ದಾರೆ. ಆದ್ದರಿಂದ ಸಂಪಾದಕರು "ಇದರಲ್ಲಿ ಅನೇಕ ಲೋಪಗಳಿವೆ ಎಂಬುದು ಬಲ್ಲೆವು. ಮಹನಿಯರು ಈ ದೋಷವನ್ನು ತೋರಿಸಿ ಅವನ್ನು ಸರಿಪಡಿಸುವ ರೀತಿಯನ್ನು ಸೂಚಿಸಿದರೆ ಅವರಿಗೆ ತುಂಬಾ ಕೃತಜ್ಞರಾಗುವೆವು. ಮುಂದಣ ಮುದ್ರಣದಲ್ಲಿಯಾದರು ಸರಿಪಡಿಸಿಕೊಳ್ಳಬಹುದು"[೧೬]. ಎಂದು ಹೇಳಿದ್ದಾರೆ. ಇದರ ಪರಿಷ್ಕೃತ ಮುದ್ರಣ ೧೯೬೪ರಲ್ಲಿ ಹೊರಬಂದಿತು. ಎರಡನೇ ಭಾಗವನ್ನು ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ಮೂರು ಹಸ್ತಪ್ರತಿಗಳನ್ನು (ಕೆ೨೪೩,ಕೆ೮೯೭,ಕೆ೭೮೯) ಬಳಸಿಕೊಂಡು ಬಿ.ಎಸ್.ಸಣ್ಣಯ್ಯ ಅವರು ೧೯೮೪ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಈಗ ಮೂರನೇ ಭಾಗವನ್ನು ಪ್ರಕಟಿಸಲು ಸಂಪಾದನೆಗೆ ಕೈಗೆತ್ತಿಕೊಂಡಿದ್ದಾರೆ.

ವೀರರಾಜನು ಗ್ರಂಥಾವತಾರದಲ್ಲಿ ಶಿವ, ಪಶ್ಚಿಮ ರಂಗನಾಥ, ರಾಮ, ಇವರುಗಳ ಸ್ತುತಿಯನ್ನು ಮಾಡಿದ್ದಾನೆ. ಬಳಿಕ ಚಿಕ್ಕದೇವರಾಜ, ದೊಡ್ಡೇಂದ್ರ ಇವರುಗಳ ಸ್ತುತಿರೂಪವಾದ ಕೆಲವು ಪದ್ಯಗಳನ್ನು ಹೇಳಿ ಗ್ರಂಥವನ್ನು ಆರಂಭಿಸಿದ್ದಾನೆ. ಉಳಿದ ಭಾಗವನ್ನು ತೆಲಗು ಭಾಷೆಯ ಗದ್ಯ ಸರಣಿಯಲ್ಲಿ ಬರೆದಿರುವನು. ಇದರಲ್ಲಿ ೧೬೯ ವಿಧವಾದ ಪ್ರಯೋಗಗಳಿವೆ. ಅಲ್ಲಲ್ಲಿ ವೈದ್ಯಶಾಸ್ತ್ರದಲ್ಲಿ ಪ್ರವೀಣರಾದ ಪುರ್ವಾಚಾರ್ಯರ ಹೆಸರುಗಳನ್ನು ಹೇಳಿದ್ದಾನೆ. ಈ ಗ್ರಂಥದಲ್ಲಿ ಅಧ್ಯಾಯ ಅಥವಾ ಅಧಿಕಾರ ರೂಪದಲ್ಲಿ ಇಲ್ಲದೆ, ವಿವಿಧ ವ್ಯಾದಿಗಳ ಚಿಕಿತ್ಸಾ ವಿಧಾನಗಳನ್ನು ಹೇಳುತ್ತಾ ಹೋಗಲಾಗಿದೆ.

ಒಂದನೇ ಭಾಗವನ್ನು ಆಯುರ್ವೇದೋತ್ಪತ್ತಿ, ನಾಡಿ, ಜಿಹ್ವಾದಿ ಪರೀಕ್ಷಾಕ್ರಮ, ದೇಹಪ್ರಕೃತಿ, ರೋಗ, ಔಷದ, ಪಂಚಕರ್ಮಗಳನ್ನೊಳಗೊಂಡ ಪೀಠಿಕಾ ಪ್ರಕರಣ. ಜ್ವರ ಚಿಕಿತ್ಸಾಧ್ಯಾಯ, ರಕ್ತಪಿತ್ತ, ಕಾಸಶ್ವಾಸ, ಹಿಕ್ಕಾ, ಕ್ಷಯ, ಆರೋಚಕ, ಛರ್ದಿ, ಹೃದ್ರೋಗ, ಮೂರ್ಛಾ, ಉದಾವರ್ತ, ಅತೀಸಾರ, ಗ್ರಹಿಣಿ, ಅಜೀರ್ಣ, ಮೂತ್ರಾಘಾತ, ಅಶ್ಮರೀ ಮತ್ತು ಪ್ರಮೇಹ ಈ ವ್ಯಾದಿಗಳ ಚಿಕಿತ್ಸೆಯ ಅನೇಕಾನೇಕ ಯೋಗಗಳನ್ನು ವಿವರಿಸಲಾಗಿದೆ.

ಎರಡನೇ ಭಾಗದಲ್ಲಿ ವಿವಿಧ ಜ್ವರಕ್ಕೆ, ಕಲ್ಕ, ಕಷಾಯಗಳು ವಾತ ಪ್ರಕೋಪ, ಪತ್ಯಪ್ರಕೋಪ, ಆವರಣಪೈತ್ಯ, ಶ್ಲೇಷ್ಮ ಪ್ರಕೋಪ, ತ್ರಯೋದಶ, ಸನ್ನಿಪಾತ, ರಕ್ತಜಿಹ್ವಕ, ಸನ್ನಿದೋಷ ರಕ್ತಪಿತ್ತ ನಿದಾನ, ಮೂಗಿನಲ್ಲಿ ರಕ್ತ ಬೀಳುವುದು, ಅಸೃಗ್ದರ ಪೈತ್ಯ, ಅಸ್ಥಿಸ್ರಾವ, ಖಾಸಾರೋಗ, ಶ್ವಾಸರೋಗ, ಹಿಕ್ಕಾರೋಗ, ಕ್ಷಯರೋಗ, ಸ್ವರಸಾದರೋಗ, ಅರೋಚಕ, ಛರ್ದಿ, ಹೃದ್ರೋಗ, ಮದ, ಮೂರ್ಛೆ, ತೃಷ್ಣೆ ಆರ್ಶರೋಗ, ಉದಾವರ್ತ, ಅತಿಸಾರ, ಗ್ರಹಿಣಿ, ವಿಷೂಚಿ, ವಾಂತಿ, ಬ್ರಾಂತಿ, ಅಜೀರ್ಣ, ಮೂತ್ರರೋಗ, ಮೋಹ, ಅಂತ್ರವೃದ್ಧಿ, ಗುಲ್ಮರೋಗ, ಶೂಲೆ, ಪಾಂಡುರೋಗ, ಕಾಮಾಲೆ, ಶೋಭೆರೋಗ, ವಿಸರ್ಪರೋಗ, ಮಸೂರಿಕಾ ರೋಗ, ಶೀತ ಪಿತ್ತರೋಗ, ಕುಷ್ಟರೋಗ, ಕ್ರಿಮಿರೋಗ, ವಾತರೋಗ, ಆಮ್ಲಪೈತ್ಯ, ಗರ್ಭಶೂಲ, ಉನ್ಮಾದ, ಅಪಸ್ಮಾರ, ಭೂತರೋಗ, ನೇತ್ರರೋಗ, ಕೃಷರೋಗ, ಕರ್ಣರೋಗ, ನಾಸಾರೋಗ, ಕಂಠದಂತೆ, ಶಿರಸಂಬಂಧಿ ರೋಗಗಳು, ಭಗಂಧರ ವ್ರಣ, ಉಪದಂಶ, ಗಂಡಮೂಲ, ಬಾವು, ದುಷ್ಟವ್ರಣ, ವಾತಪ್ರಬೇದರೋಗ, ವಿಷರೋಗ. ಇವೆ ಮೊದಲಾದ ಆರೋಗ್ಯ ಸಮಸ್ಯೆಗಳ ಬಗೆಗೆ ಪ್ರಸ್ತಾಪಿಸುತ್ತ ತೈಲ, ಲೇಪ, ಅಂಜನ, ಭಸ್ಮಕಷಾಯ, ಘೃತ, ಲೇಹ್ಯ ಮೊದಲಾದ ರೀತಿಯ ಔಷಧಗಳನ್ನು ತಯಾರಿಸುವ ಮತ್ತು ರೋಗಿಗಳಿಗೆ ನೀಡುವ ವಿಧಿವಿಧಾನಗಳನ್ನು ವಿವರಿಸಿದೆ.

ರೋಗ ವಿಧಾನದಲ್ಲಿಯಾಗಲಿ, ಚಿಕಿತ್ಸಾಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿಪ್ರಾಯಗಳನ್ನು ಲೇಖಕ 'ಮತಾಂತರೆ' ಎಂದು ಸೂಚಿಸಿದ್ದಾರೆ. ಸಂಸ್ಕೃತ-ತೆಲಗು ಭಾಷೆಯ ಗದ್ಯಸರಣಿಯಲ್ಲೂ ಇವೆ. ನಾಡೀ, ಜಿಹ್ವಾ, ಮೂತ್ರಪರೀಕ್ಷೆ, ದೇಶ-ಕಾಲ-ವಯೋಭೇದ, ಜ್ವರೋತ್ಪತ್ತಿ ಲಕ್ಷಣ, ರೋಗಪರೀಕ್ಷೆ, ಭೋಜನಾ ಪ್ರಶಂಸಾ, ಕಲ್ಕಗಳು, ಲೇಪ, ಘೃತ, ರಸಾಯನಗಳು ಹೀಗೆ ಕೃತಿಯಲ್ಲಿಯ ಒಂದೊಂದು ಸಂಹಿತೆ ಬಗ್ಗೆ ಒಂದೊಂದು ನಿಬಂಧ ತಯಾರಿಸುವಷ್ಟು ವಿಷಯ ಸಂಪತ್ತನ್ನು ಈ ಕೃತಿ ಪಡೆದಿದೆ. ಕೊನೆಯಲ್ಲಿ "ಇತಿ ಶ್ರೀವಾಗೀಶದ್ಯಮರ ಪರಿವೃಢಸುರುಚಿರಮಣಿಮಕುಟನೂತ್ನರತ್ನ ಪ್ರಭಾಕಿಮ್ಮಿರಿತ ಚಾರುಚರಣಾರವಿಂದದ್ವಂದ್ವ ಶ್ರೀಮದುಮಾಮಹೇಶ್ವರ ಕೃಪಾಕಟಾಕ್ಷಚಂದ್ರಿಕಾಚಕೋರಾಯ ಮಾನಕಳೆಲೆಮರವರಾಧೀಶ್ವರ ಪರಾಕ್ರಮಪಾರ್ಥದೊಡ್ಡ ರಾಜೇಂದ್ರತನೂಭವ ಸಕಲಕಲಾ ಪ್ರವೀಣ ಶ್ರೀಮದ್ವೀರರಾಜೇಂದ್ರ ಪ್ರಣೀತಮಪ್ಪ ಸಕಲವೈದ್ಯ ಸಂಹಿತಾಸಾರಾ ಸಮುದ್ರದೊಳ್"[೧೭]. ಎಂದು ಮುಗಿದಿದೆ. ಈ ಕೃತಿಯ ಪರಿಶಿಷ್ಟ ಭಾಗದಲ್ಲಿ ಸಂಪಾದಕರು ತೆಲುಗು ಭಾಷೆಯ ವಿಷಯವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

### ೨.೨.೧.೫. ವೈದ್ಯಕಂದ

ಈ ಗ್ರಂಥದ ಕರ್ತೃ ಬ್ರಹ್ಮ ಅಥವಾ ಬೊಮ್ಮಯ್ಯ. ಕವಿಚರಿತೆಕಾರರು ಕವಿಯ ಕಾಲವನ್ನು ಸು.೧೭೫೦ ಎಂದು ನಿರ್ಣಯಿಸಿದ್ದಾರೆ. ಈ ಕೃತಿಯಿಂದ ತಿಳಿದು ಬರುವ ಇತಿವೃತ್ತಿಯನ್ನು ಹೀಗೆ ಗುರುತಿಸಬಹುದು. "ಬೊಮ್ಮಯ್ಯನು ಭಾರದ್ವಾಜ ಗೋತ್ರದ ಋಗ್ವೇದ ಶಾಖೆಯ ಬಡಗನಾಡಿನ ಕನ್ನಡಿಗ. ಹಂಪೆಯ ಕ್ಷೇತ್ರಕ್ಕೆ ಪಶ್ಚಿಮ ದಿಕ್ಕಿನಲ್ಲಿರುವ ಕೊಟ್ಟೂರು ಸೀಮೆಯೊಳಗಣ ಇಟ್ಟಗೆಯ ಕುಲಕರ್ಣಿ ಸೂರ್ಯರಾಯನ ಮಗ

ಹನಮಪ್ಪದಾಸ ಮತ್ತು ಭಾಗಾಂಬೆಯರ ಪುತ್ರ, ಶ್ರೀಭಂಡೆರಂಗನ ಹಿರಿಯ ಭಕ್ತ. ಈತನ ದಯೆಯಿಂದಲೇ ವೈದ್ಯೋಪಯುಕ್ತ ವಿಷಯಗಳನ್ನು ಕನ್ನಡದಲ್ಲಿ ಹೇಳುತ್ತೇನೆ; ಬಡವರಿಗೆ ಹಾಗೂ ಪಂಡಿತರಿಗೆ ಪ್ರತಿನಿತ್ಯವೂ ಉಪಯೋಗವಾಗುವಂತಹ ವೈದ್ಯವಿಷಯಗಳನ್ನು ಹೇಳಿದ್ದಾನೆ ಎಂದು ಕವಿಯು ಪೀಠಿಕಾ ಭಾಗದ ಗ್ರಂಥಾದಿ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ. ತನ್ನ ಕೃತಿಗೆ;

"ಚಾರಕ ಸುಶ್ರುತ ಬಾಹಟ
ವಾರಸ್ಫುಟ ಸಾರಂಗಧರ ವೃಂದಾದಿಗಳೊಳ್
ಕಿರಿದಾದ ಯೋಗ ಬಹುಗುಣ
ದಿರವಂ ತಿಳಿದುಸುರ್ವೆ ಕಲ್ಪನೆಗಳಿಲ್ಲವಿದರೊಳ್"[೧೮].

ಚರಕ, ಸುಶ್ರುತ, ಬಾಹಟ, ಸಾರಂಗಧರರ ಸಂಸ್ಕೃತ ಗ್ರಂಥಗಳು ತನ್ನ ಕೃತಿಗೆ ಆಕರಗಳಾಗಿವೆ ಎಂಬುದನ್ನು ಕವಿ ಸೂಚಿಸಿದ್ದಾನೆ.

ವೈದ್ಯಕಂದದಲ್ಲಿ ೬೧೬ ಪದ್ಯಗಳಿವೆ ಎಂದು ಕವಿಚರಿತೆಕಾರರು ಸೂಚಿಸಿದ್ದರು. ಆದರೆ ಬಿ.ಎಸ್.ಸಣ್ಣಯ್ಯ ಅವರು ಈ ಕೃತಿಯ ಸಂಪಾದಕತ್ವದಲ್ಲಿ "ಕವಿಚರಿತೆಕಾರರು ಹಸ್ತಪ್ರತಿಯ ಕೊನೆಯಲ್ಲಿದ್ದ ಪದ್ಯಸಂಖ್ಯೆಯನ್ನು ಮಾತ್ರ ನೋಡಿ ೬೧೬ ಎಂದು ಹೇಳಿದ್ದಾರೆ. ಈ ಸಂಖ್ಯೆ ಚಿಕಿತ್ಸಾ ಪ್ರಕರಣವು ಮಾತ್ರವಾಗಿದೆ. ಇದಕ್ಕೆ ಮೊದಲು ಬರುವ ಅಸಮಗ್ರವಾಗಿ ನಿಂತಿರುವ ನಿದಾನ ಪ್ರಕರಣದ ೩೦೭ ಪದ್ಯಗಳನ್ನು ಅವರು ಗಮನಿಸಿರುವುದಿಲ್ಲ"[೧೯]. ಎಂದು ಹೇಳಿ ಒಟ್ಟು ೯೨೩ ಪದ್ಯಗಳಿವೆ ಎಂದಿದ್ದಾರೆ. ಈ ಕೃತಿಯನ್ನು ಸಂಪಾದಿಸಲು ಎರಡು ಹಸ್ತಪ್ರತಿಗಳ ಸಹಾಯವನ್ನು ಪಡೆದಿದ್ದಾರೆ.

ಒಂದು ಜ್ಞಾನಭಾರತಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಕೆ೧೪೯೨ನೆಯ ಪ್ರತಿ. ಮತ್ತೊಂದು ಮಾನಸಗಂಗೋತ್ರಿಯ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕೆಬಿ೧೭೮ನೆಯ ಪ್ರತಿ.

ಈ ಕೃತಿಯಲ್ಲಿ ಪೀಠಿಕೆ, ಸೂತ್ರ ಪ್ರಕರಣ, ಶಾರೀರಿಕ ಪ್ರಕರಣ, ನಿದಾನ ಪ್ರಕರಣ ಮತ್ತು ಚಿಕಿತ್ಸಾ ಪ್ರಕರಣಗಳಿವೆ. ಕೊನೆಯಲ್ಲಿ ಪರಿಶಿಷ್ಟವನ್ನು ಹೇಳಲಾಗಿದೆ.

ಪೀಠಿಕೆಯಲ್ಲಿ ಕವಿ ತನ್ನ ಇತಿವೃತ್ತಿ ಮತ್ತು ಕೃತಿಯ ಮಹತ್ವವನ್ನು ಹೇಳಿದ್ದಾನೆ. ಸೂತ್ರ ಪ್ರಕರಣದಲ್ಲಿ ದಿನಚರ್ಯ, ಋತುಚರ್ಯ, ವ್ಯಾದಿಗಳು ಬರಲು ಕಾರಣ ಕೆಲವು ವೈದ್ಯೋಪಚಾರ ಹೇಳಿ ತೂಕದ ಕ್ರಮವನ್ನು

"ಗುಲಗಂಜಿಯೆಂಟು ಮಾಸೆಗೆ
ಸಲುವುದು ತಾನೊಂದು ಶಾಣವು ನಾಲ್ಕು ಮಾಸೆಗೆ
ಮೊಲಿದಾರಿಡು ಗದ್ಯಾಣಕೆ
ಸಲಲದು ತಾ ಮಾಸೆ ಹತ್ತು ಕರ್ಷದ ನಾಮಂ"[೨೦]

ಎಂದು ಹೇಳಿರುವುದು ಕೃತಿಯ ವೈಶಿಷ್ಟ್ಯವಾಗಿದೆ. ಮುಂದುವರಿದು ಔಷಧಿ ತಗೆದುಕೊಳ್ಳುವ 'ಪಂಚಕಾಲ'ಗಳನ್ನು ತಿಳಿಸಿರುವನು.

ಶಾರೀರ ಪ್ರಕರಣದಲ್ಲಿ ಸ್ವಸ್ಥಾರಿಷ್ಟವನ್ನು ಹೇಳಿ, ದೇಹದಲ್ಲಿ ವಿವಿಧ ವಿಕಾರಗಳು ಕಂಡು ಬಂದರೆ ಅರಿಷ್ಟವೆಂಬುದನ್ನು ತಿಳಿಸಿರುವನು. ಮುಂದುವರಿದು;

ನೀರೊಳು ಸ್ನಾನವ ಮಾಡಲು
ವಾರಿಜದೆಲೆಯಂತೆ ಮೆಯ್ಯೊಳಂಟದೆಯಿರಲಾ।
[ಪುರುಷನವ] ಮೃತಿಯ್ಯೆದುವ।
ನಾರುಂ ತಿಂಗಳನೊಳೆಂದರಿಷ್ಟದೊಳಿಹುದುಂ॥ ೧೦೯

ಗಂಧವನಂಗಕೆ ಲೇಪಿಸೆ।
ಹೊಂದಲು ಸ್ನಾನವನು ಸರ್ವ ಮೆಯ್ ಹಸಿಯಿರಲುಂ
ಮುಂದೆಯೆದೆಯೊಣಗಲಾವಗೆ।
ಸಂದವನೆಂದರಿವುದರ್ಧಮಾಸದ ನೆಲೆಗಂ"[೨೧] ಪದ್ಯ-೧೧೦

ಸ್ನಾನ ಮಾಡಿದಾಗ ಕಮಲದಳದಂತೆ ಶರೀರಕ್ಕೆ ನೀರು ಅಂಟಿಕೊಳ್ಳದಿದ್ದರೆ ಆತನು ಆರು ತಿಂಗಳೊಳಗೆ ಸಾಯುತ್ತಾನೆ. ಸ್ನಾನ ಮಾಡಿದ ಮೇಲೆ ಮೈಗೆ ಗಂಧಲೇಪನ ಮಾಡಲು ಶರೀರದ ಎಲ್ಲಾ ಭಾಗದಲ್ಲಿಯೂ ಹಸಿಯಿದ್ದು ಎದೆ ಒಣಗಿರಲು ಆತನು ಅರ್ಧ ತಿಂಗಳಲ್ಲಿ ಸಾಯುವನು" ಎಂದು ಮುಂತಾಗಿ ವಿವರಗಳನ್ನು ವಿಷದಪಡಿಸಲಾಗಿದೆ.

ನಿದಾನ ಪ್ರಕರಣದಲ್ಲಿ ಜ್ವರ, ಸಂತತಜ್ವರ, ವಿಷಮಜ್ವರ, ಅತಿಸಾರ, ಅಜೀರ್ಣ, ಕ್ರಿಮಿ, ಪಾಂಡುರೋಗ, ವಾಂತಿ, ಬಾಲರೋಗ, ಕುಷ್ಠರೋಗ, ಯೋನಿರೋಗ, ಕಣ್ಣುರೋಗ, ತಲೆಶೂಲೆ, ವ್ರಣ, ವಾತಜ್ವರ, ಇತ್ಯಾದಿ ವ್ಯಾದಿಗಳ ಲಕ್ಷಣಗಳನ್ನು ಹೇಳಲಾಗಿದೆ. ಉದಾಹರಣೆಗೆ ಕ್ಷಯ ರೋಗದ ಲಕ್ಷಣವನ್ನು;

ಧಾತುಕ್ಷಯ ಮತ್ತೆ ವಾಂತಿಯು।
ಮೂತ್ರದಿ ನಸಿ[ಸಲು] ಶಕ್ತಿಯನು ಮೀರೆಸಗುವಾಗ
ರೀತಿಯ ಕೃತ್ಯವ ಕಾಲದೊ।
(ಳಾಂತುಂ)ಹಿರಿಕಿರಿದು ನಾಲ್ಕು ತೆರೆ ಕ್ಷಯಮಕ್ಕುಂ"[೨೨]. ಪದ್ಯ ೨೪೩

"ರಸಾದಿ ಧಾತುಗಳ ಕ್ಷೀಣತೆಯಿಂದ, ವಾಂತಿಯಿಂದ, ಮೂತ್ರವನ್ನು ತಡೆಯುವುದರಿಂದ, ಶಕ್ತಿಮೀರಿ ಕೆಲಸ ಮಾಡುವುದರಿಂದ, ಹೀಗೆ ನಾಲ್ಕು ಕಾರಣಗಳಿಂದ ಕ್ಷಯವುಂಟಾಗುತ್ತೆ" ಇದು ಈ ಪದ್ಯದ ಗದ್ಯಾರ್ಥ.

ಚಿಕಿತ್ಸಾ ಪ್ರಕರಣದಲ್ಲಿ ನೀರಿನಗುಣ, ಗಂಜಿವಿಧಿ, ನಸ್ಯದ ವಿಧಿ ಇತ್ಯಾದಿ ಹೇಳಿ ಔಷದೋಪಚಾರಗಳನ್ನು; ವಾಂತಿಗೆ : ಅಮರದಬಳ್ಳಿ ಗೇಕಿನ ಕರಿಕನ್ನು ಮೆಣಸು ಶುಂಠಿ ಏಲಕ್ಕಿ ಪುಡಿಯೊಡನೆ ಸೇರಿಸಿ ಜೇನುತುಪ್ಪದೊಡನೆ ಸೇವಿಸಿದರೆ ವಾತದಿಂದುಟಾದ ವಾಂತಿ ಶಮನವಾಗುವುದು"[೨೩]. ಎಂದು ಈ ರೀತಿ ವಿವಿಧ ರೋಗಗಳಿಗೆ ಸೂಚಿಸಲಾಗಿದೆ. ಈ ಚಿಕಿತ್ಸಾ ಪ್ರಕರಣದಲ್ಲಿ ತೃತೀಯದಳ ಸಂಪೂರ್ಣ ಎಂದು ಚತುರ್ಥದಳ ಪ್ರಾರಂಭವಾಗಿದೆ. ಆದರೆ ಪ್ರಥಮ ಮತ್ತು ದ್ವಿತೀಯ ದಳಗಳು ಇರುವುದಿಲ್ಲ. ಅಂದರೆ ಈ ಕೃತಿಯ ಪೂರ್ಣಪ್ರತಿ ದೊರೆತಿಲ್ಲವೆಂದೇ ಹೇಳಬಹುದು. ಈ ಕೃತಿಯ ಕೊನೆಯಲ್ಲಿ "ಇತಿ ಶ್ರೀ ಸೂರ್ಯ ರಾಯವಂಶೋತ್ತಂಸೇನ ಶ್ರೀಮತ ಭಂಡೆರಂಗಚರಣಧುರೀಣ ಬೊಮ್ಮಯ್ಯಾಮಾತ್ಯ ವಿರಚಿತಮಪ್ಪ ವೈದ್ಯಕಂದ"[೨೪]. ಎಂದಿದೆ. ಪರಿಶಿಷ್ಟ ಭಾಗದಲ್ಲಿ ಹದಿನಾಲ್ಕು ಪದ್ಯಗಳಲ್ಲಿ ನಾಡಿ ಲಕ್ಷಣವನ್ನು ಹೇಳಲಾಗಿದೆ.

### ೨.೨.೨. ಅಪ್ರಕಟಿತ ಹಸ್ತಪ್ರತಿಗಳು

### ೨.೨.೨.೧. ಗೋವೈದ್ಯ

ಕನ್ನಡದಲ್ಲಿ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಮೊದಲು ರಚನೆಯಾದ ಈ ಗ್ರಂಥದ ಕರ್ತೃ ಕೀರ್ತಿವರ್ಮ. ಈತನು ಸಾಹಿತ್ಯ ಮತ್ತು ಕಲೆಗಳಲ್ಲಿ ನಿಪುಣನಾಗಿದ್ದನು. 'ವೈದ್ಯರತ್ನ' ಎಂಬ ಪ್ರಶಸ್ತಿಯಿಂದ ಇವನಿಗೆ ವೈದ್ಯಶಾಸ್ತ್ರದಲ್ಲಿಯೂ ಪ್ರಾವೀಣ್ಯವಿತ್ತೆಂಬುದು ಸ್ಪಷ್ಟವಾಗುತ್ತದೆ. ಈತನ ಕುರಿತು ಒಂದು ಪದ್ಯದಲ್ಲಿ ವಿವರವಾದ ಮಾಹಿತಿ ಈ ರೀತಿ ಇದೆ;

ಅಧಿಕಂ ರಕ್ತಪ್ರಭಂ ಕಾಲಚಲನನಮರ್ದಿರೆ ಅಂತಸ್ತಸತ್ಪ್ರಾ
ಣದಜೀವಧನಂ ನೋಡಲ್ ಬಹಿಃ ಪ್ರಾಣಮುನಡೆನಿದಾನಂ ಜಗಕ್ಕೆಂದು ಕಾವ್ಯಂ॥
ಬುದುಸದ ವೈದ್ಯರತ್ನಂ ದೆಸೆದೆಸೆಗೆಸೆಯಲ್ ಪೇಳ್ದನುತ್ಸಾಹದಿಂ ಮಿ।
ತಥರಾವಿಕ್ಕದರಪಾಲಭವಂದ್ಯಂ ಸಹಜಕವಿಜಿತೋತ್ಸಾಹನಂ ಕೀರ್ತಿಚಂದ್ರಂ।

ಎಂದು ಹೇಳಿರುವುದರಿಂದ ಗೋವೈದ್ಯವನ್ನು ವಿವರಣಾತ್ಮಕವಾಗಿ ಪ್ರತ್ಯೇಕ ಗ್ರಂಥವಾಗಿ ಹೇಳಿದ್ದಾನೆ. ಈ ದೃಷ್ಟಿಯಿಂದ ಕೀರ್ತಿವರ್ಮನಿಗೆ ಮತ್ತು ಆತನ ಕೃತಿಗೆ ಮಹತ್ವವಿದೆ. ಗ್ರಂಥದಲ್ಲಿ ದೊರೆಯುವ ಆಂತರಿಕ ಆಧಾರಗಳಿಂದ ಕೀರ್ತಿವರ್ಮನು ಚಾಳುಕ್ಯರಾಜ ತ್ರೈಲೋಕ್ಯ ಮಲ್ಲಾಧೀಪನ ಪುತ್ರ, ವಿಕ್ರಮನ ಸೋದರ, ದೇವಚಂದ್ರ ಮುನಿಯ ಶಿಷ್ಯನೆಂದು ತಿಳಿದುಬರುತ್ತದೆ. "ತ್ರೈಲೋಕ್ಯ ಮಲ್ಲನು ಕ್ರಿ.ಶ.ಸು.೧೦೪೨ ರಿಂದ ೧೦೬೮ರವರೆಗೆ ಆಳಿದಂತೆಯೂ, ಅವನ ಮಗನಾದ ವಿಕ್ರಮಾದಿತ್ಯನು ಕ್ರಿ.ಶ.ಸು.೧೦೭೬ ರಿಂದ ೧೧೨೬ರವರಗೆ ಆಳಿದಂತೆಯೂ ತಿಳಿದುದರಿಂದ ಕವಿ ಕ್ರಿ.ಶ.ಸುಮಾರು ೧೧೦೦ರಲ್ಲಿ ಇದ್ದಿರಬಹುದು"[೨೫]. ಎಂದು ಕವಿಚರಿತೆಕಾರರು ನಿರ್ಧರಿಸಿದ್ದಾರೆ. 'ಜಿನನಾಪ್ತಂ ಗುರು ದೇವಚಂದ್ರಮುನಿಪಂ' ಎಂದಿರುವುರಿಂದ ಈತನದು ಜೈನ ಮತವೆಂದು ತಿಳಿಯುತ್ತದೆ. ಈ ಕವಿಯ ಸಮಕಾಲದವನಾದ ಬ್ರಹ್ಮ ಶಿವಕವಿ ತನ್ನ ಸಮಯ ಪರೀಕ್ಷೆಯಲ್ಲಿ ಈತನ ವಿಷಯವಾಗಿ ಈ ಮೇಲಿನ ಅಂಶಗಳನ್ನು ಈ ಕೆಳಗಿನ ಪದ್ಯಗಳಲ್ಲಿ ಹೇಳಿದ್ದಾನೆ.

ಜನತಾನಂ ದಂ ಚಳುಕ್ಯಾಭರಣನವನಿಪಾಲೋತ್ತಮಂ ಸಾರ್ವಭೌಮಂ।
ಜನಕಂ ತ್ರೈಲೋಕ್ಯಮಲ್ಲಂ ಸಕಳವಸುಮತೀವಲ್ಲಭಂ ವಿಕ್ರಮಾಂಕಾ॥
ವನಿಪಂ ತಾನಗ್ರಜಾತಂ ತ್ರಿಭುವನಪತಿ ದೇವಾಧಿದೇವಂ ಜಿನೇಂದ್ರಂ।
ತನಗಾಪ್ತಂ ಮತ್ತೆನಲ್ಕೆಂ ಪಿರಿಯನೊ ಜಗತೀನಾಥರೋಳ್ ಕೀರ್ತಿವರ್ಮಂ॥

ಗೋವೈದ್ಯವು ಗದ್ಯಪದ್ಯಗಳಲ್ಲಿ ರಚಿತವಾಗಿದೆ. ನನಗೆ ದೊರೆತ ಹಸ್ತಪ್ರತಿ ಅಸಮಗ್ರ ಮತ್ತು ಅಶುದ್ಧ. ಲಭ್ಯವಿರುವ ಈ ಹಸ್ತಪ್ರತಿಯಲ್ಲಿ ಗೋವುಗಳಿಗೆ ಸಂಬಂಧಿಸಿದ ನಾಳಿಹುಂಣಿಗೆ, ನೆಗಡಿಗೆ, ಮೂಗಿನ ನಸಿಗೆ, ಕಾಲುಬೇನೆಗೆ, ಕಾಲುನೊಂದುದಕ್ಕೆ, ಸರ್ಪವಿಷಕ್ಕೆ, ಚೇಳಿನ ವಿಷಕ್ಕೆ, ಕಂಣೀರ ಸುರ್ರಿದರೆ, ಗಂಡಾಮೊಲೆಗೆ, ಕೆಂಮಿಗೆ, ತಿರುಗುರೋಗಕ್ಕೆ ಇತ್ಯಾದಿ ವ್ಯಾದಿಗಳಿಗೆ ಔಷಧಗಳೂ, ಯಂತ್ರಗಳೂ, ಬರೆಹಾಕುವ ಕ್ರಮಗಳನ್ನು ವಿಸ್ತಾರವಾಗಿ ಹೇಳಿದೆ.

### ೨.೨.೨.೨. ಕರ್ನಾಟಕ ಕಲ್ಯಾಣಕಾರಕ

ಈ ಕೃತಿಯನ್ನು ಬರೆದವನು ಜಗದ್ದಳ ಸೋಮನಾಥ. ಈತನು ಕಾಲವನ್ನು ಕುರಿತು ಒಂದು ಪದ್ಯದಲ್ಲಿ;

ಸುಮನೋಬಾಣಕವೀಂದ್ರ
ಪ್ರಮುಖಂಬೆರಸಭಯ ಚಂದ್ರ ಸಿದ್ಧಾಂತಿಗಳು।
ತ್ತಮಮಾಗೆ ತಿರ್ದಿದೀಕೃತಿ।
ಗಮರ್ದುದು ಸೌಭಾಗ್ಯಮೊಂದಿದಾದಾಯುಂ ಶ್ರೀಯುಂ।"[೨೬]

ಎಂಬ ಪದ್ಯದಲ್ಲಿ ತನ್ನ ಗ್ರಂಥವನ್ನು ಸುಮನೊಬಾಣಕವಿಯೂ ಅಭಯ ಚಂದ್ರಸಿದ್ಧಾಂತಿಯೂ ತಿದ್ದಿದಂತೆ, ಹೇಳುವುದರಿಂದ ಕವಿ ಸುಮನೋಬಾಣನ ಕಾಲದವನು ಎಂಬುದು ವ್ಯಕ್ತವಾಗುತ್ತದೆ. ಸುಮನೋಬಾಣನು ಕ್ರಿ.ಶ.ಸು.೧೧೭೫ರಲ್ಲಿ ಇದ್ದುದಾಗಿ ತಿಳಿಯುವುದರಿಂದ ಕವಿಯ ಕಾಲವು ಅದೇ ಆಗಿರಬೇಕು. ಕನ್ನಡದಲ್ಲಿ ಮನುಷ್ಯವೈದ್ಯ ವಿಚಾರವನ್ನೇ ಇಡಿಯಾಗಿ ಸಮಗ್ರ ಗ್ರಂಥದಲ್ಲಿ ಮೊದಲು ನಿರೂಪಿಸಿದ ಕೀರ್ತಿ ಜಗದ್ದಳ ಸೋಮನಾಥನಿಗೆ ಸಲ್ಲುತ್ತದೆ. ಕರ್ಣಾಟಕ ಕಲ್ಯಾಣಕಾರಕವು ಕಂದ ವೃತ್ತಗಳಲ್ಲಿ ರಚಿತವಾಗಿದೆ. ಕವಿ ಜೈನನಾದ ಕಾರಣ ಈ ಕೆಳಗಿನಂತೆ ಹೇಳಿಕೊಂಡಿದ್ದಾನೆ;

ಇದು ನಮದ ಸುರೇಂದ್ರನಂದಿತ ಶ್ರೀಪಾದ ಪದ್ಮಾಂಕಿತ
ಶ್ರೀಚಂದ್ರಪ್ರಭ ಜಿನೇಂದ್ರಚಂದ್ರ ಕಿರಣಭತೋರಾಮಮಾನ
ಶ್ರೀಮದಭಮಚಂದ್ರ ಸೂರಿವರ ಶಿಷ್ಯ ವಿಚಿತ್ರಕವಿ ಜಗದ್ದಳ
ಸೋಮನಾಥ ವಿರಚಿತಮಪ್ಪ ಕರ್ಣಾಟಕಕಲ್ಯಾಣಕಾರಕದೊಳ್"[೨೭]

ಎಂದು ಪ್ರತಿಯೊಂದು ಅಧ್ಯಾಯದ ಅಂತ್ಯದಲ್ಲಿ ಹೇಳಿದ್ದಾನೆ. ಮತ್ತು ಆರಂಭದಲ್ಲಿ ಚಂದ್ರನಾಥನ ಸ್ತುತಿಯನ್ನು ಮಾಡಿರುವನು. ಹಿಂದೆ ಪೂಜ್ಯಪಾದ ಮುನಿಗಳು ಸಂಸ್ಕೃತದಲ್ಲಿ ಹೇಳಿರುವ ಕಲ್ಯಾಣಕಾರಕವನ್ನು ಮತ್ತು ಬಾಹಟ, ಸಿದ್ದಸಾರ, ಚರಕರ ವೈದ್ಯಗ್ರಂಥಗಳಿಗಿಂತ ಪೂಜ್ಯಪಾದನ ಕಲ್ಯಾಣಕಾರಕವು ಉತ್ಕೃಷ್ಟವಾದುಂದೆಂದೂ, ಅದರಲ್ಲಿ ಹೇಳಿರುವ ಚಿಕಿತ್ಸೆ ಮದ್ಯಮಾಂಸಮಧುವರ್ಜಿತವೆಂದೂ ಅದನ್ನು ಕರ್ಣಾಟಕ ಭಾಷೆಯಲ್ಲಿ ಬರೆದಿರುವೆನೆಂದು ಕವಿ ಈ ಕೆಳಗಿನಂತೆ ನಿರೂಪಿಸಿದದ್ದಾನೆ;

ಸುಕರಂ ತಾನೆನೆ ಪೂಜ್ಯಪಾದಮುನಿಗಳ್ ಮುಂಪೆಟ್ಟಿಕಲ್ಯಾಣಕಾ॥
ರಕಮಂ ಬಾಹಟಸಿದ್ಧಸಾರ ಚರಕಾದ್ಯುತ್ಕೃಷ್ಟಮಂ ಸದ್ಗುಣಾ॥
ಧಿಕಮಂ ವರ್ಜಿತಮದ್ಯಮಾಂಸಮಧುವಂ ಕರ್ಣಾಟದಿಂಲೋಕರ।
ಕ್ಷಕಮಂ ಚಿತ್ರಮದಾಗೆ ಚಿತ್ರಕವಿಸೋಮಮಂ ಪೆಟ್ಟಿನಿಂತಟ್ಟುಯಿಂ॥"[೨೮]

ಅಂದರೆ ಜಗದ್ದಳ ಸೋಮನಾಥ ಪೂಜ್ಯಪಾದ ಮುನಿಗಳ ಸಂಸ್ಕೃತ ಕಲ್ಯಾಣಕಾರಕವನ್ನೆ ಅನುವಾದ ಮಾಡಿದ್ದಾರೆ. ಪೂಜ್ಯಪಾದರ ಕಲ್ಯಾಣಕಾರವು ಜೈನಧರ್ಮದ ಆಧಾರದ ಮೇಲೆ ರಚನೆಯಾಗಿದ್ದಂತೆ ಸೋಮನಾಥನು ಜೈನನಾದ ಕಾರಣ ಯತಾವತ್ತಾಗಿ ಭಾಷಾಂತರ ಮಾಡಿದ್ದಾನೆ. ಈ ಕೃತಿಯು ಒಟ್ಟು ೨೫ ಅಧ್ಯಾಯಗಳನ್ನುಳ್ಳ ಗ್ರಂಥ. ಆದರೆ ಈಗ ನನಗೆ ಕೇವಲ ೮ ಅಧ್ಯಾಯಗಳುಳ್ಳ ಹಸ್ತಪ್ರತಿಗಳು ಮಾತ್ರ ಲಭ್ಯವಾಗಿವೆ. ಪ್ರತಿ ಅಧ್ಯಾಯ ಪ್ರಾರಂಭಿಸುವ ಮೊದಲು ಮಂಗಲಾಚರಣೆ ಹೇಳಿದ್ದಾರೆ.

೧ನೇ ಅಧ್ಯಾಯ : ಆಯುರ್ವೇದದ ಉತ್ಪತ್ತಿ, ಅರ್ಥ–ಉದ್ದೇಶ, ವೈದ್ಯರ ಶ್ರೇಷ್ಠತೆ, ವೈದ್ಯಲಕ್ಷಣ–ಚಿಕಿತ್ಸಾ ಪದ್ಧತಿ–ಅರಿಷ್ಟ ಲಕ್ಷಣ ಇತ್ಯಾದಿ ವಿಷಯಗಳನ್ನು ಒಳಗೊಂಡಿದೆ. ೨ನೇ ಅಧ್ಯಾಯ : ಇದು ಪರಿಭಾಷಾ ಪ್ರಕರಣ. ಇದರಲ್ಲಿ ಶರೀರ ತತ್ವಗಳು, ದೇಶ, ಕಾಲ, ವಯೋಬೇಧಗಳು, ದ್ರವ್ಯಸಂಗ್ರಹ, ದೂತ, ಶಕುನ, ಸ್ವಪ್ನಗಳ ಶುಭಾಶುಭ, ಅರಿಷ್ಟ ಲಕ್ಷಣಗಳು ಮತ್ತು ಗ್ರಹಫಲಗಳ ವಿವರಣೆ ಇದೆ. ಮುಂದೆ ಷೋಢಶ ಜ್ವರ ವಿದಾನ ಚಿಕಿತ್ಸಾ ನಿರೂಪಣ, ಅತಿಸಾರ ಗ್ರಹಣೀ ನಿದಾನ ಚಿಕಿತ್ಸಾ ನಿರೂಪಣ, ರಕ್ತ ಪಿತ್ತ ನಿದಾನ ಚಿಕಿತ್ಸಾನಿರೂಪಣ, ಕ್ಷಯ ನಿದಾನ ಚಿಕಿತ್ಸಾ ನಿರೂಪಣ, ಉದರರೋಗ ನಿದಾನ ಚಿಕಿತ್ಸಾ ನಿರೂಪಣ, ಗುಲ್ಮನಿದಾನ ಚಿಕಿತ್ಸಾ ನಿರೂಪಣ ಎಂಬ ಅಧ್ಯಾಯನಗಳಿವೆ. ಈ ಎಲ್ಲಾ ಅಧ್ಯಾಯಗಳಲ್ಲಿ ಜ್ವರ, ಅತಿಸಾರ, ಗ್ರಹಣಿ, ರಕ್ತಪಿತ್ತ, ಕ್ಷಯ, ಉದರ, ಗುಲ್ಮ, ಅಶ್ಮರೀ, ಪ್ರಮೇಹ, ಅರ್ಶ, ಕುಷ್ಠ, ಭಗಂದರ, ಪಾಂಡು, ಕಾಮಲಾ, ಹಿಕ್ಕಾ, ಛರ್ದಿ, ಮೂತ್ರಕುಛ್ರ, ಉಪದಂಶ, ಮುಷ್ಕರೋಗ, ಕಾಸ, ಉದಾವರ್ತ, ಉನ್ಮಾದಾಪಸ್ಮಾರ, ವಾತರೋಗ, ನರವುಲಿ, ಶೋಥ, ಶಲ್ಯ, ವಿಷಗ್ರಹ, ವ್ರಣ, ವಾದ್ರ್ವಾಂಗ ರೋಗಗಳು ಇತ್ಯಾದಿ ರೋಗಗಳ ಕಾರಣ ಮತ್ತು ಚಿಕಿತ್ಸೆಗಳನ್ನು ಸೂಕ್ಷ್ಮವಾಗಿ ತಿಳಿಸಲಾಗಿದೆ.

ಜ್ವರದ ಚಿಕಿತ್ಸಾ ಕ್ರಮವನ್ನು ಚರ್ಚಿಸುತ್ತಾ "ಜ್ವರದ ಆದಿಯೊಳ್ ಉಪವಾಸಂ, ಜ್ವರ ಮಧ್ಯಮದಲ್ಲಿ ಗಂಜಿ, ಪೇಳ್ದ ಕಷಾಯಂ, ಜ್ವರ ಪಾಕದೊಳ್ ಅಸ್ತಮಿತ ಜ್ವರದೊಳ್ ಮಲಹರಣಂ ಇನಿತು ಇವು ಆರೋಗ್ಯಕಂ"[೨೯] ಎಂದು ಹೇಳಲಾಗಿದೆ. ಇಲ್ಲಿ ರೋಗದಿಂದ ಮುಕ್ತಿಹೊಂದಲು ಉಪವಾಸ, ಗಂಜಿ, ಕಷಾಯದಂಥ ಕ್ರಮಗಳನ್ನು ಕೈಗೊಂಡು ಉಪಚರಿಸಿಕೊಳ್ಳಬೇಕೆಂದು ಸಲಹೆ ಮಾಡಿದ್ದಾನೆ. ಮತ್ತು ಮನುಷ್ಯ ತಾನು ಸೇವಿಸುವ ಆಹಾರವೇ ಅವನಿಗೆ ಉಂಟಾಗುವ ಹಲವು ರೋಗಗಳಿಗೆ ಕಾರಣ ಎಂಬುದುನ್ನು ಶಾಸ್ತ್ರಕಾರ ಪದೇಪದೇ ತಿಳಿಸುತ್ತಾನೆ. ಜೊತೆಗೆ ನೀರನ್ನು ಕುರಿತು ನಾನಾ ಬಗೆಯ ತಿಳಿವಳಿಕೆ ನೀಡಲಾಗಿದೆ. ಹಾಗೂ ಸರ್ವಜ್ವರ, ಸರ್ವಕುಷ್ಠ, ಸರ್ವಗ್ರಹೋಚ್ಚಾಟನಕ್ಕೆ ಚಿಕಿತ್ಸೆಯನ್ನು ಹೇಳಿದ್ದು ಹೀಗೆ;

ಟೀಕು॥ ಮೆಣಸು, ಶುಂಟಿ, ಜಾಜುಕಲ್ಲು, ಶ್ರೀಗಂಧ, ಹತ್ತಿಕಾಳು, ಶಿಲಾಧಾತು, ಲಾಮಂಚ, ಕಕ್ಕೊಲ, ಜಾಯಿಫಲ, ಕಟುಕರೋಹಿಣಿ, ಬೇವು, ಸಾಸಿವೆ, ದೇವದಾರು, ಪರ್ಪಾಟಕ, ಅರಸಿನ, ಹಿಪ್ಪಲಿ, ಬಜೆ, ಗಂಗುಂಗೆ ಬೀಜ, ಕರಿಜಿರಿಗೆ, ತಾವರೆಗಡ್ಡೆ, ಆಷಾಡಿಬೇರು, ಶಕಾವರಿಗೆಡ್ಡೆ, ಸಹದೇವಿ, ಕುರಚನಬೇರು, ನೀಲಿ, ಜಟಾಮಾಂಸಿ, ಇವಂ ಸಮ ಚುರ್ಣವಂ ಮಾಡಿ ಮೈಗೆ ಉದ್ವರ್ತನವಂ ಮಾಡುತಿರಲು ಸರ್ವಜ್ವರಹರ। ಸರ್ವಕುಷ್ಠಹರ। ಸರ್ವಗ್ರಹೋಚ್ಚಾಟನ॥"[೩೦]

ಈ ಕೃತಿಯಲ್ಲಿ ಔಷಧಯೋಗಗಳು ಬಹುಮಟ್ಟಿಗೆ ಮೂಲಿಕಾ ದ್ರವ್ಯಗಳು ಒಂದೆರಡು ಸ್ಥಳಗಳಲ್ಲಿ ಮಾತ್ರ ತಾಮ್ರ, ಸೀಸ ಗಂಧಕ, ಮನಶ್ಶಿಲಾಗಳ ಯೋಗಗಳಿವೆ. ಆದರೆ ಎಲ್ಲಿಯೂ ಹಿಂಸಾಜನ್ಯವಾದ ಜೇನುತುಪ್ಪ, ಮದ್ಯ ಹಾಗೂ ಮಾಂಡಿಲ ದ್ರವ್ಯಗಳನ್ನು (ಪ್ರಾಣಿಜನ್ಯ) ಉಪಯೋಗಿಸಲು ಹೇಳಿಲ್ಲ. ಜೈನರು ಅಹಿಂಸಾ ಪರಮೋ ಧರ್ಮವೆಂದು ಪ್ರತಿಪಾದಿಸಿದ ಅವರು ಎಲ್ಲಿಯೂ ಹಿಂಸೆಯನ್ನು ಹೇಳಿಲ್ಲ. ಚಿಕಿತ್ಸೆಯಲ್ಲಿ ಇವುಗಳ ಪಾತ್ರ ಅಂತಹ ಮಹತ್ವದ್ದೇನೂ ಅಲ್ಲ. ಇವುಗಳ ಬದಲಾಗಿ ಅಷ್ಟೇ ಶಕ್ತಿಯುಳ್ಳ ಗಿಡಮೂಲಿಕೆ ಬಳಸಬಹುದಾಗಿದೆ. ಇದರಿಂದ ಪಶು, ಪಕ್ಷಿ, ಪ್ರಾಣಿಗಳ ರಕ್ಷಣೆಯಾದಂತಾಗುತ್ತದೆ. ಆದರೆ ಭೂತಜ್ವರ, ಬಾಲಗ್ರಹ ಮತ್ತು ವಿಷಚಿಕಿತ್ಸೆಗಳಲ್ಲಿ ಯಂತ್ರ ಮಂತ್ರಗಳ ವಿವರಣೆ ಇದೆ.

### ೨.೨.೨.೩. ಬಾಲಗ್ರಹ ಚಿಕಿತ್ಸೆ

ಬಾಲವೈದ್ಯ, ಬಾಲಗ್ರಹ ಚಿಕಿತ್ಸೆ, ಬಾಲಕ ಚಿಕಿತ್ಸೆ ಎಂಬ ಹೆಸರಿನಿಂದ ದೊರೆಯುವ ಈ ಗ್ರಂಥವನ್ನು ಬರೆದಾತನು ದೇವೆಂದ್ರಮುನಿ. ಈತನ ಕಾಲ ಕ್ರಿ.ಶ.ಸು.೧೨೦೦ ಎಂದು ಕವಿಚರಿತೆಕಾರರು ಊಹಿಸಿದ್ದಾರೆ. ಹಸ್ತಪ್ರತಿಗಳಲ್ಲಿ ಈತನ ಕುರಿತು ಯಾವುದೇ ಮಾಹಿತಿ ದೊರೆಯುವುದಿಲ್ಲ. ಈ ಗ್ರಂಥವು ಗದ್ಯದಲ್ಲಿ ಬರೆಯಲ್ಪಟ್ಟಿದೆ. ಗ್ರಂಥಾದಿಯಲ್ಲಿ "ಶ್ರೀಚಂದ್ರನಾಥಾಯನಮಃ ಶ್ರೀಮಜ್ಜಿನೇಂದ್ರನ ಕೋಮಲ ಪಾದಪದ್ಮಲವಕ್ಕೆ ಮುನಿದೇವೇಂದ್ರಂ ಪ್ರೇಮದಿನೆರಗಿ ಜಗಜ್ಜನ ಕಾಮಿತವಂ ಬಾಲವೈದ್ಯಂ ವಿರಚಿಸಿದಂ" ಎಂದು ಪ್ರಾರಂಬಿಸುವುದರಿಂದ ಈತನು ಜೈನಕವಿ. ಈ ಕುರಿತ ಹಸ್ತಪ್ರತಿಗಳು ಹಲವಾರು ದೊರೆಯುತ್ತವೆ. ಶ್ರವಣಬೆಳಗೊಳದಲ್ಲಿ ೪೭೬ ಸಂಖ್ಯೆಯ ಪ್ರತಿಯಲ್ಲಿ ಪೂರ್ಣಕೃತಿ ದೊರೆಯುತ್ತದೆ. ಉಳಿದಡೆ ಅಸಮಗ್ರವಾದವುಗಳಿವೆ. ಈ ಗ್ರಂಥದಲ್ಲಿ ಮಗು ಹುಟ್ಟಿದ ದಿವಸದಿಂದ ಹತ್ತು ದಿವಸ, ಹನ್ನೆರಡು ಮಾಸ, ಹದಿನಾರು ವರ್ಷದವರೆಗೆ ಮಕ್ಕಳಿಗೆ ತಗಲುವ ವ್ಯಾದಿಗಳ ವಿವಿಧ ದೇವತೆಗಳ ಕಾಡಿಕೆಯಿಂದ ತಗಲುತ್ತವೆಂದು ಆಯಾ ದೇವತೆಗಳ ಹೆಸರುಗಳಿಂದ ಗುರುತಿಸಲಾಗಿದೆ. ಆಯಾ ವ್ಯಾದಿಗಳು ತಗುಲಿದಾಗ ಮಕ್ಕಳ ಲಕ್ಷಣ ಹೇಳಿ ಆ ವ್ಯಾದಿಗಳಿಗೆ ಮಂತ್ರ-ಯಂತ್ರ-ಬಲಿ, ಧೂಪ ತಿಲಕಗಳಿಂದ ಚಿಕಿತ್ಸೆ ಮಾಡಿ ವ್ಯಾದಿಗಳನ್ನು ಗುಣಪಡಿಸುವ ಕ್ರಮಗಳನ್ನು ಹೇಳಲಾಗಿದೆ.

ಈ ಗ್ರಂಥವು ಮೂರು ಭಾಗಗಳಲ್ಲಿ ವಿಭಾಗಿಸಲ್ಪಟ್ಟಿದೆ. ಮೊದಲ ಭಾಗದಲ್ಲಿ "ಒಂದು ದಿನದ ಕೂಸಂದನದೇವತೆಯೆಂಬ ದೇವತೆ ಪಿಡಿಗುಂ। ಪಿಡಿದೊಡಾ ಕೂಸು ಬೆನ್ನಕೊರಳು ಮುರಿ ಉತ್ತಿಕ್ಕುಂ। ಅಳಲಾರದುಂ। ಶಿರನಡಗೂದಂ। ತೇಜವೊನೊಗುವುದು। ನಿರ್ಜ್ಜಿವಮಾಗಿಕ್ಕುಂ । ನರಳುದುಂ । ಅದಕ್ಕೆ ಬಲಿ ಉದ್ದಿನ ಹುಗ್ಗೆಯುಂ ವೊಗರುಮಂ। ಹಾಲು ತುಪ್ಪಮುಂ। ಮೊಸರುಂ । ಗಂಧಾಕ್ಷತೆ । ದೀಪ। ದೂಪ। ಫಲ। ತಾಂಬೂಲ ದಿನಗಳೆರಸಿ। ಅರಮೂಡನೊದಿಕ್ಕಿನಲ್ಲಿಗೆ ದಿನ ಮೂರು ಬಡ್ಡೆ ಕೂಡಿದಲ್ಲಿ ಮೂರುಯಿರುಳು ಬಲಿಯ ಕೊಡುವುದು"[೩೧]. ಎಂದು ಪ್ರಾರಂಭವಾಗಿ



೨ ದಿನದ ಕೂಸಿಗೆ ಕುಂಬನಿಯೆಂಬ ದೇವತೆಯ ಪಿಡುಗುಂ

೩ ದಿನದ ಕೂಸಿಗೆ ಕಾಣಿಕೆಯೆಂಬ ದೇವತೆಯ ಪಿಡುಗುಂ

೪ ದಿನದ ಕೂಸಿಗೆ ಬಿಮರೂಪಿಣಿಯೆಂಬ ದೇವತೆಯ ಪಿಡುಗುಂ

೫ ದಿನದ ಕೂಸಿಗೆ ಹಂಸಿನಿಯೆಂಬ ದೇವತೆಯ ಪಿಡುಗುಂ

೬ ದಿನದ ಕೂಸಿಗೆ ಪಿಂಗಳಿಯೆಂಬ ದೇವತೆಯ ಪಿಡುಗುಂ

೭ ದಿನದ ಕೂಸಿಗೆ ಮುಕ್ತಕೇಶಿನಿಯೆಂಬ ದೇವತೆಯ ಪಿಡುಗುಂ

೮ ದಿನದ ಕೂಸಿಗೆ ಹಂಸಿನಿಯೆಂಬ ದೇವತೆಯ ಪಿಡುಗುಂ

೯ ದಿನದ ಕೂಸಿಗೆ ಹೋಯಕೇಶಿನಿಯೆಂಬ ದೇವತೆಯ ಪಿಡುಗುಂ

೧೦ ದಿನದ ಕೂಸಿಗೆ ರೊದ್ದಿನಿಯೆಂಬ ದೇವತೆಯ ಪಿಡುಗುಂ" ಎಂದು ಹೇಳುವ ಮೂಲಕ ಆಯಾ ಪಿಡುಗು ತಗುಲಿದಾಗ ಮಕ್ಕಳ ಲಕ್ಷಣ ಮತ್ತು ಆಯಾ ರೋಗಗಳಿಗೆ ಚಿಕಿತ್ಸಾ ಕ್ರಮಗಳನ್ನು ಹೇಳಲಾಗಿದೆ. ಎರಡನೆಯ ಭಾಗದಲ್ಲಿ;

೧ ತಿಂಗಳ ಕೂಸಂ ಶಕುನಿಯೆಂಬ ದೇವತೆ ಪಿಡಿಗುಂ।

೨ ತಿಂಗಳು ಕೂಸಿಗೆ ಮಾತಿನಿಯೆಂಬ ದೇವತೆ ಪಿಡುಗುಂ

೩ ತಿಂಗಳು ಕೂಸಿಗೆ ಪುಂಡಾರಮಿಯೆಂಬ ದೇವತೆ ಪಿಡುಗುಂ

೪ ತಿಂಗಳು ಕೂಸಿಗೆ ಪಿಂಗಳಾಕ್ಷಿಯೆಂಬ ದೇವತೆ ಪಿಡುಗುಂ

೫ ತಿಂಗಳು ಕೂಸಿಗೆ ಕೂತರ್ನಿಯೆಂಬ ದೇವತೆ ಪಿಡುಗುಂ

೬ ತಿಂಗಳು ಕೂಸಿಗೆ ಪಂಚಕಜೆಯೆಂಬ ದೇವತೆ ಪಿಡುಗುಂ

೭ ತಿಂಗಳು ಕೂಸಿಗೆ ಶ್ರೀಮುಖಿಯೆಂಬ ದೇವತೆ ಪಿಡುಗುಂ

೮ ತಿಂಗಳು ಕೂಸಿಗೆ ಕುಂಬಿನಿಯೆಂಬ ದೇವತೆ ಪಿಡುಗುಂ

೯ ತಿಂಗಳು ಕೂಸಿಗೆ ಭಕರ್ಣಿಯೆಂಬ ದೇವತೆ ಪಿಡುಗುಂ

೧೦ ತಿಂಗಳು ಕೂಸಿಗೆ ಕಾಳರಾಕ್ಷಸಿಯೆಂಬ ದೇವತೆ ಪಿಡುಗುಂ

"ಪಿಡಿದೊಡಾ ಕೂಸಿಗೆ। ನಿಶ್ಚಿಷ್ಟಿಯಕ್ಕುಂ । ಮೂರ್ಚೆಯಕ್ಕುಂ ।ಮತ್ತೆನಿರ್ಜ್ಜಿವಮಕ್ಕುಂ। ಬಡವಕ್ಕುಂ। ಲೋಲೆಕ್ಷನೊಮಕ್ಕುಂ।ಜ್ವರ ಪಿಡಿದಕ್ಕುಂ। ಮೃಕರಿದಕ್ಕುಂ। ಸ್ವಾಸಮಕ್ಕುಂ। ಆಹೋರಕೊಳ್ಳದುಂ। ಬಾಯಾರುಗುಂ। ದೆಶೆಗಳು ನೊಡುದುಂ। ಕಂಣತೆರೆಯದುಂ। ಅದು ಬದುಕುವದು ದೈವಾದೀನಯೆಂದು। ಬಲಿಯ ಕೊಡುವದ ಬಿಡಬಾರದು।ಅದಕ್ಕೆ ವಿಷಮ ಬಲಿಯಂಪೆಳ್ವಂ। ಹೋಗರದಲ್ಲಿ ಪಂಚವರ್ನದ ಮುಂದೆಗಳ ಮಾಡುವದು। ಹೋಳಿಗೆ। ಹೂರಣಗಡುಬು। ಸೂಸಲುಂಡಲಿಗೆ। ಪಿಂಣ್ಯಾಕ। ಮದು। ಗುಗ। ಇಕ್ಷುಗಸ ಪಂಚಖಜ್ಜಾಯ। ಪಾಲು। ಮೊಸರು। ಅಲಸಂದೆಯ ಗುಗ್ಗರಿ। ಹದ್ದಿನತಾಯೆ । ಮಂಡಗೆ। ಕೆಂಪಿನಗದಾಕ್ಷರೆ । ಪುಷ್ಪದೀಪ ಅರಿಗೆರನಶಾನ್ಯದಿಕ್ಕಿನಲ್ಲಿ ಬಲಿ ಕೊಡುವುದು। ಪಂಚಪಲ್ಲವದನಿರಮಿಸೂದ। ಮನೆಕಲೆ। ಡಳಿಸಿಪ್ಪೆ ಇಲ್ಲವೋ।..................ಕೈಕಾಲುಗುರು। ತಲೆನವಿರು। ತಗರಕೊಡು। ಇವಂದೂಪವನಿಕ್ಕುವದು। ಬಳಿಕ। ಲೋದ್ರ ಬಜೆ। ಲವಂಗ। ಆನೆಯದಂತ। ತೊರೆಹುಲಿಗಿಲು। ತಿಗುಡು। ಇವಂ ಸಮಾನಂಗೊಂಡು ಆಡಿನ ಮೂತ್ರದಲ್ಲರದು। ಕೂಸಿನ ಮೈಯ್ಯಪೂಸೂದುಂ। ಮಂತ್ರ। ಜನಮೊಕಾಳರಾಕ್ಷಸಿವಹಿ=ಬಲಿಂಗ್ರಷ್ಣ=ಬಾಲಕಂ ಮುಂಚ=ಸ್ವಾಹಾ॥ ೧೧ ತಿಂಗಳ ಕೂಸಿನ ಗ್ರಾಹದ ವಿದಾನ ಸಮಾಪ್ತ॥ಶ್ರೀ ಶ್ರೀ ಶ್ರೀ"[೩]

ಕವಿ ಜೈನನಾದ ಕಾರಣ ಬಲಿ ಎಂದರೆ ಪ್ರಾಣಿಬಲಿ ಎಂದು ತಿಳಿಯಬಹುದು. ಆದರೆ ಇಲ್ಲಿ ಶಾಸ್ತ್ರಕಾರ ಜೈನಧರ್ಮದ ತತ್ವವಾದ ಅಹಿಂಸಾತತ್ವದ ನೆಲೆಯಲ್ಲಿ ಬಲಿ ಕೊಡುವ ವಿಧಾನವನ್ನು ಅನುಸರಿಸಿರುವನು. ಸತ್ತ ಪ್ರಾಣಿಗಳ ಅವಯವಗಳು ಮತ್ತು ಆಹಾರ ಪದಾರ್ಥಗಳಿಂದಲೇ ಬಲಿ ಕೊಡುವ ಶಾಸ್ತ್ರವನ್ನು ಹೇಳಿರುವನು. ಈ ರೀತಿ ಪ್ರತಿ ತಿಂಗಳ ಮಕ್ಕಳಿಗೆ ಆಯಾ ಪಿಡುಗು ತಗುಲಿದಾಗ ಮಕ್ಕಳಲ್ಲಿ ಕಂಡುಬರುವ ಲಕ್ಷಣಗಳನ್ನು ಮತ್ತು ಯಂತ್ರ ಮಂತ್ರ, ಧೂಪ ಬಲಿವಿಧಾನದ ಮೂಲಕ ಚಿಕಿತ್ಸೋಪಾಯಗಳನ್ನು ಹೇಳಲಾಗಿದೆ. ನಂತರ;

೧ ಒಂದು ವರ್ಷದ ಕೂಸಂ ನಂದಿನಿಯೆಂಬ ದೇವತೆ ಪಿಡುಗುಂ

೨ ವರ್ಷದ ಕೂಸಂ ರೋದಿನಿಯೆಂಬ ದೇವತೆ ಪಿಡುಗುಂ

೩ ವರ್ಷದ ಕೂಸಂ ವನದೇವತೆಯೆಂಬ ದೇವತೆ ಪಿಡುಗುಂ

೪ ವರ್ಷದ ಕೂಸಂ ಶಂಕಿನಿಯೆಂಬ ದೇವತೆ ಪಿಡುಗುಂ

೫ ವರ್ಷದ ಕೂಸಂ ನಿಚ್ಚಣಿಯೆಂಬ ದೇವತೆ ಪಿಡುಗುಂ

೬ ವರ್ಷದ ಕೂಸಂ ಕಾಮಿನಿಯೆಂಬ ದೇವತೆ ಪಿಡುಗುಂ

೭ ವರ್ಷದ ಕೂಸಂ ಮೆಡೆನಿಯೆಂಬ ದೇವತೆ ಪಿಡುಗುಂ

೮ ವರ್ಷದ ಕೂಸಂ ಮೇಲಿನಿಯೆಂಬ ದೇವತೆ ಪಿಡುಗುಂ

೯ ವರ್ಷದ ಕೂಸಂ ಹಸಿನಿಯೆಂಬ ದೇವತೆ ಪಿಡುಗುಂ

೧೦ ವರ್ಷದ ಕೂಸಂ ಯನದೆಯೆಂಬ ದೇವತೆ ಪಿಡುಗುಂ

೧೧ ವರ್ಷದ ಕೂಸಂ ಬವದೂತೆಯೆಂಬ ದೇವತೆ ಪಿಡುಗುಂ

೧೨ ವರ್ಷದ ಕೂಸಂ ಮಾಯಾವಿಯೆಂಬ ದೇವತೆ ಪಿಡುಗುಂ

೧೩ ವರ್ಷದ ಕೂಸಂ ಯಕ್ಷಣಪಸಹಿತೆಯೆಂಬ ದೇವತೆ ಪಿಡುಗುಂ

೧೪ ವರ್ಷದ ಕೂಸಂ ಸೌಂದರಿಯೆಂಬ ದೇವತೆ ಪಿಡುಗುಂ

೧೫ ವರ್ಷದ ಕೂಸಂ ವನರಾಣಿರಾಜನೆಂಬ ದೇವತೆ ಪಿಡುಗುಂ

೧೬ ವರ್ಷದ ಕೂಸಂ ಮಾದವಿನಿಯೆಂಬ ದೇವತೆ ಪಿಡುಗುಂ

"ಪಿಡಿದದೊಡಾ ಕೂಸು ಹಾಡೊದುಂ। ಬೈದನದುಂ। ನಿತೆಡಿಸೂದುಂ। ಜ್ವರಪಿಡಿದಕ್ಕುಂ ಅಡಿಗಡಿಗೆ ಮೂತ್ರಬಿಡುಗುಂ। ಆಕಳಿಸುಗುಂ। ನೆಲನಕೆರಡದುಂ। ಆಹಾರಪಿರಿದಾಗಿಕೊಂಬುದುಂ। ನಿರಂಕೊಂಬುದು। ಹೊದ್ದೆಹರಿಹದು। ಮೂರ್ಚೆಯಕ್ಕುಂ। ಅದಕ್ಕೆ ಬಲಿವೊಗರ। ಮದ್ದಿನ ಹುಗ್ಗೆ। ಪಾಯಸ। ಹಚ್ಚಂಬಲಿ। ಸೂಸಲು ಗದುಬುಂ। ಓಗುರ। ಪಂಚ ಪಕ್ಷ। ಪಾಯಸ। ಇವಂ ನೂತನ ಹಂಬಿನಲ್ಲಿ ಇಡಿಸಿ। ಜಲಗಂದಾಕ್ಷತೆ ಕೆಂಪಿನಪುಷ್ಪ। ಕಂಮ್ಮನಪ್ಪಮಷ್ಪು। ದಿಪಧೂಪ ಫಲವಸ್ತ್ರ ಕಾಣಿಕೆ। ಹಾಲುಬೆಲ್ಲ। ತುಪ್ಪ। ಅಲಸಂದಿಗುಗ್ಗಿರಿ। ಇಷ್ಟುರಸ। ಜೇನುತುಪ್ಪ। ಇರಿಸಿ ಆ ಗ್ರಹಪಿಡಿದವನ ಮೂಡ ಮುಖವಾಗಿ ಕುಳ್ಳಿರಿಸಿ। ಮೂರು ಸೂಳುನಿವಾಳಿಸಿ। ಮೂಡಲೊದಿಕ್ಕಿನಲ್ಲಿರಿಸುವದು। ೩ದಿನ ಮಂತ್ರ ಸಹಿತಂ। ಜನಮೊಮಾದನಿವಹಿ=ಬಲಿಂಗ್ರಹ=ಬಾಲಕಂ ಮುಂಚ=ಸ್ವಾಹಾ॥ ಬಳಿಕ ಪಂಚ ಪಲ್ಲವದನಿರಿಂ ಉಯ್ಯಲು। ಧೂಪ ಹಾವಿನಪೊರೆ ಹಸುವಿನ ಮೂತ್ರ। ಇವಿಷ್ಟು ಪೂಸಿ ಗುಗ್ಗಲ ಕಂಬಳಿಯ ಕೂದಲು। ಆನೆಯದಂತ। ತಗರಕೊಡು।ಸಾರಂಗದ ಕೊಡು। ಕೈಕಾಲುಗುರು। ಇವಂ ಧೂಪವನಿಕ್ಕುದು। ಬಸ್ತಿ ಬ್ರಹ್ಮಂಗೆ। ಜಕ್ಕಳೆವದ್ಮಾವತ್ತ್ಯಮ್ದ ನವರಿಗೆಮುಂ ಪೇಳ್ದಕ್ರಮದಿಂ। ನೈವೇದ್ಯಮಂ ಕೊಡುವದು ಆ ದೇವತೆಯಂ ಪಿಂಗಿಹೊಕ್ಕುಂ॥ ವತತ್ಸತ್ಯಂ ಜೈನಮತ ಬಾಲಗ್ರಹ ಸಮಾಪ್ತಃ॥ ಮಂಗಳಮಹಾ ಶ್ರೀಶ್ರೀಶ್ರೀ"[೩೩] ಎಂದು ಮುಗಿಯುತ್ತದೆ. ಇದೇ ರೀತಿ ಎಲ್ಲಾ ವ್ಯಾದಿಗಳ ಲಕ್ಷಣ ಚಿಕಿತ್ಸಾ ಕ್ರಮಗಳನ್ನು ಹೇಳಲಾಗಿದೆ. ದೇಶಿವೈದ್ಯ ಪದ್ಧತಿಯಲ್ಲಿ ಗಿಡಮೂಲಿಕೆಗಳು, ರಸಚೂರ್ಣ ಇತ್ಯಾದಿ ಚಿಕಿತ್ಸೆ ಒಂದು ಬಗೆಯಾದರೆ, ಯಂತ್ರ, ಮಂತ್ರ, ಬಲಿ, ಧೂಪಗಳ ಚಿಕಿತ್ಸೆ ಮತ್ತೊಂದು ಬಗೆಯದು. ಇಂಥ ಯಂತ್ರ ಮಂತ್ರಗಳ ಸಹಾಯದಿಂದ ರೋಗ ಪರಿಹಾರವಾದ ಸಂದರ್ಭಗಳು ಇಲ್ಲದಿಲ್ಲ. ಪ್ರಾಚೀನರಿಗೆ ಈ ಬಗೆಯ ಚಿಕಿತ್ಸೆಯಲ್ಲಿ ಅಪಾರ ವಿಶ್ವಾಸ. ಅಂತೆಯೇ ಈ ಗ್ರಂಥದಲ್ಲಿ ಅದೇ ಹಿನ್ನೆಲೆಯಲ್ಲಿ ಔಷಧೋಪಚಾರಗಳನ್ನು ಹೇಳಲಾಗಿದೆ.

### ೨.೨.೨.೪. ವೈದ್ಯಾಮೃತ

ಈ ಕೃತಿಯ ಕರ್ತೃ ಶ್ರೀಧರದೇವ. ಈತನ ಕಾಲ ಕ್ರಿ.ಶ.ಸು.೧೫೦೦ ಇರಬಹುದೆಂದು ಕವಿಚರಿತೆಕಾರರು ಹೇಳಿರುವರು. ಈತನು ಕಾಲದ ಬಗ್ಗೆ ಗ್ರಂಥದಲ್ಲಿ ಎಲ್ಲಿಯೂ ಹೇಳಿಕೊಂಡಿರುವುದಿಲ್ಲ. ಈ ಗ್ರಂಥ ಚಂಪೂ ಪ್ರಕಾರದಲ್ಲಿ ರಚನೆಯಾಗಿದೆ. ಆದರೆ ಗದ್ಯಭಾಗವೇ ಹೆಚ್ಚಿದ್ದು ಅಲ್ಲಲ್ಲಿ ಒಂದೊಂದು ಕಂದ ಪದ್ಯ ಇದೆ. ಗ್ರಂಥಾದಿಯಲ್ಲಿ ಕವಿ ಪ್ರಾರಂಭಿಸಿದ್ದು ಹೀಗೆ:

ಶ್ರೀಧರದೇವಂ ಕರುಣದಿ
ನೀದರೆಯೊಳ್ ಮಾನಿಸಗಳ ಸುಖಮಪ್ಪಿನೆಗಂ
ವ್ಯಾಧಿಹರಮಪ್ಪ ತೆಜನಂ
ಸಾಧಿಸಿ ಪೇಳ್ದಪನಿದೊಂದು ವೈದ್ಯಾಮೃತಮಂ॥"[೩೪]

ಈ ಗ್ರಂಥದ ಕೆಲ ಪ್ರಕಟಣಾಂತ್ಯದಲ್ಲಿ ಇದು ಜಗದೇಕ ಮಹಾಮಂತ್ರವಾದಿ ಶ್ರೀಧರದೇವ ವಿರಚಿತಂ ಮುನಿಚಂದ್ರದೇವ ಕಾರಣ ಸಕಲವೈದ್ಯಶಾಸ್ತ್ರ ಸಹಸರ್ವಜ ಮನೋಹರಮಪ್ಪ ವೈದ್ಯಾಮೃತದೊಳ್ ಎಂದು ಮತ್ತು ತನ್ನನ್ನು 'ಜಗದೇಕ ಮಹಾಮಂತ್ರವಾದಿ' ಎಂದು ಪ್ರಶಂಸಿಸಿಕೊಂಡಿರುವುದರಿಂದ ಈತನೊಬ್ಬ ಜನಪ್ರಿಯ ವೈದ್ಯನಾಗಿದ್ದ ಜೈನಕವಿ ಎಂದು ತಿಳಿಯುತ್ತದೆ. ಹಾಗೂ 'ಶ್ರೀಧರದೇವ ವಿರಚಿತಮಪ್ಪ ವೈದ್ಯಾಮೃತ ಸಕಲ ಜಗಜ್ಜನ ಹಿತಾರ್ಥಕಾರಣ' ಎಂದು ಶಾಸ್ತ್ರಕಾರ ಹೇಳಿಕೊಂಡಿರುವುದರಿಂದ ಆತನ ಲೋಕೋಪಕಾರದ ಭಾವನೆ ಮೆಚ್ಚುವಂತಹದ್ದು.

ಈ ಕೃತಿಯು ಒಟ್ಟು ೨೪ ಅಧಿಕಾರಗಳನ್ನು ಒಳಗೊಂಡಿದ್ದು ಮೊದಲು ಬಾಲಕರಿಗೆ ೧ ತಿಂಗಳಿಂದ ಹದಿನಾರು ವರ್ಷದವರೆಗೆ ತಗಲುವ ವ್ಯಾದಿ ಲಕ್ಷಣ ಮತ್ತು ಚಿಕಿತ್ಸೋಪಚಾರಗಳನ್ನು ಹೇಳಲಾಗಿದೆ. ಮುಂದೆ ದಾನ್ಯೌಷಧಿರಸಂಗಳ ವೈದ್ಯ ಮಾಡುವುದು ಎಂದು ಪ್ರಾರಂಭವಾಗಿ ಪುಷ್ಟಿ ವೀರ್ಯವರ್ಧನ ಪ್ರಕರಣದಲ್ಲಿ ಲಿಂಗವ್ರಣ, ಉದಾವರ್ತ ಅಪಸ್ಮಾರ, ಬೆಂದಹುಣ್ಣು, ಜ್ವರ, ವಿಷಗರ್ಭೋತ್ಪತ್ತಿ, ಸುಖಪ್ರಸವ, ಸತ್ತಕೂಸು ಬೀಳುವುದಕ್ಕೆ ಚಿಕಿತ್ಸಾ ಉಪಾಯಗಳನ್ನು ಔಷದೋಪಚಾರವನ್ನು ಹೇಳಿದೆ. ಆ ಬಳಿಕ ಮಕ್ಕಳಿಗೆ ಹಲ್ಲು ಬರುವ ಲಕ್ಷಣ, ದಶವಾಯುಗಳ ಲಕ್ಷಣ, ವಾತ ಪಿತ್ತ ಶ್ಲೇಷ್ಮ ಲಕ್ಷಣಗಳನ್ನು ನಿರೂಪಿಸಿ ಇದರ ನಿಯಂತ್ರಣಕ್ಕೆ ಪಥ್ಯವನ್ನು ಸೂಚಿಸಿದೆ. ಆರೋಗ್ಯಕರವಾದ ಜೀವನವನ್ನು ಮುನ್ನಡೆಸುವ ಕುರಿತು ಶ್ರೀಧರದೇವ ಹೇಳಿದ್ದು ಹೀಗಿದೆ;

ಕೃಶದೇಹಿಗೆ ಸ್ನಿಗ್ಧಂ ಮಧುರಮಂ ಪ್ರಯೋಗಿಸುಗೆ ಸ್ಥೂಲಂಗೆ ತಾಂಬೂಲಮಂ ರೂಕ್ಷಗುಣಂಗಳಂ ಖಾರ ಕಹಿವಗರಂ ಪ್ರಯೋಗಿಸುಗೆ ಮಧ್ಯಮಂಗೆ ಅತ್ಯಂತ ಪುಳಿಯಂ ರೂಕ್ಷಂಗಳಂ ಕುಡುಗೆ ಭೋಜನಂಗೈದು ಹರಿಯಲು ಆಯುಷ್ಯಹಾನಿ ಉಣ್ಣದಿಪ್ಪುದು ಬಲಹಾನಿ ಉಂಡು ಮಲಗುವುದು ಮೈದಿಮ್ಮಿತ್ತು ಎಂದರೆ ಜಡತ್ವ ಉಂಡ ಎಡೆಯಲ್ಲಿ ಕಳ್ಳಿರ್ದಡೆ ಡೊಳ್ಳುಪಿರಿದಕ್ಕು ಉಂಡ ಬಳಿಕ ಎದ್ದು ನೂರೆಂಟು ಹೆಜ್ಜೆಯ ನಡುವುದು ಆ ಬಳಿಕ ವೀಳ್ಯಂ ಎಲ್ಲಾಗಳಂ ವಂದೆರಸಂಗಳಂ ಸೇವಿಸುವುದು ಪಿರಿದು ನಗೆಯುಂ ವಿಷದೃಷ್ಟಿ ಉಳ್ಳವರನ್ನಿರಿಸುವುದು ಪೊಲ್ಲದುರ್ಗಂಧಮನೆಯೊಳುಂ ಸಮಭೂಮಿಯಲ್ಲದಿರ್ದೆಡೆಯೊಳುಂ ಕಠಿಣಾಸನನೊಣನಿಪ್ಪೆಡೆ ಸಂಕೀರ್ಣಮಪ್ಪೆಡೆಯೊಳುಂ ಉಣಬಾರದು ಕೀತಂಗಳಂ ಅಧಿಕಕಾಲ ಪಾಕಂಗಳಂ ಹೊರಸ ಕಟ್ಟಿದವಂ ಪಾವು ಮೊದಲಾದವುವರೆ ವಿಷಂಗಳಂ ನೋಡುತ್ತಂ ಕತ್ತಲೆಯೊಳುಂ ಉಣಲಾಗದು ಮೃದುವಪ್ಪ ಆಸನದೊಳು

ಸಮಭೂಮಿಯೊಳುಂ ಪ್ರಕಾಶ ಸ್ಥಾನದೊಳುಂ ವಳ್ಳಿಯಂ ಮಾಡಿ ಸೊಡರ ಪೊತ್ತಿಸಿ ಮೇಲುಕಟ್ಟೆಕಟ್ಟಿದಡೆಯೊಳುಂ ಭೋಜನ ಬಾಜನಂಗಳಂ ನಿರ್ಮಳವಾಗಿ ತೊಳೆದು ಇಗ್ಗೇಣ್ಣುದ್ದದ ಅಡ್ಡಣಿಗೆಯಲ್ಲಿಕ್ಕಿ"[೩೫] ಎಂದು ಹೇಳಿರುವಲ್ಲಿ ನಮ್ಮ ಪ್ರಾಚೀನರು ಶುಚಿತ್ವಕ್ಕೆ ಎಷ್ಟು ಮಹತ್ವ ನೀಡಿದ್ದರೆಂಬುದು ವ್ಯಕ್ತವಾಗುತ್ತದೆ. ಇಂಥ ಕೆಲವು ಸರಳ ಸಂಗತಿಗಳು ಇಂದಿಗೂ ಪ್ರಸ್ತುತವಾಗಿವೆ. ಶ್ರೀಧರದೇವ ಹೇಳಿರುವುದನ್ನೆ ಸರ್ವಜ್ಞ 'ಉಂಡು ನೂರಡಿ ನಡೆ' ಎಂದು ತನ್ನ ತ್ರಿಪದಿಯಲ್ಲಿ ಹೇಳಿರುವನು. ಆರೋಗ್ಯ ರಕ್ಷಣೆಗೆ ಪೂರ್ವಭಾವಿಯಾಗಿಯೋ ಎಚ್ಚರಿಕೆಯನ್ನು ತಿಳಿಸಲಾಗಿದೆ. ಹೀಗೆ ಶ್ರೀಧರದೇವ ರೋಗಗಳಿಗೆ ಔಷಧಗಳನ್ನು ಹೇಳುವಾಗ ಆರೋಗ್ಯಕರ ಜೀವನಕ್ಕೆ ಸಹಾಯಕಾರಿಯಾಗುವಂಥ ಹಲವು ಕ್ರಿಯಾತ್ಮಕವಾದ ಉಪಯುಕ್ತ ಅಂಶಗಳನ್ನು ಸಾಂದರ್ಭಿಕವಾಗಿ ಪ್ರಸ್ತಾಪಿಸಿದ್ದಾನೆ.

ಶ್ರೀಧರದೇವ ಸಮತೋಲನ ಭೋಜನಕ್ರಮ ಹೇಳಿದ ಬಳಿಕ ವಿರುದ್ಧಹಾರ ಕ್ರಮ, ಋತುಗಳಲ್ಲಿ ಪಥ್ಯಕ್ರಮ, ಪಾನಕ ಪ್ರಯೋಗ, ಅಷ್ಟಾಂಗಧೂಪ, ದಶಾಂಗಧೂಪ, ತಣ್ಣೀರುಗುಣ, ಬಿಸಿನೀರುಗುಣ, ಕಾದಾರಿದ ನೀರಿನ ಗುಣ ಮೊದಲಾದ ವಿಷಯಗಳನ್ನು ವಿವರಿಸಿದೆ. ಅನಂತರ ರಸಾಯನ ವಿಧಾನ, ಹುಳಿದೋಷ, ತೈಲದೋಷ, ಸರ್ವದೋಷ, ವಾಂತಿ, ಕ್ಷಯ, ಮನುಷ್ಯರ ಹಲ್ಲಿನ ವಿಷ, ಉಮ್ಮತ್ತದ ವಿಷ, ಬಹುಮೂತ್ರದ ವಿಷ, ಅಂಡವಾತ, ಚಕ್ಷುರೋಗ, ದಂತರೋಗ, ಕರ್ಣಶೂಲೆ, ಶಿರೋರೋಗ, ಕೇಶವರ್ದನ, ಮೂಗಿನಲ್ಲಿ ರಕ್ತ ಸುರಿಯುವಿಕೆ, ಮಲರೋಗ, ಭಗಂದರ, ಭೂತ, ಮಂಡಲದ ಹಾವಿನವಿಷ, ಸರ್ಪ, ಚೇಳು, ಮೂಷಕ ವಿಷ, ಕಳ್ಳಿನ ಸೊಕ್ಕು, ಪಾಂಡುರೋಗ, ಕಾಪಾಲೆ, ಬಿಕ್ಕು, ಕುಷ್ಠ, ಗರ್ಭೋತ್ಪತ್ತಿ, ಮೊಲೆಹಾಲು ಬರುವುದಕ್ಕೆ , ಆಸ್ಯಪಾಕ, ಯೋನಿದೋಷ, ಅತಿಸಾರ ಮೊದಲಾದ ಸಮಸ್ಯೆಗಳಿಗೆ ಔಷಧವಾಗಿ ವಿವಿಧ ಚೂರ್ಣ, ಘೃತ, ತೈಲ, ಅಂಜನ, ಕಷಾಯಗಳನ್ನು ಹೇಳಿರುವನು.

ಗರ್ಭೋತ್ಪತ್ತಿ ಕುರಿತು ಶ್ರೀಧರದೇವ ಹೇಳಿದ ರೀತಿ ಇಂದು ಆಧುನಿಕ ವೈದ್ಯಪದ್ಧತಿ (ಪಾಶ್ಚತ್ಯ)ಯಲ್ಲಿಯು ಸೂಚಿಸುವ ಕ್ರಮವನ್ನು ಅಂದೇ ಹೇಳಿರುವನು. ಸಂತಾನೋತ್ಪತ್ತಿಗಾಗಿಯೇ ಪುರುಷ–ಸ್ತ್ರೀಯರ ಸಂಸಾರ, ಸಂಭೋಗ ಮಾಡುವ ಪದ್ಧತಿಯನ್ನು ಅರ್ಥಪೂರ್ಣವಾಗಿ ಹೇಳಿರುವನು. ಅದು ಇಂತಿದೆ. "ಪುರುಷನು ತಾನು ಶುಚಿಯಾಗಿ। ಮಲಮೂತ್ರಂಗಳಂ ವಿಸರ್ಜಿಸಿ। ಸ್ತ್ರೀಪುರುಷರು ದೇವರರೂಪಿಂ। ಸರಸ್ವರಿಯರೂಪಿಂ। ಸ್ಮರಿಸಿ। ಅಂನ್ಯಸ್ತ್ರೀಗೆ ಹೋಗದೆ। ಕುಲಸ್ತ್ರೀಯಮಿಂದ ಬಳಿಕ। ಸ್ತ್ರೀಬಲದ ಮಗ್ಗುಲಾಗಿ। ಪುರುಷನೆಡದ ಮಗ್ಗುಲಾಗಿ। ಸಂಬೋಗವಂ ಮಾಡಲು। ಗರ್ಭದಾನಮಕ್ಕುಂ॥ ಆ ಬಳಿಕ ಕಲ್ಲುಪ್ಪು। ಕ್ಷಾರತೈಲ। ಯಳ್ಳು ಬೆಲ್ಲ.......ಜಡಲಿಕೆಯಕಾಯಿ। ಕರ್ಪೂರ। ಬದನೆಕಾಯಿ। ಕಗ್ಗುಂಬಳ। ಯಿಂಗು। ಬೆಳ್ಳುಳ್ಳಿ। ಕಿಚ್ಚಕಾಲುದು। ಉಷ್ಣ। ಚೆಂಡಿ ಆನೆಕುದುರೆಯೆರಾಗಿ। ಕಳಂಕುಡಿವುದು । ಆ ಬಳಿಕ ತಿಂಗಳು ತಿಂಗಳಿಗೆ ಗರ್ಭ ಚಿಕಿತ್ಸೆ॥[೩೬].

ಡಾ.ಬಿ.ನಂಜುಂಡಸ್ವಾಮಿ ಅವರು ಗಮನಿಸಿದ ಹಸ್ತಪ್ರತಿಯಲ್ಲಿ " ಅಧಿಕಾರಂಗಳು ೩೨ಕ್ಕಂ ಗ್ರಂಥ ಪ್ರಮಾಣ ೩೫೦೦ ಪಿಂಗಳ ಸಂವತ್ಸರದ ವೈಶಾಖ ಬ ೩೨ರಲ್ಲೂ ಮುಕ್ಕೊಡೆಹಳ್ಳಿ ಚಂದ್ರಪ್ಪಗಳ ಮಗ ಸದುಮರಸನೂ ಹಂನೆರಡು ಬೀಡಿನಯಿಂದ್ರ ಬ್ರಹ್ಮಯ್ಯಗಳ ಮಗ ಆದಪ್ಪಗೆ ವೈದ್ಯಾಮೃತದ ಮೂಲ ಪ್ರತಿ ಸಮಾನವಾಗಿ ಬರೆದುದಕ್ಕಂ ಮಂಗಳ ಮಹಾಶ್ರೀ"[೩೭]. ಎಂದು ಪ್ರತಿ ಮಾಡಿದ ಲಿಪಿಕಾರ ಹೇಳಿಕೊಂಡಿರುವುದರಿಂದ ಇದು ೩೨ ಅಧಿಕಾರಗಳನ್ನು ಹೊಂದಿರಬಹುದು. ಆದರೆ ಸಮಗ್ರ ಹಸ್ತಪ್ರತಿ ದೊರೆತಿರುವುದಿಲ್ಲ. ಒಟ್ಟಿನಲ್ಲಿ ವೈದ್ಯ ವಿಷಯಕ್ಕೆ ಸಂಬಂಧಿಸಿದಂತೆ ಇದೊಂದು ಮಹತ್ವದ ಗ್ರಂಥ ಎಂಬುದರಲ್ಲಿ ಸಂಶಯವಿಲ್ಲ. ಇಂಥ

ಕೃತಿಯನ್ನು ಸಮಗ್ರವಾಗಿ ಸಂಪಾದಿಸಿ ಗದ್ಯಾನುವಾದದ ಮೂಲಕ ಪ್ರಕಟಿಸುವುದು ತುರ್ತು ಆಗಬೇಕಾದ ಕಾರ್ಯ. ಏಕೆಂದರೆ ಈ ಕೃತಿ ಚಂಪೂವಿನಲ್ಲಿ ರಚನೆಯಾದ್ದರಿಂದ ಇಲ್ಲಿನ ಉಪಯುಕ್ತ ವಿಷಯಗಳ ಲಾಭ ಸಾಮಾನ್ಯ ಓದುಗರಿಗೆ ಆಗದೆ ಉಳಿಯುತ್ತದೆ.

### ೨.೨.೨.೫. ವೈದ್ಯ ಚಿಂತಾಮಣಿ

ಈ ಕೃತಿಯನ್ನು ಬರೆದಾತನು ವಲ್ಲಭೇಂದ್ರ, ಕಾಲವೊಂದನ್ನು ಬಿಟ್ಟು ಇತರ ಇತಿವೃತ್ತಿಯನ್ನು ಕವಿಯೆ ಪ್ರತಿ ಅಧ್ಯಾಯಾಂತ್ಯದಲ್ಲಿ ಈ ರೀತಿ ಹೇಳಿಕೊಂಡಿದ್ದಾನೆ.

"ಇತಿ ಶ್ರೀ ಮದಾಹಸ್ತಂಬಕುಲ ಸುಧಾರ್ಣವ ಪೂರ್ಣಸುಧಾಕರ ಶ್ರೀವತ್ಸಗೋತ್ರ ತಿಲಕ ಸಮಸ್ತ ವಿಧ್ಯಾಧುರೀಣ ಶ್ರೀಅರೇಶ್ವರ ಭಟ್ಟಾರಕರಪ್ರಿಯ ತನುಜ ಭೈಷಜವಿದ್ಯಾಪಾರೀಣ ಸಕಲವಿದ್ಯಾ ಕಲಾಪ್ರವೀಣ ಶ್ರೀ ವಲ್ಲಬೇಂದ್ರ ವಿರಚಿತ ವೈದ್ಯಚಿಂತಾಮಣಿ''[೩೮]. ಈತನ ತಂದೆ ಶ್ರೀವತ್ಸಗೋತ್ರದ ಅಮರೇಶ್ವರಭಟ್ಟ 'ಜನಾನಾಂಹಿತಕಾರಣಂ' ಈ ಗ್ರಂಥವನ್ನು ರಚಿಸಿದಂತೆ ತಿಳಿಯುತ್ತದೆ. ಈತನು ವೈಷ್ಣವ ಮತದವನಾಗಿದ್ದು ಸಕಲವಿದ್ಯೆಗಳಲ್ಲಿ ಪ್ರವೀಣನಾಗಿದ್ದಂತೆ ತಿಳಿಯುತ್ತದೆ. ಈ ಗ್ರಂಥ ಶ್ಲೋಕ ಮತ್ತು ಸರಳವಾದ ಕನ್ನಡ ಟೀಕುವಿನಲ್ಲಿ ಬರೆಯಲ್ಪಟ್ಟಿದೆ. ಈ ಕವಿಯ ಕಾಲವನ್ನು ಸುಮಾರು ಹದಿನೈದನೆಯ ಶತಮಾನ ಎಂದು ತಿಳಿಯಲಾಗಿದೆ.

ಈ ಗ್ರಂಥದಲ್ಲಿ ಮೊದಲು ನಾಡೀ ಪರೀಕ್ಷೆಯನ್ನು 'ಎಂಟು ಸ್ಥಾನಂಗಳಂ ನೋಡುವುದು' ಎಂದು ಹೇಳಿ; 'ನಾಡಿಸ್ಪರ್ಶ, ದೇಹಸ್ಪರ್ಶ, ಸ್ವರೂಪಂ, ಶಬ್ದಂ, ಮಾತು, ನೇತ್ರ, ಮಂವರ್ನ, ಮೂತ್ರವರ್ಣ, ನಾಲಿಗೆವರ್ಣ, ಇಷ್ಟರಲ್ಲಿಯೂ ವೈದ್ಯರಾದವರು ನೋಡುವುದು' ಎಂದು ಹೇಳಿದೆ. ಆನಂತರ ಪಿತ್ತಲಕ್ಷಣ, ಶ್ಲೇಷ್ಮಲಕ್ಷಣಗಳನ್ನು ವಿವರವಾಗಿ ವರ್ಣಿಸಿದ ಬಳಿಕ ಔಷಧಗಳನ್ನು ಕಷಾಯ, ಚೂರ್ಣ, ರಸ, ಕಲ್ಕ, ತೈಲಗಳ ಮೂಲಕ ಕೊಡುವ ಕ್ರಮವನ್ನು ಹೇಳಲಾಗಿದೆ. ಅಲ್ಲದೆ ವ್ಯಾದಿಗಳು ತಾಗಲು ಕಾರಣವಾಗುವ ಜಂಗಲದೇಶ, ಅನುಪಮದೇಶ, ಸಾದಾರಣದೇಶ ಎಂದು ಆಯಾ ಪ್ರದೇಶದವರು ತಮ್ಮ ಆರೋಗ್ಯ ರಕ್ಷಣೆಗಾಗಿ ಯಾವ ರೀತಿ ಬದುಕಬೇಕು ಯಾವ ತೆರನಾದ ಆಹಾರ ಸೇವಿಸಬೇಕು ಎಂದು ವಿವರವಾಗಿ ಹೇಳಿದೆ.

ಈ ಗ್ರಂಥದಲ್ಲಿ ಔಷಧಕ್ಕೆ ಲಭ್ಯವಾಗುವ ಪದಾರ್ಥಗಳನ್ನು ಶುದ್ಧಿ ಮಾಡುವ ಕ್ರಮವನ್ನು ಈ ರೀತಿ ಹೇಳಿದೆ, "॥ಹಿಪ್ಪಲಿಶುದ್ಧಿ॥ ಹಿಪ್ಪಲಿಯನ್ನು ಚಿತ್ರಮೂಲ ರಸದಲ್ಲಿ ನೆನೆಯಿಕ್ಕಿ ಬಿಸಿಲಲ್ಲಿ ಒಂದು ಜಾವಯಿರಿಸಲು ಶುದ್ಧಿ॥ ॥ಮೆಣಸುಶುದ್ಧಿ॥ ಮೆಣಸನ್ನು ಹುಳಿಮಜ್ಜಿಗೆಯಲ್ಲಿ ಮೂರು ಘಳಿಗೆ ನೆನೆಯಕ್ಕಿ ಹೆಂಚಿದ ಬಿಸಿಮಾಡಲು ಶುದ್ದಿ॥"[೩೯]

ದೇಶಿ ವೈದ್ಯಪದ್ಧತಿಯಲ್ಲಿ ಔಷಧಶುದ್ಧಿಗಳಲ್ಲದೆ 'ಲೋಹಶುದ್ಧಿ'ಯೂ ವೈದ್ಯದ ಒಂದು ಭಾಗವಾಗಿಯೇ ಬಂದಿದೆ. "॥ಲೋಹಶುದ್ಧಿ॥ ಲೋಹಮಂ ಅರದಲ್ಲಿ ಉಜ್ಜಿ। ಆ ಪುಡಿಯ ಎಣ್ಣೆಯಲ್ಲಿ ಹಾಕಿ ಬೇಯಿಸಿ। ಆ ಮೇಲೆ ನೀರಿನಲ್ಲಿ ತೊಳೆದು ಆ ಬಳಿಕ ಬೊಬಳಿ ಚಕ್ಕೆ ರಸದಲ್ಲಿ ಬೇಯಿಸಿ ಒಂದು ಜಾವ ಬಿಸಿಲಲ್ಲಿ।ಯಿರಿಸಲು ಲೋಹಶುದ್ದಿಯಕ್ಕುಂ॥"[೪೦] ಎಂದಿದೆ. ಮತ್ತು ಪಥ್ಯ ಅಪಥ್ಯಗಳನ್ನು ವಿವರವಾಗಿ ಹೇಳಿದೆ.

### ೨.೨.೨.೬. ವೈದ್ಯಸಾಂಗತ್ಯ

ಸಾಹಿತ್ಯ, ಸಂಗೀತ ಮತ್ತು ವೈದ್ಯಶಾಸ್ತ್ರಗಳಲ್ಲಿ ನಿಪುಣನಾದ ಸಾಳ್ವಕವಿಯಿಂದ ಈ ಕೃತಿ ರಚಿಸಲ್ಪಟ್ಟಿದೆ. ಈತನ ಕಾಲ ಕ್ರಿ.ಶ.ಸು.೧೫೫೦. ಇವನ ತಂದೆಯ ಹೆಸರು ಧರ್ಮಚಂದ್ರ, ಗುರು ಶ್ರುತಕೀರ್ತಿ, ಮತ

ಜೈನಮತ. ಎಂಬುದು ಅವನ ಭಾರತ, ರಸರತ್ನಾಕರ ಕೃತಿಗಳಿಂದ ಲಭ್ಯವಾಗಿದೆ. ವೈದ್ಯಸಾಂಗತ್ಯವು ಲಭ್ಯವಿರುವ ಹಸ್ತಪ್ರತಿಗಳಲ್ಲಿ ಕೇವಲ ೧೬೦ ಪದ್ಯಗಳಿವೆ. ಈ ಕೃತಿಯ ಹೆಸರೇ ಸೂಚಿಸುವಂತೆ ಸಾಂಗತ್ಯ ಪ್ರಕಾರದಲ್ಲಿ ರಚನೆಯಾಗಿದೆ. ಸಾಳ್ವನಿಗೆ ಸಾಜಕವಿ, ಕರ್ಣಾಟಕ ಲಕ್ಷಣದೋಜ, ವರಕವಿ, ಉಭಯ ಕವೀಶ ಎಂಬ ಬಿರುದುಗಳಿವೆ. ಪೂರ್ವಕವಿಗಳಲ್ಲಿ ರುದ್ರಭಟ್ಟ, ನಾಗವರ್ಮ, ಕವಿಕಾಮ ಇವರುಗಳನ್ನು ಸ್ಮರಿಸಿದ್ದಾನೆ. ಆದರೆ ವೈದ್ಯಸಾಂಗತ್ಯ ಅಥವಾ ಸಾಳ್ವಸಾಂಗತ್ಯ ಹಸ್ತಪ್ರತಿಗಳಲ್ಲಿ ಈ ಎಲ್ಲಾ ಮಾಹಿತಿಗಳು ಲಭ್ಯವಿಲ್ಲ.

ಈ ಗ್ರಂಥದೊಳಗೆ ಅಲ್ಲಲ್ಲಿ ಪದ್ಯಗಳು "ವರಕವಿ ಸಾಳ್ವನ ಮತದಿಂದಾ" ಎಂದು ಮುಗಿಯುತ್ತವೆ. ವೈದ್ಯಸಾಂಗತ್ಯದ ಲಭ್ಯವಿದ್ದ ಹಸ್ತಪ್ರತಿಗಳಲ್ಲಿ ನಾಡೀ, ಮೂತ್ರಾದಿ ಅಷ್ಟಸ್ಥಾನ ಪರೀಕ್ಷೆ, ಕೆಲವು ಮುಖ್ಯ ವ್ಯಾಧಿಗಳಿಗೆ ಚಿಕಿತ್ಸೆ, ವಿಷನಾಶಕ ಔಷಧಗಳನ್ನು ತಿಳಿಸುತ್ತವೆ. ಈ ಗ್ರಂಥದ ಸ್ವರೂಪಕ್ಕಾಗಿ ಕೆಲವು ಪದ್ಯಗಳನ್ನು ಉದಾಹರಣೆಗಾಗಿ ಈ ಕೆಳಗಿನಂತೆ ಬರೆಯಲಾಗಿದೆ.

ಮೊದಲು ವಾತಕೆ ವಕ್ರಗತಿ ಮಧ್ಯೆ
ಪಿತ್ತವಾ ಚದುರಿಯಾಡುವ ಕೈಗೆ
ಕಫತುದಿಯೊಳು ಮೆಲ್ಲನೆ ನಡೆವುದೀ
ಮೂರನು ಹುದುಗಿಗಮಿಸೆ ದೋಷತ್ರಯವು

ಪಿರಿದು ಶ್ರೇಷ್ಠವು ಹೆಚ್ಚೆತಾಲಿಶಪತ್ರೆ
ಶಕ್ಕರೆ ಶುಂಠಿ ಹಿಪ್ಪಲಿಯಿಂಧಾಯಿರದೆ
ಕೊಳ್ಳಲು ಕೆಟುಹೊವುದು ಇದು ಸಿದ್ದ
ಸರಸ ಸಾಳ್ವನ ಮತದಿಮದಾ"[೪೧]

ಶಾಸ್ತ್ರ ವಿಷಯವನ್ನು ಹಾಡುಗಬ್ಬದ ಛಂದಸ್ಸಾದ ಸಾಂಗತ್ಯಕ್ಕೆ ಅಳವಡಿಸಿಕೊಂಡಿದ್ದಲ್ಲದೆ ಆನಂದ ಭೈರವಿ ಎಂಬ ರಾಗದ ಹೆಸರಿನ ಔಷಧಿಯಿಂದ 'ಆನಂದ ಭೈರವಿರಸ' ತಯಾರಿಸುವ ವಿಧಾನ ಹೇಳಿರುವನು. ಆದ್ದರಿಂದ ಈತನೊಬ್ಬ ಸಂಗೀತಕಾರ ಇರಬಹುದೆನಿಸುತ್ತದೆ.

### ೨.೨.೨.೭. ಬೇಷಜಕಲ್ಪ

ಈ ಗ್ರಂಥವನ್ನು ಗಂಗಾಧರನೆಂಬ ವೈದ್ಯ ರಚಿಸಿದ್ದಾನೆ. ಈ ಗ್ರಂಥವು ಐದು ಅಧ್ಯಾಯಗಳನ್ನು ಒಳಗೊಂಡಿದ್ದು ಪ್ರತಿ ಅಧ್ಯಾಯಾಂತ್ಯದಲ್ಲಿ "ಇತಿ ಪಶುಪತಿ ಪಾದಾಂಭೋಜ ಮಕರಂದ ಸ್ವಾದ ಮತ್ತಮಧುಕರ ಪ್ರತಿಸಮಯ ಸಮುದ್ಯಾನಂದ ಸದ್ವೈದ್ಯ ವಿದ್ಯಾವಿಶಾರದ ಸರ್ವಹಿತಕಾರಿ ಧುರಂಧರಾ ಮಾನಸ ಗುಣಸಹಜ ಶ್ರೀ ಮದ್ದೇಶಿಕೇಂದ್ರಾತ್ಮಜ ಮನೆಪಯೋಗ ವಿದ್ಯಾಸಂದಾನ ಶ್ರೀ ಚಂನಣಾತ್ಯಸ್ಯ ಶ್ರೀಮದ್ಗಂಗಾಧರೇಣ ವಿರಚಿತಾ ಯಾಂಭೇಷಜ ಕಲ್ಪೇ"[೪೨] ಎಂಬ ವಾಕ್ಯವಿದೆ. ಇದರಿಂದ ಗಂಗಾಧರನ ತಂದೆ ಚೆನ್ನಣಾರ್ಯನೆಂದೂ, ದೇಶಿಕೇಂದ್ರ ಮಠವೆಂದು ಪ್ರಸಿದ್ಧವಾಗಿರುವ ವೀರಶೈವ ಸಂಪ್ರದಾಯಸ್ಥ ವಂಶಕ್ಕೆ ಸೇರಿದವನೆಂದೂ ತಿಳಿಯಬಹುದಾಗಿದೆ. ಈತನ ಕಾಲವನ್ನು ಕ್ರಿ.ಶ.೧೬ನೆಯ ಶತಮಾನದ ಕೊನೆಯೆಂದು ಊಹಿಸಬಹುದು.

ಈ ಗ್ರಂಥವು ಶ್ಲೋಕ ಮತ್ತು ಟೀಕುವಿನಲ್ಲಿ ಬರೆಯಲ್ಪಟ್ಟಿದೆ. ಮೊದಲ ಅಧ್ಯಾಯದಲ್ಲಿ ದೋಷಾದಿಗಳ ಸ್ಥೂಲ ಪರಿಚಯ, ಔಷಧ ಸಂಗ್ರಹ ಕ್ರಮ, ದೇಶವಿವರಣೆ, ದ್ರವ್ಯಗಳ ಗುಣಾವಗುಣಗಳು, ಪ್ರತಿನಿಧಿ ದ್ರವ್ಯ

ನಿರೂಪಣೆಯನ್ನು ವಿವರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ವ್ಯಾದಿಲಕ್ಷಣ, ಪಾನಕಷಾಯ ಕ್ರಮ, ಚತುರ್ದಶಬೇದ, ಸಪ್ತಬೇದ ಕ್ವಾದ ಲಕ್ಷಣ, ಕಠಿಣಾದಿದ್ರವ್ಯಜಲ ನಿಯಮ ಹೇಳಿದೆ. ಮೂರನೆಯ ಅಧ್ಯಾಯದಲ್ಲಿ ಚೂರ್ಣ, ಲೇಹ್ಯ, ಸ್ನೇಹಾದಿ ಔಷಧ, ಅಷ್ಟಗುಣಪಕ್ವ ಕಷಾಯದ ವಿವರ ಇದೆ. ನಾಲ್ಕನೆಯ ಅಧ್ಯಾಯದಲ್ಲಿ ಔಷಧಗಳ ತಯಾರಿಕೆ, ಅರಿಷ್ಟಪಾಕಕ್ರಮ, ಮತ್ತು ಯೋಗಗಳ ಸಂಗ್ರಹವಿದೆ. ಕೊನೆಯ ಅಧ್ಯಾಯದಲ್ಲಿ ಔಷಧ ಶಾಲೆ ನಿರ್ಮಾಣ, ಪೂಜಾ ವಿಧಿಗಳು, ಪರಿಭಾಷೆ, ಸಿದ್ಧಿಸ್ನಾನ, ಔಷಧ ಸೇವನಕ್ರಮ ಇತ್ಯಾದಿ ವಿವರಣೆಯಿದೆ.

ಗ್ರಂಥಾಂತ್ಯದಲ್ಲಿ "ಶ್ರೀಮತ್ ಚಂನಣಾರ್ಯಾತ್ಮಜಂ ಶ್ರೀಮದ್ಗಂಗಾಧರೇಣ ವಿರಚಿತಯೆಂಭೇಷಜ ಕಲ್ಪೆ ಕರ್ನಾಟಕ ವ್ಯಾಖ್ಯಾನಂ ಪ್ರಸ್ಥಾಧಿ ಫಲ ಪ್ರಮಾಣ ಲಕ್ಷಣಂ ಪಂಚಮೊಧ್ಯಾಯಂ ಅಂತು ಅಧ್ಯಾಯ ೫ಕ್ಕೆ ಗ್ರಂಥ ೪೪೫ಕ್ಕಂ ಮಂಗಳ ಮಹಾ ಶ್ರೀಶ್ರೀಶ್ರೀ" ಎಂದು ಮುಕ್ತಾಯವಾಗುತ್ತದೆ. ಈ ಗ್ರಂಥವು ವ್ಯವಸ್ಥಿತವಾಗಿ ಕ್ರಮಬದ್ಧವಾಗಿ. ಪೂರ್ಣವಾಗಿ ಲಭ್ಯವಿರುವುದರಿಂದ ಪ್ರಕಟಣೆಗೆ ಯೋಗ್ಯಗ್ರಂಥವೆಂದು ಹೇಳಬಹುದು.

### ೨.೨.೨.೮. ಆರೋಗ್ಯಾಮೃತವೆಂಬ ಕರ್ಣಾಟ ವೈದ್ಯಸಾರ ಸಂಗ್ರಹ

'....ವಿಜೆಯ ಪ್ರಚಂಡೊರ್ದಂಡ। ತೇಜಶ್ರೀಕಲಾಕಾರ ಬಿರಿದೆಂತೆಂಬರಗಂಡ। ಶ್ರೀ ಚಿಕದೇವರಾಯ ಕರುಣಾವಲೋಕನ ಮುದಿತ ಚಿಕುಪಾಧ್ಯಾಯ ವಿರಚಿತಮಪ್ಪ ಆರೋಗ್ಯಾಮೃರತವೆಂಬ ಕರ್ಣಾಟಕ ವೈದ್ಯಸಾರ ಸಂಗ್ರಹದೊಳ್' ಎಂದಿರುವುದರಿಂದ ಚಿಕ್ಕದೇವರಾಜನ ಆಸ್ಥಾನ ಕವಿ ಚಿಕುಪಾಧ್ಯಾಯನಿಂದ ಈ ಕೃತಿ ರಚಿತವಾಗಿದೆ. ಮೈಸೂರು ರಾಜಮನೆತವನ್ನು ಆಳ್ವಿಕೆ ಮಾಡಿದ ಚಿಕ್ಕದೇವರಾಜನ ಕಾಲ ಕ್ರಿ.ಶ.೧೬೭೩ ರಿಂದ ೧೭೦೪. ಈತನು ಮೈಸೂರು ರಾಜವಂಶಕ್ಕೆ ತಿಲಕಪ್ರಾಯನಾಗಿದ್ದ ಧೀರೋದಾತ್ತ ವ್ಯಕ್ತಿ. ಈತ ಆಸ್ಥಾನ ಮಂತ್ರಿ ಚಿಕುಪಾಧ್ಯಾಯನ ಕಾಲವನ್ನು ಕ್ರಿ.ಶ.ಸು.೧೬೭೨ ಎಂದು ನಿರ್ಣಯಿಸಬಹುದು.

ಈ ಕೃತಿಯು ಆದಿಯಲ್ಲಿ "ಶ್ರೀ ಸದಾಶಿವಾಯನಮಃ। ಶುಭಮಸ್ತು। ನಿರ್ವಿಘ್ನಮಸ್ತು। ಶ್ರೀ ಸಾಸಲಸೋಮೇಶ್ವರ ಸ್ವಾಮಿಯ ಪಾದವೇಗತಿ। ಆರೋಗ್ಯಮಸ್ತು। ಆರೋಗ್ಯಾಮೃತವೆಂಬ ಕರ್ನಾಟ ವೈದ್ಯಸಾರಸಂಗ್ರ ಬರೆಯುವುದಕ್ಕೆ ನಿರ್ವಿಘ್ನಮಸ್ತು॥ ಶುಭಮಸ್ತು। ಆಯುರಾರೋಗ್ಯಮಸ್ತು।"[೪೩] ಎಂದು ಪ್ರಾರಂಭವಾಗುತ್ತದೆ. ಈ ಗ್ರಂಥ ಗದ್ಯದಲ್ಲಿ ರಚನೆಯಾಗಿದೆ. ಕನ್ನಡದಲ್ಲಿ ರಚಿಸಿಲ್ಪಟ್ಟ ಅತ್ಯಂತ ಸರಳ ಗ್ರಂಥ ಇದೇ ಎಂದು ಹೇಳಬಹುದು. ಕವಿ ವೀರಶೈವನಾಗಿದ್ದರಿಂದ ಸಾಸಲಸೋಮೇಶ್ವರ, ಶ್ರೀಗುರುಬಸವಲಿಂಗಾಯನಮಃ ಎಂದು ಅಧ್ಯಾಯಾಂತ್ಯದಲ್ಲಿ ಸ್ತುತಿಸಿರುವನು. ಚಿಕುಪಾಧ್ಯಾಯ ವೀರರಾಜೇಂದ್ರನ ಸಕಲವೈದ್ಯ ಸಂಹಿತಾಸಾರಾರ್ಣವ ಕೃತಿಯಿಂದ ಕೆಲ ವಿಷಯವನ್ನು ಸಂಗ್ರಹಿಸಿರುವುದಾಗಿ ಈ ಕೆಳಗಿನಂತೆ ವಿನಂತಿಸಿದ್ದಾನೆ.

ಓಂ ಶ್ರೀ ಗಣಾಧಿ ಪತಿಯೆನಮಃ॥=॥ ಶ್ರೀಶಾರದಾಗುರುಬ್ಯೋಂ ನಮಃ॥=॥ ಶ್ರಿ ವೀರಭದ್ರೇಶ್ವರಾಯನಮಃ॥=॥ ಶ್ರೀಶಿವಾಯನಮಃ॥=॥ಶ್ರೀಸಾಂಭಸದಾಶಿವಾಯನಮಃ॥=॥ ಶ್ರೀಗುರುಬಸವಲಿಂಗಾಯನಮಃ॥=॥ ಶ್ರೀನಂಜುಂಡಲಿಂಗಾಯನಮಃ॥=॥ ಶ್ರೀ ಓಂ ಮಹಾಜಗದ್ರಕ್ಷಾಯನಮಃ॥=॥ ವೀರರಾಜೋಕ್ತಿವಿಲಾಸಲ್ಲಿ ವೈದ್ಯಸಾರಸಂಹಿತಾರ್ಣವ ಗ್ರಂಥ ಟೀಕಿನಲ್ಲಿ ಸಂಗ್ರಹ ಬರೆಯುವುದಕ್ಕೆ ನಿರ್ವಿಘ್ನ ಮಸ್ತು॥ ಶುಭಮಸ್ತು॥"[೪೪] ಎಂದಿದೆ. ಹಾಗೆಯೇ ಈ ಕೃತಿಯಲ್ಲಿ 'ಬಾಲಗ್ರಹ ತಂತ್ರ' ಎಂಬ ಭಾಗವು ದೇವೇಂದ್ರಮುನಿಯ ಬಾಲಗ್ರಹ ಚಿಕಿತ್ಸೆ ಗ್ರಂಥದ ಸಂಗ್ರಹವೆಂಬಂತೆ ಕಂಡುಬರುತ್ತದೆ. ದೇವೆಂದ್ರಮುನಿಯ 'ಬಾಲಗ್ರಹಚಿಕಿತ್ಸೆ' ಯಲ್ಲಿ ಹೇಳಿದಂತೆ ಮಗು ಹುಟ್ಟಿದ ದಿವಸದಿಂದ ಹತ್ತು ದಿವಸ, ಹನ್ನೆರಡು ಮಾಸ, ಹದಿನಾರು ವರುಷದವರೆಗೆ ಮಕ್ಕಳಿಗೆ

ತಗಲುವ ವ್ಯಾದಿಗಳು ವಿವಿಧ ದೇವತೆಗಳಾ ಹೆಸರುಗಳಿಂದ ಗುರುತಿಸಲಾಗಿದೆ. ಹಾಗೂ ಆಯಾ ವ್ಯಾದಿಗಳು ತಗುಲಿದಾಗ ಮಕ್ಕಳ ಲಕ್ಷಣ ಹೇಳಿ ಚಿಕಿಕತ್ಸೋಪಾಯಗಳನ್ನು ಹೇಳಲಾಗಿದೆ. ಆದರೆ ದೇವೇಂದ್ರಮುನಿ ಹೇಳದೇ ಇರುವ ಹದಿನೇಳನೆಯ ವರುಷದವರಿಗೆ ತಗಲುವ ಬಾಲಕಿಯೆಂಬ ದೇವತೆ ಪಿಡಿಗುಂ ಎಂದು ಹೆಚ್ಚಿನ ವಿಷಯವನ್ನು ಹೇಳಿರುವನು.

ಮೊದಲು ಜ್ವರೋತ್ಪತ್ತಿಯನ್ನು ಹೇಳಿ, ಅದರಲ್ಲಿ ವಾತಜ್ವರ। ಪಿತ್ತಜ್ವರ। ಶ್ಲೇಷ್ಮಜ್ವರ। ಶ್ಲೇಷ್ಮವಾತ ಜ್ವರ। ಸನ್ನಿಪಾತಜ್ವರ। ಅಗಂತುಕ ಜ್ವರವೆಂದು । ಎಂಟು ತೆರನಾದ ಜ್ವರಗಳನ್ನು ಹೇಳಿ ಅವುಗಳ ಲಕ್ಷಣ ಸರೂಪ ಮತ್ತು ಔಷಧಗಳನ್ನು ಕೊಡುವಾಗ ವೈದ್ಯನು "ಓಂಹ್ರಿಂಸಃ ಅಮೃತಂ ಕುರುಕುರು ಬೈರವಾಯನಮಃ" ಎಂಬ ಮಂತ್ರವನ್ನು ಏಳುಬಾರಿ ಮಂತ್ರಿಸಿ ಕೊಡಲು ಔಷಧಗಳನ್ನು ಸೇವಿಸುವವನಿಗೆ ದೇವತೆಗಳು ಆಯುರಾರೋಗ್ಯಗಳನ್ನು ಕೊಡುವರು ಎಂದು ದೈವಾರಾಧನೆಯ ಹಿನ್ನೆಲೆಯಲ್ಲಿ ಹೇಳಲಾಗಿದೆ. ಉದಾಹರಣೆಗೆ; "ಜ್ವರಕ್ಕೆ ಪಾರ್ವತಿಶಿವಪೂಜೆ॥ ಶ್ರೀ॥ಆವವನು ತಂನ ಗುರುವ ದ್ವೇಷಿಸುತಯಿದ್ದಾನು । ಆವವನು ಪರರಿಗೆ ಯದೆನೋವು ಮೊದಲಾದ ರೋಗವ್ಯಾದಿಯವುಂಟು ಮಾಡುತ್ತಯಿದ್ದನು। ಆತಂಗೆ ಜ್ವರ ಮೊದಲಾದ ರೋಗಗಳು ಸಂಭವಿಸುವವು। ಆ ವಿಷೆಯವಾಗಿ। ಶಿವಲಿಂಗದಲ್ಲಿ। ಪಾರ್ವತಿದೇವಿಯರಿಗೆ। ನಿರುಸ್ತರು ಉಷ್ಣಜ್ವರ ಬರಲು। ಪಾರ್ವತಿಯೊಡನೆ। ಕೂಡಿದ ಪರಮೇಶ್ವರನಿಗೆ। ಶ್ರೀಗಂಧ। ಕಂಸ್ಯದಲ ಪುಷ್ಪ। ಪರಿಮಳವುಳ್ಳ ಶೀತವಾದ ನೀರಿನಿಂದ। ಅಭಿಷೆಕವ ಮಾಡಿಸಿ। ಗಂಧ। ಪುಷ್ಪ। ಅಕ್ಷತೆ। ಧೂಪ। ದೀಪ ನೈವೇದ್ಯ। ತಾಂಬೂಲ। ಮುಂತಾದ ಕಾಣಿಕೆಗಳಿಂದ ಮತ್ತೆ ಮತ್ತೆ ಪೂಜೆಯಂ ಮಾಡಿ। ನಂನ್ನ ರಕ್ಷಿಸು ರಕ್ಷಿಸು ಎಂದು। ಕೃಪಾನಿದಿಯಾದ। ಪರಮೇಶ್ವರನ। ಬೇಡಿಕೊಂಡು ತೈಪೆದ್ಭಸ್ಮಯೆಂಬ। ಮಂತ್ರಜಪ ಮಾಡಲು। ಆತನಿಗೆ ಬಂದ ಜ್ವರದಿಂದ ಹುಟ್ಟಿದ ವ್ಯಾದಿಗಳೆಲ್ಲ ಪರಮೇಶ್ವರನ ಪ್ರಸಾದದಿಂದ ಪರಿಹಾರವುಂಟು॥ ಶ್ರೀ॥"[೪೫]

ಪ್ರಾಚೀನರು ದೇವರು ದೈವ; ಗುರು ಹಿರಿಯರು, ಭಕ್ತಿ ಭಯ ಎಂಬ ನೈತಿಕ ಮೌಲ್ಯಗಳ ಹಿನ್ನೆಲೆಯಲ್ಲಿ ಜೀವನ ಸಾಗಿಸುತ್ತಿದ್ದರು. ಮತ್ತು ಪಾಲಿಸುತ್ತಿದ್ದರು. ಕೆಲ ಸಂದರ್ಭದಲ್ಲಿ ತಪ್ಪು ಮಾಡಿದವರು ಭಯಗೊಂಡು ಜ್ವರಕ್ಕೆ ಒಳಗಾದಾಗ ಉತ್ತಮ ಮಾರ್ಗದಲ್ಲಿ ನಡೆದರೆ ಜ್ವರ ಪರಿಹಾರ ಎಂಬ ನಂಬಿಕೆ ಬಹುಮುಖ್ಯವಾಗಿತ್ತು. ನಂತರ ಜ್ವರ ನಿದಾನ ಸನ್ನಿಪಾದ ನಿದಾನ, ಕಾಮಾಲೆ ನಕ್ಷತ್ರದೋಷ ಇತ್ಯಾದಿ ವ್ಯಾದಿಗಳನ್ನು ಪುರುಷ ಸ್ತ್ರೀ, ಮತ್ತು ಮಕ್ಕಳಿಗೆ ತಗಲುವ ನೂರಾರು ರೋಗಗಳ ಲಕ್ಷಣಗಳನ್ನು ವಿವರವಾಗಿ ಹೇಳಿ ಅವುಗಳಿಗೆ ಔಷಧೋಪಚಾರಗಳನ್ನು ಹೇಳಲಾಗಿದೆ. ಈ ಗ್ರಂಥದಲ್ಲಿ ಪೂಜೆ, ನಕ್ಷತ್ರ, ಮಂತ್ರ, ಇತ್ಯಾದಿ ದೇವರ ಆರಾಧನೆಯ ಮೂಲಕವೇ ಆರೋಗ್ಯ ರಕ್ಷಣೆಯ ವಿಧಾನಗಳನ್ನು ಒಳಗೊಂಡಿದೆ.

### ೨.೨.೨.೯. ಅಕಾರಾದಿ ನಿಘಂಟು

ಈ ವೈದ್ಯ ನಿಘಂಟು ಲಕ್ಷ್ಮಣ ಪಂಡಿತನೆಂಬ ಜೈನ ವೈದ್ಯನೊಬ್ಬನಿಂದ ರಚಿತವಾಗಿದೆ. ಈತನ ವಿವರವಾದ ಜೀವನ ಪರಿಚಯವು ತಿಳಿದು ಬಂದಿರುವುದಿಲ್ಲ. ಇವನ ಕಾಲ ಕ್ರಿ.ಶ.ಸುಮರು ೧೭೭೫ ಎಂದು ಊಹಿಸಲಾಗಿದೆ. ಈ ನಿಘಂಟು 'ಪ್ರತಿಪದ'ದಲ್ಲಿ ರಚನೆಯಾಗಿದೆ. ಇದರಲ್ಲಿ ಹೆಚ್ಚು ಔಷಧಿವಾಚಕ ಶಬ್ದಗಳು ಇವೆ. ಈ ನಿಘಂಟು ಗ್ರಂಥ ಶ್ರೀ ಎಂದು ಪ್ರಾರಂಭಿಸಿ ಅಕಾರಾದಿಯಲ್ಲಿ ರಚನೆಯಾಗಿದೆ. ಇದರ ಆದಿಯಿಂದ ಕೆಲ ಶಬ್ದಗಳನ್ನು ಈ ಕೆಳಗಿನಂತೆ ನೋಡಬಹುದು.

| | | |
|---|---|---|
| ಶ್ರೀಅಂಗಾರಮಲ್ಲೀ | – | ಭಾರಂಗಿ |
| ಅಂಗಾರಧೂಮ | – | ಇಲ್ಲಣ |
| ಅಜನಿ | – | ಕಣಗಿಲು |
| ಅರ್ಜಿಕ | – | ಬಿಳಿಕಕ್ಕೊರಣೆ |
| ಅರುಣಾಂಪು | – | ಸುರಸುರಕಿ |
| ಅಂಜನಿಕಾ | – | ಯಕ್ಕೆ"[೬೬] ಇತ್ಯಾದಿ |

ಇದರಲ್ಲಿ ಸಂಸ್ಕೃತ ವೈದ್ಯಕೀಯ ಶಬ್ದಗಳಿಗೆ ಕನ್ನಡದಲ್ಲಿ ಅರ್ಥವನ್ನು ಹಾಗೂ ಅದರ ಪರ್ಯಾಯ ಶಬ್ದಗಳನ್ನು ಕೊಟ್ಟಿದ್ದಾನೆ. ಮೂಲಿಕೆಗಳಿಗೆ ಕರ್ನಾಟಕದಲ್ಲಿ ಪ್ರಚಾರದಲ್ಲಿರುವ ಹೆಸರುಗಳನ್ನು ಸೂಚಿಸಿರುವುದು ಈ ಗ್ರಂಥದ ವೈಶೀಷ್ಟ್ಯ. ಇದರ ಅಂತ್ಯವು 'ಕ್ಷ' ಅಕ್ಷರದವರೆಗೆ ಮುಂದುವರಿದು 'ಕ್ಷುದ್ರಸಹ್ನ–ಏಲಕ್ಕಿ' ಎಂಬ ಶಬ್ದಕ್ಕೆ ಮುಕ್ತಾಯವಾಗುತ್ತದೆ.

### ೨.೨.೨.೧೦. ಅಶ್ವವೈದ್ಯ ಸಚಿತ್ರ

ಕುದುರೆಗಳ ರೋಗಗಳಿಗೆ ಔಷಧೋಪಚಾರಕ್ಕೆ ಸಂಬಂಧಪಟ್ಟ ಈ ಕೃತಿಯ ಕರ್ತೃ ಯಾರೆಂಬುದು ಅಸ್ಪಷ್ಟ. ಇದರಲ್ಲಿ ರೋಗಾದಿ ಕುದುರೆಗಳಿಗೆ ಉಪಶಮನ ಮಾಡುವ ವಿಧಾನವನ್ನು ತಿಳಿಸುತ್ತದೆ. ಈ ಹಸ್ತಪ್ರತಿಯು ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ. ಇದರ ಕ್ರಮಾಂಕ ಕೆ.ಎ.೫೭೧. ಈ ಕೃತಿಯು ಅಸಮಗ್ರತೆಯಿಂದ ಕೂಡಿದ್ದು ಜೀರ್ಣಾವಸ್ಥೆಯಲ್ಲಿದೆ. ಲಿಪಿ ಮೋಡಿಯಲ್ಲಿದೆ. ೧೯ನೇ ಶತಮಾನಕ್ಕೆ ಸೇರಿದ ಈ ಕೃತಿಯ ಆರಂಭದಲ್ಲಿ ಈ ರೀತಿ ಹೇಳಲಾಗಿದೆ;

ಕುದುರೆಗಳೊಸಬ್ಬು। ಚೀಮಾರಿಯಿಂದಾ ಬಾಯಿ ಮುಚ್ಚಿಕೊಂಡು॥
ಹಲ್ಲುಗಳು ಹೊತ್ತುಕೊಂಡು ಅವಷಧಿ ಶೀಷೆಯಲ್ಲಿ ಹಾಕಿ ಕುದುರೆಮೂಗಿ
ನಿಂದಾ ಹೊಟ್ಟೆವಳಗೆ ಹೋಗುವಂತೆ ಕುಡಿಸಬೇಕು॥"[೬೭]

ಕುದುರೆಗೆ ಔಷಧವನ್ನು ಕೊಡುವ ವಿಧಾನವನ್ನು ಈ ಸಾಲುಗಳ ಸ್ಪಷ್ಟಪಡಿಸುತ್ತವೆ. ಅಲ್ಲದೇ ಈ ಕೃತಿಯಲ್ಲಿ ರೋಗದ ಲಕ್ಷಣ ಮತ್ತು ಚಿಕಿತ್ಸಾ ಕ್ರಮವನ್ನು ಕುರಿತು ವಿವರಗಳಿವೆ. ಉದಾಹಯರಣೆಗೆ ಕುದುರೆಗಳಿಗೆ ನಾಡಿ ನೋಡತಕ್ಕ ಪರಿಕ್ಷೆ, ಮೊದಲಲ್ಲಿ ಕಣ್ಣುನೋಡಬೇಕು, ಕಣ್ಣಿನ ನರಗಳು ಕೆಂಪು ವರ್ಣವಾಗಿದ್ದರೆ ಕಾಯಿಲೆಯಾಗಿದೆ, ಬೂದ ವರ್ಣವಾಗಿದ್ದರೆ ಚೌಹರ್‌ಬಾದ್, ನಾಲಿಗೆ ನರಗಳೂ ಬೂದವರ್ಣ, ಗಬ್ಬವಾಸನೆಯಾಗಿದ್ದರೂ ಕಾಯಿಲೆಯಾಗಿದೆ. ಎಂದು ತಿಳಿಯಬೇಕು ಎಂದಿದೆ. ಈ ಹಸ್ತಪ್ರತಿಯಲ್ಲಿ ಪಿತ್ತಜ್ವರ, ಶ್ಲೇಷ್ಮಜ್ವರ, ಸನ್ನಿಪಾತಜ್ವರ, ಶಂಕಜ್ವರ, ಅಷ್ಟಜ್ವರ, ಮನ್ಮಥ ಜ್ವರ, ಸ್ತನ್ಯಾವರ್ತಶೂಲಿ, ಮೂತ್ರಶೂಲಿ, ಸದಾವರ್ತಶೂಲಿ ಇತ್ಯಾದಿ ರೋಗಗಳ ಲಕ್ಷಣ ಮತ್ತು ಔಷಧೋಪಚಾರಗಳನ್ನು ಹೇಳಲಾಗಿದೆ.

ಶಾಸ್ತ್ರ ಕೃತಿಗಳಿಲ್ಲಿ ಊಹೆ ಮತ್ತು ಕಲ್ಪನೆಗಳಿಗೆ ಪ್ರಾಮುಖ್ಯತೆ ಇರುವುದಿಲ್ಲ. ಇಲ್ಲಿ ವಾಸ್ತವ ಅನುಭವ ಮತ್ತು ಅರಿವು ಮುಖ್ಯ. ಆದ್ದರಿಂದ ಅವುಗಳು ಜನಮುಖಿಯಾಗಿರುವುದರಿಂದ ಕಾವ್ಯ ಶೈಲಿಗೆ ಪ್ರಾಧಾನ್ಯ ನೀಡಿದೆ. ಅದರಲ್ಲಿನ ವಸ್ತುವನ್ನು ನೇರವಾಗಿ ತಿಳಿಯುವ ಹಾಗೆ ಹೇಳಿದರೆ ಅಲ್ಲಿಗೆ ಅದರ ಸಾರ್ಥಕತೆ

ಮುಕ್ತಾಯವಾದಂತೆ. ಅದಕ್ಕೆ ಗದ್ಯಮಾರ್ಗ ಉಪಯುಕ್ತ ದಾರಿಯಾಗಿರುವಾಗ 'ಪದ್ಯ' ರೂಪದಲ್ಲಿ ಬರೆಯುವುದರ ಔಚಿತ್ಯವಾದರೂ ಏನು? ಎಂಬ ಪ್ರಶ್ನೆ ಹಾಕಿಕೊಂಡಾಗ ಪದ್ಯರೂಪದಲ್ಲಿ ಬರೆಯಲು ಹೊರಟಾಗ ಕೆಲವೊಮ್ಮೆ ಅಲಂಕಾರ ಕಲ್ಪನೆಯಂತಹ ಸಾಮಗ್ರಿ ಕೆಲಸ ಮಾಡುವುದುಂಟು. ವೈದ್ಯಶಾಸ್ತ್ರ ಕೃತಿಗಳು ಪದ್ಯದಲ್ಲಿ ರಚನೆಯಾದರೂ 'ವಸ್ತುಸ್ಥಿತಿ'ಯಲ್ಲಿ ಅದಲ್ಲ. ಪ್ರಾಚೀನ ಕಾಲದಲ್ಲಿ ಶಾಸ್ತ್ರೀಯ ವಿಷಯವನ್ನು ಹೇಳಲು ಹೀಗೆ 'ಪದ್ಯರೂಪ'ವನ್ನು ಬಳಸಿಕೊಂಡಿರಲು ಇದಕ್ಕೆ ಎರಡು ಮೂರು ಕಾರಣಗಳನ್ನು ಗುರುತಿಸಬಹುದು. ಗದ್ಯದಲ್ಲಿ ಹೇಳುವುದಕ್ಕಿಂತ ಪದ್ಯದಲ್ಲಿ ಹೇಳಿದರೆ ಸುಲಭವಾಗಿ ಸ್ಮರಣೆಯಲ್ಲಿ ಉಳಿಯುತ್ತದೆ ಎಂಬುದು ಇವುಗಳಲ್ಲಿ ಒಂದು ಪ್ರೌಢ ಪರಂಪರೆಯನ್ನು ಮುಂದುವರಿಸಲು, ಪಂಡಿತರ ಹಾಗೂ ಆಶ್ರಯದಾತರ ಮನ್ನಣೆ ಗಳಿಸಲು ಸಾಧ್ಯವಾದ ಮಾರ್ಗವಾದುದು ಇನ್ನೊಂದು. ಮತ್ತೊಂದು ವಿಷಯವನ್ನು ಇಲ್ಲಿ ಹೇಳುವುದಾದರೆ, ಬಾಣನ ನಂತರ ಗದ್ಯ ಬರೆಯುವುದು ಒಂದು 'ನಿಕಷ'ವಾದುದರಿಂದಲೋ ಏನೋ ನಮ್ಮ ಅನೇಕ ಕವಿಗಳು 'ಪದ್ಯರೂಪ'ವನ್ನು ಅಗತ್ಯವಿಲ್ಲದ ಕಡೆಗೂ ಅದನ್ನು ಬಳಸಿಕೊಳ್ಳಲು ಕಾರಣವಾಗಿರಬೇಕೆನಿಸುತ್ತದೆ. ಅಲ್ಲದೆ ವೈದ್ಯಶಾಸ್ತ್ರಜ್ಞರಿಗೆ ಆಕರಗಳಾಗಿರಬಹುದಾದ ಕೃತಿಗಳು ಶ್ಲೋಕರೂಪದಲ್ಲಿದ್ದುದರಿಂದ ಕವಿಗಳು ತಮ್ಮ ಕೃತಿಗಳಲ್ಲಿ ಅದಕ್ಕೆ ಅನುರೂಪವಾದ ಅಭಿವ್ಯಕ್ತಿ ಕ್ರಮವನ್ನು ಅಳವಡಿಸಿಕೊಂಡಿರುವ ಸಾಧ್ಯತೆಯನ್ನೂ ತೆಗೆದುಹಾಕುವಂತಿಲ್ಲ.

ಹೀಗೆ ವೈದ್ಯಶಾಸ್ತ್ರಜ್ಞರು ಸುಲಭ ಸ್ಮರಣೆಗಾಗಿ, ಪಾಂಡಿತ್ಯಕ್ಕಾಗಿ, ಆಶ್ರಯದಾತರ ಮನ್ನಣೆಗಾಗಿ ಮತ್ತು ಆಕರಗಳ ಅನುಕರಣೆಯಿಂದಾಗಿ 'ಕಾವ್ಯರೂಪ'ದಲ್ಲಿ ಬರವಣಿಗೆ ಮಾಡಿರುವುದನ್ನು ಗುರುತಿಸಬಹುದು. ಸಾಮಾನ್ಯವಾಗಿ ಸಾಹಿತ್ಯವನ್ನು ವಿಭಜಿಸುವಾಗ 'ಶುದ್ಧಸಾಹಿತ್ಯ' ಮತ್ತು 'ಪ್ರಯೋಜ್ಯ' ಸಾಹಿತ್ಯ ಎಂದು ವಿಂಗಡಿಸುವುದುಂಟು. ಇದನ್ನು ಅನುಸರಿಸಿ ಹೇಳುವುದಾದರೆ, ವೈದ್ಯಶಾಸ್ತ್ರ ಕೃತಿಗಳು 'ಪ್ರಯೋಜ್ಯ' ಪ್ರಕಾರಕ್ಕೆ ಸೇರುತ್ತವೆ. ಒಟ್ಟಿನಲ್ಲಿ ವೈದ್ಯಶಾಸ್ತ್ರ ಕೃತಿಗಳು 'ಬಾಹ್ಯ'ದಲ್ಲಿ ಕಾವ್ಯವರ್ಗಕ್ಕೆ ಸೇರಿದರೂ ಆಂತರಿಕವಾಗಿ 'ವಾಙ್ಮಯ'ವರ್ಗಕ್ಕೆ ಸೇರುತ್ತವೆಂದು ಹೇಳಬಹುದು.

ಈ ಛಂದೋಬದ್ಧವಾದ ಕೃತಿಗಳನ್ನು ಪಾದಭೇದ ಮಾಡದೆ ಹಸ್ತಪ್ರತಿಗಳಲ್ಲಿ ಉದ್ದಕ್ಕೆ ಬರದುಕೊಂಡು ಹೋಗುವುದಿದೆ. ಕೆಲವು ಹಾಳೆ(ಪತ್ರ)ಗಳು ಸುಮಾರು ೨ ಅಡಿಗಿಂತಲೂ ಉದ್ದ, ಸುಮಾರು ೩ ಇಂಚಿನವರೆಗೂ ಅಗಲವಾಗಿರುತ್ತವೆ. ಗರಿಯ ಒಂದು ಬದಿ ಹಿಡಿಯುವಾಗ ಮತ್ತೊಂದು ಬದಿ ಕೆಳಗೆ ಬಾಗುತ್ತದೆ. ಇಷ್ಟಾದರೂ ಗರಿಗಳು ಮುರಿಯುವುದಿಲ್ಲ. ಅಷ್ಟೊಂದು ಮೃದವಾಗಿ ಹದಮಾಡಿರುತ್ತಾರೆ. ಗರಿಗಳನ್ನು ಒಂದೇ ಅಳತೆಯಲ್ಲಿ ಕತ್ತರಿಸಿ ಮಧ್ಯ ಒಂದೋ ಎರಡೋ ತೂತು ಕೊರೆದು, ಹಾಳೆ (ಗರಿ)ಗಳನ್ನು ಕ್ರಮವಾಗಿ ಹೊಂದಿಸುವಂತೆ ನೂಲನ್ನು ಪೋಣಿಸಿರುತ್ತಾರೆ. ಬರೆಯುವಾಗ ಪ್ರತಿಸಾಲಿಗೂ ಎರಡು ಕಡೆಗಳಲ್ಲಿ ಅಥವಾ ಒಂದೇ ಕಡೆ ಕ್ರಮಸಂಖ್ಯೆ ಇರುತ್ತವೆ. ಇದು ಸುದೀರ್ಘವಾದ ಒಂದು ಸಾಲು ಓದಿ ಮುಗಿಸಿ ಮತ್ತೊಂದು ಸಾಲಿಗೆ ಬರುವಾಗ ಯಾವ ಸಾಲು ಎಂದು ತಿಳಿಯಲು ಸುಲಭವಾಗುತ್ತದೆ. ಪ್ರತಿ ಓಲೆ(ಹಾಳೆ)ಗಳಿಗೂ ಆಲೇಖ ಸಂಖ್ಯೆಗಳು ಇರುತ್ತವೆ. ಸಣ್ಣ ಪುಸ್ತಕವಾಗಿದ್ದರೆ ಕೆಲವಡೆ ಅ,ಆ,ಇ,ಈ,.....ಕ,ಖ,ಗ,ಘ,ಹೀಗೆ ಅಕ್ಷರ ಕ್ರಮದಲ್ಲಿ ಓಲೆಗಳ ಸಂಖ್ಯೆ ಸೂಚಿಸುವುದೂ ಕಂಡು ಬರುತ್ತದೆ. ಕೆಲ ಕೃತಿಗಳಲ್ಲಿ (ಹಸ್ತಪ್ರತಿ)ಗಳಲ್ಲಿ ಸಂಧಿಯೋ,

ಅಧ್ಯಾಯವೋ ಮುಗಿಯುವ ಗರಿ (ಪತ್ರ)ಯ ಎಡಬದಿಯಲ್ಲಿ ಶ್ರೀಕಾರ ಬರೆಯುವುದುಂಟು. ಅಲ್ಲದೆ ಆಯಾ ವಿಚಾರವನ್ನು ಸೂಚಿಸುವುದು ಇದೆ.

ವೈದ್ಯಶಾಸ್ತ್ರದ ಹಸ್ತಪ್ರತಿಗಳಿಗೆ ರಕ್ಷಕವಾಗಿ ಮರದ ಕವಚಗಳಿರುತ್ತವೆ. ಕೆಲವೊಂದು ಕವಚಗಳಲ್ಲಿ ಅಂದವಾದ ಕೆತ್ತನೆ ಕೆಲಸದ ಚಿತ್ರಗಳೂ ಇರುತ್ತವೆ. ಆದರೆ ವೈದ್ಯಕೀಯಕ್ಕೆ ಸಂಬಂಧಿಸಿದಂತೆ ಚಿಕಿತ್ಸಾ ವಿಧಾನ ಕುರಿತೋ, ರೋಗಿಯ ಕುರಿತೋ ವೈದ್ಯರ ಕುರಿತೋ ಚಿತ್ರಗಳು ಇರುವುದು ಕಂಡುಬರುವುದಿಲ್ಲ. ಕೆಲವೆಡೆ ಗರಿ(ಹಾಳೆ)ಗಳಲ್ಲೇ ಅಂದವಾದ ರೇಖಾಚಿತ್ರಗಳು ಇರುವುದಂಟು. ಕೆಲ ಹಸ್ತಪ್ರತಿಗಳಲ್ಲಿ ಒಂದೇ ಗ್ರಂಥದಲ್ಲಿ ಒಂದು ವಿಷಯದೊಡನೆ, ಅಲಲ್ಲಿ ಹಲವಾರು ಮಾಹಿತಿಗಳೂ ದೊರೆಯುತ್ತವೆ. ಒಟ್ಟಾರೆ ವೈದ್ಯಶಾಸ್ತ್ರ ಹಸ್ತಪ್ರತಿಗಳು ಮಾನವನ ಬದುಕಿಗೆ ಹೆಚ್ಚು ಪ್ರಯೋಜನಕಾರಿಯಾಗಿದ್ದು, ಪ್ರಯೋಗ ಶೀಲತೆಯಿಂದ ಕೂಡಿದವುಗಳಾಗಿವೆ. ಆದ್ದರಿಂದ ಇವೆಲ್ಲವುಗಳನ್ನು ಪ್ರಯೋಗದ ಮೂಲಕ ಅವುಗಳ ಸತ್ಯಾಸತ್ಯತೆಯನ್ನು ತಿಳಿಯಬೇಕಾಗಿದೆ.

ನಿಸರ್ಗದಿಂದ ಮನುಷ್ಯ ಅಪಾರವಾದ ಜ್ಞಾನರಾಶಿಯನ್ನು ಪಡೆದಿದ್ದಾನೆ. ಇದು ಒಬ್ಬನ ಅಥವಾ ಒಂದು ತಲೆಮಾರಿನ ಗಳಿಕೆಯಲ್ಲ. ಸಾವಿರಾರು ವರ್ಷಗಳಿಂದ ಮನುಷ್ಯ ಈ ನಿಸರ್ಗದ ರಹಸ್ಯವನ್ನು ಭೇದಿಸುತ್ತಲೇ ಬಂದಿದ್ದಾನೆ. ಇನ್ನೂ ಇದು ಮುಗಿದಿಲ್ಲ; ಮುಗಿಯುವಂಥದೂ ಅಲ್ಲ. ಈಗ ಜ್ಞಾನವನ್ನು ಗಳಿಸಲು ಅನುಕೂಲತೆ ಹೆಚ್ಚಾಗಿದೆ. ಶ್ರಮ ಕಡಿಮೆ. ಆದ್ದರಿಂದ ಗಳಿಸಿದ ಜ್ಞಾನ ಸ್ಥಾಯಿಯಾಗಿ ನಿಲ್ಲುವುದು ಸಾಧ್ಯವಿಲ್ಲ. ಶ್ರಮದಿಂದ ಗಳಿಸಿದ್ದು ಮಾತ್ರ ದೀರ್ಘಕಾಲ ನಿಲ್ಲುವಂಥದು. ಹಾಗೆಯೇ ಬಂದದ್ದು ಹೀಗೆಯೇ ಹೋಗುತ್ತದೆ. ಭಾರತ ದೇಶ ಜ್ಞಾನಪೀಠವೆನಿಸಿದ ಕಾಲವಿತ್ತು. ದೇಶ ವಿದೇಶಗಳಿಂದ ಜನರು ಬಂದು ಇಲ್ಲಿಯೇ ನೆಲೆಯಾಗಿ ನಿಂತು ಇಲ್ಲಿಂದಲೇ ಜ್ಞಾನರಾಶಿಯನ್ನು ಗಳಿಸಿಕೊಂಡು ಹೋಗುತ್ತಿದ್ದರು. ನಾಲಂದಾ, ತಕ್ಷಶಿಲಾ ಮುಂತಾದ ನಗರಗಳಲ್ಲಿ ವಿದ್ಯಾಪೀಠಗಳು ವಿಶ್ವವಿದ್ಯಾನಿಲಯಗಳು ಇದ್ದವು. ಅಲ್ಲದೆ ಆಗ ಬಂದ ವಿದ್ಯಾರ್ಥಿಗಳು ಅಲ್ಲೆ ಇದ್ದು, ತಾವು ಕಲಿತದ್ದನ್ನು ಬರೆದುಕೊಂಡೋ ಅಥವಾ ಬರೆದುಕೊಂಡೇ ಕಲಿತೋ ಮರಳುತ್ತಿದ್ದರು. ಅದರಿಂದ ಹಸ್ತಪ್ರತಿಗಳ ಬರವಣಿಗೆ ಪ್ರಾರಂಭವಾಯಿತು.

ಕನ್ನಡಿಗರು ಲೌಕಿಕ, ಪಾರಮಾರ್ಥಿಕ ಈ ಯಾವುದೇ ಜೀವನಾವಶ್ಯಕ ಜ್ಞಾನವನ್ನು ಕಾಲಕಾಲಕ್ಕೆ ಪರಿವರ್ತಿಸಿಕೊಳ್ಳುತ್ತ ಬಂದಿದ್ದು, ಅದನ್ನು ಹಸ್ತಪ್ರತಿಗಳ ಮೂಲಕ ಈವರೆಗೂ ಸಾಗಿಸಿಕೊಂಡು ಬಂದಿದ್ದಾರೆ. ಅದರಿಂದಾಗಿ ಇಂದು ವಿಪುಲವಾದ ಕನ್ನಡ ಸಾಹಿತ್ಯ ರಾಶಿ ಉಳಿದುಬಂದಿದೆ; ತನ್ನ ಸಂಪತ್-ಸಮೃದ್ಧಿ-ಸಂಕೀರ್ಣತೆಗಾಗಿ ಹೆಸರಾಗಿದೆ. ನಾಡಿನ ಶ್ರೀಮಂತ ಸಂಸ್ಕೃತಿ, ನಾಡವರ ಸದಭಿರುಚಿಗಳ ಫಲವಾಗಿ ಸುಮಾರು ಸಾವಿರ ವರ್ಷಗಳ ದೀರ್ಘ ಅವದಿಯಲ್ಲಿ ಸಾವಿರಾರು ಕನ್ನಡ ಕೃತಿಗಳು ಕಣ್ಣು ತೆರೆದಿದ್ದು, ಅವುಗಳ ಚರಿತ್ರೆ ಒಂದರ್ಥದಲ್ಲಿ ಹಸ್ತಪ್ರತಿಗಳ ಚರಿತ್ರೆಯೇ ಆಗಿದೆ. ಈ ಹಸ್ತಪ್ರತಿಗಳು ಕವಿರಾಜಮಾರ್ಗ ಪರಿಸರದ 'ಅಜ್ಞಾತಯುಗ'ದಿಂದ ಹಿಡಿದು ಕವಿರಾಜಮಾರ್ಗೋತ್ತರ ಕಾಲೀನ ಜ್ಞಾತಯುಗ'ದ ತುಂಬ ಸಂಖ್ಯಾ ವಿಸ್ತಾರ, ವಿಷಯ ವೈವಿದ್ಯದಿಂದ ಹರಡಿಕೊಂಡಿವೆ"[೪೮].

ಕನ್ನಡ ವೈದ್ಯಶಾಸ್ತ್ರದ ಹಸ್ತಪ್ರತಿಗಳ ಸಂಖ್ಯೆಯನ್ನು ಇಷ್ಟೆ ಎಂದು ನಿಖರವಾಗಿ ಹೇಳಲು ಆಗುವುದಿಲ್ಲ. ಏಕೆಂದರೆ ಈಗ ಬೆಳಕಿಗೆ ಬಂದು ಹಸ್ತಪ್ರತಿಭಂಡಾರಗಳಲ್ಲಿ ಲಭ್ಯವಿರುವ ಹಸ್ತಪ್ರತಿಗಳನ್ನು ಹೊರತುಪಡಿಸಿ ಇನ್ನೂ ಅನೇಕ ಹಸ್ತಪ್ರತಿಗಳು ವೈಯಕ್ತಿಕ ಮನೆಗಳಲ್ಲಿ ಉಳಿದುಕೊಂಡಿವೆ. ಅವುಗಳು ಆ ಮನೆಗಳ ಹೊಸ್ತಿಲು

ದಾಟಿ ಹೊರಬರದೆ ಪೆಟರಿಯಲ್ಲೊ, ಜಗುಲಿಯಲ್ಲೋ ಉಳಿದುಕೊಂಡಿವೆ. ಹಾಗೆ ಕೆಲವರು ಅದರ ತಿಳೀವಳಿಕೆಯುಳ್ಳವರು ಅದರಲ್ಲಿ ಮಾಹಿತಿಯಿಂದ ಔಷಧ ಕೊಡುವ ಸ್ವರೂಪಕ್ಕಾಗಿ ಅವುಗಳನ್ನು ಕೊಡದೆ ಮುಂದುವರಿಸಿಕೊಂಡು ಬಂದಿದ್ದಾರೆ. ಅಂತವುಗಳನ್ನು ಬಿಟ್ಟು ಬೆಳಕು ಕಂಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಅವುಗಳನ್ನು ರಚಿಸಿದ ಕರ್ತೃ, ಕಾಲ ಇತರ ವಿವರಗಳು ಲಭ್ಯವಾದ ಕೃತಿಗಳನ್ನು ಮಾತ್ರ ಇಲ್ಲಿ ವಿವರವಾಗಿ ಪರಿಚಯಿಸಲಾಗಿದೆ. ಇವುಗಳಲ್ಲದೆ ಭಂಡಾರಗಳಲ್ಲಿ ಲಭ್ಯವಿದ್ದ 'ವೈದ್ಯಶಾಸ್ತ್ರ ಬರೆಯುವುದಕ್ಕೆ ಶುಭಮಸ್ತು', 'ವೈದ್ಯ ಬರೆಯುವುದಕ್ಕೆ ಶುಭಮಸ್ತು', 'ವೈದ್ಯಪುಸ್ತಕ ಪ್ರಾರಂಭ', 'ನಾಡಿ ವಿವರ ಗ್ರಂಥ', 'ಚಿಕಿತ್ಸಾ ಪುಸ್ತಕ', 'ಶುಭಮಸ್ತು', ಎಂದು ಇಲ್ಲವೆ ದೇವರ ಸ್ತುತಿಯೊಂದಿಗೆ ನೇರವಾಗಿ ಔಷಧಿಕ್ರಮ, ನಾಡಿಪರೀಕ್ಷೆ, ರೋಗಲಕ್ಷಣಗಳಿಂದ ಪ್ರಾರಂಭವಾಗುವ ಅನೇಕ ಗ್ರಂಥಗಳಿವೆ. ಈ ಎಲ್ಲ ಹಸ್ತಪ್ರತಿಗಳ ವಿಷಯವಸ್ತುವನ್ನು ಚಿಕಿತ್ಸಾ ವಿಧಿವಿಧಾನಗಳನ್ನು ಹೇಳುವಾಗ ಉದಾಹರಿಸಲಾಗಿದೆ.

ಭಾರತೀಯ ದೇಶಿ ವೈದ್ಯಶಾಸ್ತ್ರ ಮೂಲಗ್ರಂಥಗಳೆಂದು ಕರೆಸಿಕೊಳ್ಳುವ 'ಚರಕ ಸಂಹಿತೆ', ಸಶ್ರುತ ಸಂಹಿತೆ, ವಾಗ್ಭಟ ಸಂಹಿತೆ, ಮುಂತಾದ ಕೃತಿಗಳಿಗೆ ಪ್ರಾಚೀನವಾದ ಕನ್ನಡ ಟೀಕುಗಳು ಲಭ್ಯವಾಗಿಲ್ಲ. ನಮ್ಮ ನಾಡಿನ ಹಿರಿಯ ಶಾಸ್ತ್ರಜ್ಞರು ಈ ಬಗ್ಗೆ ಮೂಲಗ್ರಂಥಗಳಿಗೆ ಟೀಕೆ ಬರೆಯುವುದು. ನಾಡಿನ ಮೇಲೆ ನಡೆದ ನಾನಾ ದಾಳಿ ಸಂದರ್ಭದಲ್ಲಿ ಅವುಗಳು ನಮಗೆ ಲಭ್ಯವಾಗುವ ಮುಂಚೆ ನಾಶವಾಗಿರುಬಹುದು. ಈಗ ಸಧ್ಯ ಕರ್ನಾಟಕದ ಮತ್ತು ಹೊರನಾಡಿನ ಎಲ್ಲಾ ಹಸ್ತಪ್ರತಿ ಭಂಡಾರಗಳಲ್ಲಿ ವೈಯಕ್ತಿಕ ಮನೆಗಳಲ್ಲಿ ನಮಗೆ ಲಭ್ಯವಿದ್ದ ಪ್ರಕಟಿತ ಹಸ್ತಪ್ರತಿಗಳನ್ನು ಬಿಟ್ಟು ಅಪ್ರಕಟಿತ ಹಸ್ತಪ್ರತಿಗಳಲ್ಲಿ ಕತೃವಿನ ವಿವರ ಲಭ್ಯವಾದ ಸಮಗ್ರ ಕೃತಿಗಳು ಹಲವು ಇವೆ. ಅವುಗಳು ಭಾರತದಲ್ಲಿ ಮತ್ತು ವಿದೇಶದಲ್ಲಿ ಹರಡಿಕೊಂಡಿವೆ. ಅವುಗಳು ಎಲ್ಲೇ ಇರಲಿ ಮೊದಲು ಅವುಗಳ ಸಮಗ್ರ ಜ್ಞಾನ, ವಿವರಗಳನ್ನು ದಾಖಲು ಮಾಡಬೇಕಾಗಿದೆ. ಭಾರತದೇಶದ ಎಲ್ಲಾ ರಾಜ್ಯಗಳಲ್ಲಿ ವೈದ್ಯಶಾಸ್ತ್ರದ ನಿರ್ದೇಶನಾಲಯಗಳು ಇವೆ. ಅವುಗಳ ಸಹಾಯದಿಂದ ಇಂತಹ ಒಂದು ಬ್ರಹತ್‌ಯೋಜನೆ ನಡೆದರೆ ಮಾತ್ರ ನಮ್ಮಲ್ಲಿ ಅಳಿದು ಉಳಿದಿರುವ ಹಸ್ತಪ್ರತಿ ವಿವರಗಳ ಒಂದು ಸೂಚಿ ತಯಾರು ಮಾಡಬಹುದು. ಈ ಕೆಲಸ ತುರ್ತಾಗಿ ನಡೆಯಬೇಕು. ನಂತರ ಅವುಗಳನ್ನು ಸಮಗ್ರ ಅಧ್ಯಯನ ಮಾಡಿ ಅವುಗಳ ಒಡಲಲ್ಲಿ ಇರುವ ಆಗಾದ ಜ್ಞಾನವನ್ನು ಸಂಪಾದಿಸಿ ಪ್ರಕಟಿಸುವುದರ ಮೂಲಕ ವಿಶ್ವಕ್ಕೆ ಹಂಚಬೇಕಾದ ಬಹುದೊಡ್ಡ ಕರ್ತವ್ಯ ನಮ್ಮದಾಗಿದೆ. ಪ್ರಕಟಿಸಿದ ನಂತರ ಪ್ರತಿಯೊಂದು ಕೃತಿಯ ಪ್ರತ್ಯೇಕವಾದ ಸಾಂಸ್ಕೃತಿಕ, ಭಾಷಿಕ, ವೈಜ್ಞಾನಿಕ(ಪ್ರಾಯೋಗಿಕ) ದೃಷ್ಟಿಯಿಂದ ಅಧ್ಯಯನ ಮಾಡಬೇಕಾಗಿದೆ. ಆ ನಿಟ್ಟಿನಲ್ಲಿ ನಾವೆಲ್ಲ ಪ್ರಯತ್ನಪಡಬೇಕಾಗಿದೆ. ಈ ನನ್ನ ಅಧ್ಯಯನ ಸಮಗ್ರ ಅಧ್ಯಯನಕ್ಕೆ ಮಾರ್ಗಸೂಚಿಯಾಗಿ ಹೊರಹೊಮ್ಮಲಿದೆ.

**ಅಡಿಟಿಪ್ಪಣಿಗಳು**

೧. ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ; ೧೯೯೨, ಡಾ.ಬಿ.ಕೆ.ಹಿರೇಮಠ, ಪು.೧

೨. ಅದೇ, ಪು.೧

೩. ಉದ್ಧೃತ: ಕನ್ನಡ ದಾಖಲು ಸಾಹಿತ್ಯ; ೨೦೦೦, ಡಾ.ಕೆ.ರವೀಂದ್ರನಾಥ ಪು.೧೬೧

೪. ಕನ್ನಡ ಹಸ್ತಪ್ರತಿಗಳ ಇತಿಹಾಸ; ೧೯೭೭, ಹೆಚ್.ದೇವಿರಪ್ಪ, ಪು.೧೦೩

೫. ಶಾಸ್ತ್ರ ಸಾಹಿತ್ಯ; ೨೦೦೦, ಎಂ.ವಿ.ಸೀತಾರಾಮಯ್ಯ, ಪು.೬

೬. ಖಗೇಂದ್ರಮಣಿಮಣಿ ದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೧೭೮

೭. ವೈದ್ಯಸಾರಸಂಗ್ರಹ; ಭಾಗ-೧; ೧೯೫೧, (ಸಂ) ಜಿ.ಶ್ರೀನಿವಾಸಮೂರ್ತಿ ಮತ್ತು ಎನ್.ಆರ್.ಭಟ್, ಪೀಠಿಕೆ, ಪು.XX

೮. ಕರ್ನಾಟಕ ಕವಿಚರಿತೆ ಸಂ-೨; ೨೦೦೫, ಆರ್.ನರಸಿಂಹಾಚಾರ್ಯ, ಪು.೨೫೧

೯. ವೈದ್ಯಸಾರ ಸಂಗ್ರಹ ಭಾಗ-೧; ೧೯೫೧, (ಸಂ) ಜಿ.ಶ್ರೀನಿವಾಸಮೂರ್ತಿ ಮತ್ತು ಎನ್.ಆರ್.ಭಟ್, ಪು.೪೭೨

೧೦. ಓಷಧಿಕೋಶ; ೧೯೪೦, (ಸಂ) ಎಚ್.ಶೇಷ ಅಯ್ಯಂಗಾರ್, ಮುನ್ನುಡಿ, ಪು.VI

೧೧. ಅದೇ, ಪು.೧

೧೨. ಅದೇ, ಪು.೧೭೪

೧೩. ಸಕಲ ವೈದ್ಯಸಂಹಿತಾಸಾರಾರ್ಣವಂ; ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಸಂಖ್ಯೆ.ಕೆಎ.೯೭

೧೪. ಸಕಲವೈದ್ಯ ಸಂಹಿತಾಸಾರಾರ್ಣವಂ ಸಂ.೧; ೧೯೬೪, (ಸಂ) ಡಿ.ಶ್ರೀನಿವಾಸಾಚಾರ್ ಮತ್ತು ಡಿ.ಎಲ್.ನರಸಿಂಹಚಾರ್ಯ ಪು.೪

೧೫. ಅದೇ, ಪು.೪

೧೬. ಅದೇ, ಪು.೩

೧೭. ಸಕಲ ವೈದ್ಯಸಂಹಿತಾಸಾರಾರ್ಣವಂ; ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಸಂಖ್ಯೆ.ಕೆಎ೯೭

೧೮. ವೈದ್ಯಕಂದ; ೧೯೯೧, (ಸಂ) ಬಿ.ಎಸ್.ಸಣ್ಣಯ್ಯ, ಪು.೧

೧೯. ಅದೇ, ಪೀಠಿಕೆ, ಪು.IV

೨೦. ಅದೇ, ಪು.೧೭

೨೧. ಅದೇ, ಪು.೨೧

೨೨. ಅದೇ, ಪು.೪೭

೨೩. ಅದೇ, ಪು.೧೦೨

೨೪. ಅದೇ, ಪು.೧೭೦

೨೫. ಕರ್ನಾಟಕ ಕವಿಚರಿತೆ ಸಂ-೧; ೨೦೦೫, ಆರ್.ನರಸಿಂಹಾಚಾರ್, ಪು.೧೩೬

೨೬. ಕರ್ನಾಟಕ ಕಲ್ಯಾಣಕಾರಕ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ ಕೆಎ೪೮೨

೨೭. ಅದೇ, ಕೆಎ೩೬೧

೨೮. ಅದೇ, ಕೆಎ೪೮೨

೨೯. ಅದೇ, ಕೆಎ೪೮೨

೩೦. ಅದೇ, ಕೆಎ೪೮೨

೩೧. ಬಾಲಗ್ರಹ ಚಿಕಿತ್ಸೆ; ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಹಸ್ತಪ್ರತಿ ಭಂಡಾರ ಶ್ರವಣಬೆಳಗೊಳ, ಹಸ್ತಪ್ರತಿ ಸಂಖ್ಯೆ.೪೭೬

೩೨. ಅದೇ, ಹಸ್ತಪ್ರತಿ ಸಂಖ್ಯೆ.೪೭೬

೩೩. ಅದೇ,೪೭೬

೩೪. ವೈದ್ಯಾಮೃತ; ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ, ಕೆ೬೦೫

೩೫. ಅದೇ, ಕೆ೨೧೨

೩೬. ಅದೇ, ಕೆ೨೧೨

೩೭. ವೈದ್ಯಶಾಸ್ತ್ರದ ಹಸ್ತಪ್ರತಿಗಳು; ಬಿ.ನಂಜುಂಡಸ್ವಾಮಿ; ಹಸ್ತಪ್ರತಿ-ವ್ಯಾಸಂಗ-೨; ೨೦೦೬, (ಸಂ) ಡಾ.ಎಫ್.ಟಿ.ಹಳ್ಳಿಕೇರಿ, ಪು.೧೧೨

೩೮. ವೈದ್ಯಚಿಂತಾಮಣಿ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ ಕೆ೪೫೯

೩೯. ಅದೇ, ಹಸ್ತಪ್ರತಿ, ಕೆಬಿ೬೬೩

೪೦. ಅದೇ, ಕೆಬಿ೬೬೩

೪೧. ವೈದ್ಯಸಾಂಗತ್ಯ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ ಕೆ೧೫೦೬

೪೨. ಬೇಷಜಕಲ್ಪ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ ಕೆ೯೭೬

೪೩. ಆರೋಗ್ಯಾಮೃತವೆಂಬ ಕರ್ಣಾಟಕ ವೈದ್ಯಸಾರ ಸಂಗ್ರಹ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ ಕೆ೯೮೫

೪೪. ಅದೇ, ಕೆ೯೮೫

೪೫. ಅದೇ, ಕೆ೯೮೫

೪೬. ಅಕಾರಾದಿ ವೈದ್ಯನಿಘಂಟು; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ, ಕೆ೧೩೨

೪೭. ಅಶ್ವವೈದ್ಯ ಸಚಿತ್ರ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ, ಕೆಎ೫೭೧

೪೮. ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ; ೧೯೯೨, ಡಾ.ಬಿ.ಕೆ.ಹಿರೇಮಠ, ಪು.೧೧

□□□

ಅಧ್ಯಾಯ ಮೂರು

# ವೈದ್ಯಶಾಸ್ತ್ರ : ನಿರ್ವಚನ

೩.೧. ವೈದ್ಯಶಾಸ್ತ್ರ ಅರ್ಥ ಮತ್ತು ಪರಂಪರೆ

೩.೨. ಕನ್ನಡ ಸಾಹಿತ್ಯ ಕೃತಿಗಳಲ್ಲಿ ವೈದ್ಯಕೀಯ ಉಲ್ಲೇಖಗಳ ಸಮೀಕ್ಷೆ

೩

# ವೈದ್ಯಶಾಸ್ತ್ರ : ನಿರ್ವಚನ

ಪ್ರಾಚೀನ ಕರ್ನಾಟಕದ ಜ್ಞಾನಶಿಸ್ತುಗಳಲ್ಲಿ ಲೋಕೋಪಯೋಗಿ ಶಾಸ್ತ್ರ ಸಮುಚ್ಚಯ ಗ್ರಂಥಗಳಿಗೆ ವಿಶಿಷ್ಟ ಸ್ಥಾನವಿದೆ. ಶಾಸ್ತ್ರಸಾಹಿತ್ಯ ಕೃತಿಗಳ ಅಧ್ಯಯನವೆಂದರೆ ಆಯಾ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಜೀವನ ಪದ್ಧತಿಯ ಅಧ್ಯಯನವೇ ಆಗುತ್ತದೆ. ಶಾಸ್ತ್ರಸಾಹಿತ್ಯದಂಥ ಅಧ್ಯಯನಕ್ಕೆ ಹಸ್ತಪ್ರತಿಗಳಂಥ ಪ್ರಾಚೀನ ಆಕರ ಪರಿಕರಗಳು ಅವಶ್ಯಕ. ಇಂಥ ಹಸ್ತಪ್ರತಿಗಳು ಪ್ರಾಚೀನ ಕನ್ನಡಿಗರ ಬದುಕಿನ ಹಲವು ತಿಳುವಳಿಕೆಗಳಲ್ಲಿ ಲೌಕಿಕಶಾಸ್ತ್ರ ಗ್ರಂಥಗಳು ಮನುಕುಲದ ಸ್ವಾಸ್ಥಕ್ಕೆ ಅತ್ಯಾವಶ್ಯಕವಾದ ವೈದ್ಯಶಾಸ್ತ್ರವನ್ನು ತಮ್ಮ ಗರ್ಭದಲ್ಲಿ ಹುದುಗಿಸಿಕೊಂಡು ಬಂದಿವೆ. ಇವುಗಳಲ್ಲಿ ದೇಶೀ ವೈದ್ಯಪದ್ಧತಿಯ ಅನೇಕ ಉತ್ತಮ ಗ್ರಂಥಗಳು ರಚನೆಯಾಗಿರುವುದನ್ನು ಕಾಣಬಹುದು. ಸಂಸ್ಕೃತದಲ್ಲಿ ಚರಕ, ಸುಶ್ರುತ, ವಾಗ್ಭಟ ಸಂಹಿತೆಗಳೂ; ಪೂಜ್ಯಪಾದ ಮತ್ತು ಉಗ್ರಾದಿತ್ಯರ ಕಲ್ಯಾಣಕಾರಕಗಳೂ ಇರುವಂತೆ ಕನ್ನಡದಲ್ಲಿಯೂ ಪರಂಪರೆಯಿಂದ ರೂಢಿಗತವಾಗಿರುವ ಚಿಕಿತ್ಸಾ ವಿಧಾನಗಳನ್ನೊಳಗೊಂಡ ರೋಗನಿಧಾನಗಳೂ ಚಿಕಿತ್ಸಾಪ್ರಕರಣಗಳೂ ರಚಿತವಾಗಿರುವುದುಂಟು.

ನಾಡು-ಸಂಸ್ಕೃತಿ-ಧರ್ಮ ದೊಡ್ಡದೆಂದು ಭಾವಿಸಿದ ನಮ್ಮ ಪ್ರಾಚೀನರು ಸಮಾಜ ಸ್ವಾಸ್ಥ್ಯದ ಕಡೆಗೆ ಗಮನಹರಿಸಿ ಜನರ ಶಾಂತಿ-ನೆಮ್ಮದಿಗೆ ಸಹಕಾರಿಯಾಗಲಿ ಎಂದು ಇಂಥ ಗ್ರಂಥಗಳನ್ನು ರಚಿಸಿರುವರು. ಈ ಕಾರಣವಾಗಿಯೇ ಮಂಗರಾಜನು ತನ್ನ ಖಗೇಂದ್ರಮಣಿದರ್ಪಣಂ ಗ್ರಂಥದಲ್ಲಿ

ಮರನಂ ಗಾಳಿಯ ಧೂಳಿಂ ರಜನಿಯಂ ನೀರಾಟಮಂ ಬೇಟಮಂ
ಸುರೆಯಂ ಸೂಳೆಯರಂ ವಿಟಾಟವಿಕರಂ ಕೊಂಡಾಡಿ ಬೆಂಡಾಗದೀ
ಧರೆಯೊಳ್ ಸರ್ವಜನೋಪಕಾರಮೆನಲೀ ಮಂತ್ರೌಷಧವ್ರಾತಮಂ
ನಿರುತಂ ಭಾವಿಸಿ ಪೇಟ್ಟಿ ಮಾನವನೆ ತಾಂ ದೇವಂ ಧರಾಚಕ್ರದೊಳ್"[೧]

ಎಂದು ನಿರೂಪಿಸಿದ್ದಾನೆ. ಬುಧಜನ ಸಮೂಹದ ಶಾಂತಿ ಸಮಾಧಾನಗಳಿಗೆ, ಮನಸ್ಸಂತೋಷಕ್ಕೆ, ಜ್ಞಾನಾಭಿವೃದ್ಧಿಗೆ ಹಲವರು ಕಥೆ, ಕಾವ್ಯಗಳನ್ನು, ಶಾಸ್ತ್ರಗಳನ್ನು ರಚಿಸಿರಬಹುದು. ಸೂರ್ಯ-ಚಂದ್ರ, ಹಗಲು-ರಾತ್ರಿಗಳನ್ನು ಜಲಕೇಳಿ, ಸೂಳೆಗೇರಿ ಮೊದಲಾದವುಗಳ ಬಗೆಗೆ ಮನಮೋಹಕ ವಿವರಗಳ ಮಹಾಪೂರವನ್ನೇ ಹರಿಸಿರಬಹುದು.

ಆದರೆ ಇವೆಲ್ಲವುಗಳ ರಚನೆಗೆ ಅನುಭವಕ್ಕೆ ಬೇಕಾದ ಶರೀರ ಸ್ವಾಸ್ಥ್ಯವೇ ಇಲ್ಲವಾದರೆ ಪ್ರಯೋಜನವೇನು? ಎಂಬುದೇ ಮಂಗರಾಜನ ಅಭಿಮತವಾಗಿದೆ. ಮಾನವನಿಗೆ ಮುಖ್ಯವಾಗಿ ಬೇಕಾದುದು ಆರೋಗ್ಯ. ಆರೋಗ್ಯದ ಬಗೆಗೆ ತಿಳುವಳಿಕೆ ನೀಡುವುದು ವೈದ್ಯಶಾಸ್ತ್ರ. ಇಂಥ ವೈದ್ಯಶಾಸ್ತ್ರದ ಅರ್ಥ, ಪರಂಪರೆ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಒಡಮೂಡಿರುವ ಪ್ರಾಸಂಗಿಕ ಉಲ್ಲೇಖಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಿಕೊಳ್ಳಲಾಗಿದೆ.

### ೩.೧. ವೈದ್ಯಶಾಸ್ತ್ರದ ಅರ್ಥ ಮತ್ತು ಪರಂಪರೆ

'ಕಾಯಃಕಸ್ಯನ ವಲ್ಲಭ' ಅಂದರೆ ದೇಹವು ಎಲ್ಲರಿಗೂ ಪ್ರಿಯವಾದುದು. ಪ್ರತಿಯೊಂದು ಜೀವಿಯೂ ತನ್ನ ದೇಹವನ್ನು ಸಂರಕ್ಷಿಸಲು, ಪೋಷಿಸಲು ಶ್ರಮಿಸುತ್ತದೆ. ಏಕೆಂದರೆ 'ಜೀವನ್ ಭದ್ರಾಣಿ ಪಶ್ಯತಿ' ಬದುಕಿದ್ದರೆ ಮಂಗಳವನ್ನು ಕಾಣಬಹುದೆಂಬ ಅಪೇಕ್ಷೆ ಎಲ್ಲರಲ್ಲಿಯೂ ಸಹಜವಾಗಿರುತ್ತದೆ. ಜೀವಿಯೊಂದು ತನ್ನ ದೇಹವನ್ನು ರಕ್ಷಿಸುವ ಹಾದಿಯಲ್ಲಿ ಹಲವಾರು ರೋಗರುಜಿನಗಳನ್ನು ಎದುರಿಸುತ್ತದೆ. ರೋಗಗಳನ್ನು ಹತ್ತಿಕ್ಕಿ ಬದುಕಬೇಕೆಂಬ ಛಲದಲ್ಲಿ ಮಾನವನ ಹೋರಾಟ ಆರಂಭವಾಗುತ್ತದೆ"[೨]. 'ಶರೀರಮಾದ್ಯಂ ಖಲು ಧರ್ಮಸಾಧನಂ' ಎಂಬ ಮಾತಿನಂತೆ ಧರ್ಮ ಸಾಧನೆಗೆ ಶರೀರ ಸ್ವಾಸ್ಥ್ಯವೇ ಮುಖ್ಯ. ಶರೀರ ಸ್ವಾಸ್ಥ್ಯಕ್ಕೆ ಮುಖ್ಯವಾಗಿ ಅನುಸರಿಸುವುದೆಂದರೆ ಆಹಾರ, ವಿಹಾರ ಮೊದಲಾದವುಗಳಲ್ಲಿ ಎಚ್ಚರಿಕೆ, ಪ್ರಕೃತಿ ವೈಪರಿತ್ಯದಿಂದ ಶರೀರಕ್ಕೆ ಬರಬಹುದಾದ ತೊಂದರೆಗಳು; ಅವುಗಳ ನಿವಾರಣೆ ಈ ಎಲ್ಲದರ ಕುರಿತು ಉಪಯುಕ್ತವಾದ ಮಾಹಿತಿ ಬೇಕಾಗುತ್ತದೆ. ಹಾಗೆಯೇ 'ಆರೋಗ್ಯವೇ ಭಾಗ್ಯ' ಎಂಬ ಗಾದೆಮಾತಿನಂತೆ ಆರೋಗ್ಯವೊಂದಿದ್ದರೆ ಎಲ್ಲವು ಇದ್ದಂತೆ. `sound mind in a sound bady' ಎನ್ನುವಂತೆ ಪ್ರತಿಯೊಂದು ಜೀವಿಯ ದೈಹಿಕ ಆರೋಗ್ಯ ಚನ್ನಾಗಿದ್ದರೆ ಮನಸ್ಸು ಸುಪ್ರಸನ್ನವಾಗಿರುತ್ತದೆ. ಮನಸ್ಸು ಸುಪ್ರಸನ್ನವಾಗಿದ್ದರೆ ಏನೆಲ್ಲಾ ಸಾಧಿಸಬಹುದು. ಇಂಥ ಆರೋಗ್ಯವನ್ನು ಪಡೆಯಲು ಮಾರ್ಗದರ್ಶನ ನೀಡುವುದೇ ವೈದ್ಯಶಾಸ್ತ್ರ.

#### ೩.೧.೧. ಅರ್ಥ

ವೈದ್ಯಶಾಸ್ತ್ರ ಎಂಬ ಪದಶಃ ಅರ್ಥವನ್ನು ವೈದ್ಯ+ಶಾಸ್ತ್ರ=ವೈದ್ಯಶಾಸ್ತ್ರ ಎಂದು ಬಿಡಿಸಿ. 'ವೈದ್ಯ' ಪದದ ಅರ್ಥವನ್ನು ನಿಘಂಟುವಿನ ಪ್ರಕಾರ ೧. ರೋಗಗಳಿಗೆ ಚಿಕಿತ್ಸೆ ಮಾಡುವವನು; ಡಾಕ್ಟರು ೨. ರೋಗಚಿಕಿತ್ಸೆ; ಔಷಧೋಪಚಾರ. ೩. ವೇದಕ್ಕೆ ಸಂಬಂಧಿಸಿದ. ೪. ರೋಗಚಿಕಿತ್ಸೆಗೆ ಸಂಬಂಧಪಟ್ಟ"[೩] ಎಂದು ಹೇಳಲಾಗಿದೆ. 'ಶಾಸ್ತ್ರ' ಎಂದರೆ ಧಾರ್ಮಿಕ ವಿಷಯ, ತತ್ವ ಮುಂತಾದವುಗಳ ಬಗೆಗೆ ಬರೆದ ಪ್ರಮಾಣ ಗ್ರಂಥ; ದರ್ಶನ ಮತ್ತು ಸಾಂಪ್ರದಾಯಿಕವಾದ ಆಚರಣೆ-ಪದ್ಧತಿ"[೪] ಎಂದು ಅರ್ಥೈಸಲಾಗಿದೆ. ಈ ಎರಡು ಪದ್ಧತಿಗಳು ಸೇರಿ ವೈದ್ಯಶಾಸ್ತ್ರ ಎಂಬುದಕ್ಕೆ ರೋಗ, ರೋಗನಿಧಾನ ಮುಂತಾದುವನ್ನು ವಿವರಿಸುವ ಶಾಸ್ತ್ರ"[೫] ಎಂದು ಹೇಳಲಾಗಿದೆ.

ಈ ಮೇಲಿನ ಪದಶಃ ಅರ್ಥವನ್ನು ಗಮನಿಸಿದಾಗ ವೇದಗಳ ಕಾಲದಿಂದಲೇ ರೋಗಗಳಿಗೆ ಚಿಕಿತ್ಸೆ ಮಾಡುವವರು ಧರ್ಮದಿಂದ, ಅಂದರೆ 'ಯಾವುದೇ ಫಲಾಪೇಕ್ಷೆಯನ್ನು ಬಯಸದೇ ಆತ್ಮತೃಪ್ತಿಗಾಗಿ ಆಚರಣೆಯಂತೆ ಮುನ್ನೆಡೆಸಿಕೊಂಡು ಬಂದ ಜನಮುಖಿ ಶಾಸ್ತ್ರವೇ ವೈದ್ಯಶಾಸ್ತ್ರ' ಎಂದು ಹೇಳಬಹುದು.

ವೈದ್ಯಶಾಸ್ತ್ರವು ಪ್ರತಿಯೊಂದು ಜೀವಿಯ ಸ್ವಾಸ್ಥ್ಯ ಸಂರಕ್ಷಣೆಯ ಜೊತೆಗೆ ರೋಗದ ಕಾರಣ ಹಾಗೂ ಉಪಚಾರವನ್ನು ತಿಳಿಸುತ್ತದೆ. ಪ್ರಾಚೀನ ಕಾಲದಲ್ಲಿ ನಮ್ಮ ಪೂರ್ವಜರು ಔಷಧಿ ತಯಾರಿಸಿ ತೆಗೆದುಕೊಳ್ಳುವ ವಿಧಾನದಲ್ಲಿ ಸಸ್ಯಜನ್ಯ ಔಷದಿಗಳು ಮಾನವನ ದೇಹದಲ್ಲಿ ನೈಸರ್ಗಿಕ ಪ್ರತಿರೋಧ ಶಕ್ತಿಯನ್ನು ನೀಡುತ್ತಿದ್ದವು. ಈ ಸಸ್ಯಜನ್ಯ ಔಷಧಿ ಗುಣವನ್ನು ಒಂದು ನಿಯಮಬದ್ಧ ತಳಹದಿಯಲ್ಲಿ ವಿಶ್ಲೇಷಿಸುವ ಶಾಸ್ತ್ರವನ್ನು ಆಯುರ್ವೇದ ಎಂದು ಕರೆಯಲಾಗಿದೆ.

ಆಯುರ್ವೇದವು ಆಯು+ವೇದ ಎಂಬೆರಡು ಪದಗಳಿಂದ ಹುಟ್ಟಿದೆ. ಅಂದರೆ; ಆಯು=ಆಯಸ್ಸು. ಅಥವಾ ಜೀವವನ್ನು ಕಾಪಾಡಿಕೊಳ್ಳುವುದಕ್ಕಾಗಿ ಸೃಷ್ಟಿಯಾಗಿರುವ ವೇದ ಎಂದು ಹೇಳಬಹುದು. ಹಾಗೂ ಜೀವಿಯು ಅನುಸರಿಸತಕ್ಕ ವಿದಿತವಾದ ಕ್ರಮ. ಹಾಗೂ ಆಯುಷ್ಯಃ+ವೇದ= ಆಯುರ್ವೇದ"[೬]. ಆಯುರ್ವೇದವೆಂದರೆ; 'ಆಯು'; ಎಂದರೆ ಜೀವಿತಾವಧಿ, 'ವೇದ' ಎಂದರೆ ಜ್ಞಾನ, ಜೀವಿತಾವಧಿಯುದ್ದಕ್ಕೂ ಬೇಕಾಗುವ ಸಮಗ್ರ ಜ್ಞಾನವನ್ನುಂಟು ಮಾಡಿಕೊಡುವುದೇ ಆಯುರ್ವೇದ"[೭].

ಆಯುಷೋವೇದಃ ಆಯುರ್ವೇದ ಃ ತಥಾ ಆಯುರ್ವಿಂದತಿ ಅನೇನ ಇತ್ಯಾಯುರ್ವೇದಃ। ಅಂದರೆ ಯಾವ ಶಾಸ್ತ್ರದಿಂದ ಆಯುವಿನ ಜ್ಞಾನ ಅಥವಾ ಪ್ರಯೋಜನವಾಗುವುದೋ ಅದಕ್ಕೆ ಆಯುರ್ವೇದವೆಂದು ಕರೆಯುವರು"[೮].

ಆಯುರ್ವೇದ ವ್ಯಾಖ್ಯೆಯನ್ನು ಇಂಗ್ಲೀಶ್‌ನಲ್ಲಿ ಈ ರೀತಿ ಮಾಡಿದ್ದಾರೆ. "The term Ayurveda interpreted as science in which knowledge of life exists or which helps man to enjoy longer duration of life'[೯]

ಆಯುರ್ವೇದವು ಶರೀರಶಾಸ್ತ್ರ, ಜೀವಶಾಸ್ತ್ರ ಮತ್ತು ಮನಃಶಾಸ್ತ್ರ ಈ ಮೂರು ಮಾರ್ಗಗಳಲ್ಲಿಯೂ ವಿಚಾರಮಾಡುತ್ತದೆ. ಅದು ಶಸ್ತ್ರ ಚಿಕಿತ್ಸೆ ಮತ್ತು ಔಷಧ ವಿಜ್ಞಾನಗಳನ್ನು ನಿರೋಧ ಮತ್ತು ಪರಿಹಾರಗಳೆರಡರ ದೃಷ್ಟಿಯಿಂದಲೂ ವಿಚಾರಮಾಡುತ್ತದೆ. ಸತ್ವ, ರಜಸ್, ತಮಸ್ಸುಗಳು ಆಯುರ್ವೇದದ ವಾತ, ಪಿತ್ತ, ಶ್ಲೇಷ್ಮ (ಕಫ)ಗಳಿಗೆ ನಿಕಟ ಸಂಬಂಧ ಹೊಂದಿದ್ದು ಅವುಗಳ ಮೇಲೆ ಬಹುಮಟ್ಟಿನ ಪರಿಣಾಮಬೀರುತ್ತವೆ. ವಾತವು ಶರೀರದ ಎಲ್ಲ ವಿಧವಾದ ಚಲನೆಗಳಿಗೆ ಸಂಬಂಧಪಟ್ಟುದ್ದು. ಪಿತ್ತವು ಉಷ್ಣೋತ್ಪತ್ತಿಗೆ ಕಾರಣವಾಗಿ ರಕ್ತಪರಿಚಲನೆ, ಆಹಾರಜೀರ್ಣಕ್ರಮ, ಜೀವದ್ರವ್ಯ ಪರಿಣಾಮಕರವಾದ ಪಚನ ಮತ್ತು ವಿವೇಚನ ಕ್ರಿಯೆಗೆ ಸಹಾಯಕವಾದುದು. ಶ್ಲೇಷ್ಮ ಅಥವಾ ಕಫವು ಶ್ವೇತ್ಯಸಂಬಂಧಪಟ್ಟುದು. ವ್ಯಾದಿಗಳು ಶಾರೀರಕ ಮತ್ತು ಮಾನಸಿಕ ಎಂಬ ಎರಡು ರೀತಿಯಾಗಿರುತ್ತವೆ. ಮೇಲೆ ಹೇಳಿದ ತ್ರಿವಿಧ ಸ್ಥಿತಿಗಳ ವ್ಯತ್ಯಾಸದಿಂದ ರೊಗೋತ್ಪತ್ತಿಯಾಗುವುದು. ರೋಗದ ಪರಿಹಾರ ಕ್ರಮವನ್ನು ಕೈಗೊಳ್ಳುವ ಮೊದಲು ಇವುಗಳ ಸ್ಥಿತಿಯನ್ನು ಅರಿಯಲಾಗುವುದು. ಚಿಕಿತ್ಸಾ ಸಾಧನೆಗೆ ಪೂರ್ವಭಾವಿಯಾಗಿ ಪ್ರತ್ಯೇಕ ವ್ಯಕ್ತಿಗಳ ಆರೋಗ್ಯದ ಮೇಲೆ ಇವುಗಳ ಪ್ರಭಾವವನ್ನು ವಿಚಾರಮಾಡಲಾಗುವುದು. ರಕ್ತ ಮತ್ತು ಅದರ ಪರಿಚಲನೆಯ ಕ್ರಮವನ್ನು ಅರಿತು ಚಿಕಿತ್ಸೆ ಮಾಡುವುದೇ ಪ್ರಾಚೀನ ಆಯುರ್ವೇದ ಪದ್ಧತಿ"[೧೦].

ಬೊಮ್ಮಯ್ಯನ ವೈದ್ಯಕಂದ ಗ್ರಂಥದಲ್ಲಿನ ಉಲ್ಲೇಕ ವಿಶಿಷ್ಟವಾದುದು.
ಅಭಿಘಾತವಾಭಿಚಾರವು। ಅಭಿಷಂಗಗ[ಳಾಭೀತ] ಶಾಪ[ದ] ಬೇದವುನಾ
ಲ್ಕಭಿಘಾತ ಜ್ವರವೆಂದನು। ಅಭಿತಾಯುರ್ವೇದ ಪೇಳ್ವನಿವಕನ್ನಡದಿಂ"[೧೧]

ಕವಿಯು ಅಭಿಘಾತ ಅಭಿಚಾರ ಅಭಿಷಂಗ ಅಭಿತಶಾಪವೆಂಬ ನಾಲ್ಕು ಪ್ರಕಾರಗಳನ್ನು ಆಗಂತುಕ ಜ್ವರವೆಂದು ಆಯುರ್ವೇದದಲ್ಲಿ ಹೇಳಿದೆ. ಸಂಸ್ಕೃತದಲ್ಲಿ ಹೇಳಿರುವುದನ್ನು ಕನ್ನಡದಲ್ಲಿ ಹೇಳುತ್ತೇನೆ ಎನ್ನುತ್ತಾನೆ. ಕನ್ನಡದ ವೈದ್ಯಶಾಸ್ತ್ರ ಗ್ರಂಥಗಳು ಬಹುಪಾಲು ಸಂಸ್ಕೃತ ಮೂಲವನ್ನು ಆಶ್ರಯಿಸಿದವುಗಳೇ ಎನ್ನುವುದಕ್ಕೆ ಕನ್ನಡ ಶಾಸ್ತ್ರಜ್ಞರು ತಮ್ಮ ಗ್ರಂಥಗಳಲ್ಲಿ ಸಂಸ್ಕೃತ ಶಾಸ್ತ್ರಜ್ಞರನ್ನು ಸ್ತುತಿಸಿ, ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳನ್ನು ಬಳಸಿ ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ರಂ. ಶ್ರೀ. ಮುಗಳಿ ಅವರು ಅಭಿಪ್ರಾಯ ಪಡುವಂತೆ "ಸಂಸ್ಕೃತ ಅನುಪೂರ್ವಿಯ ಪ್ರಭಾವವಿದ್ದರೂ ಸ್ವಾನುಭವದ ಸ್ವತಂತ್ರ ಅಂಶಗಳಿವೆ."[೨]. ಎನ್ನುವ ಮಾತನ್ನು ಅಲ್ಲಗಳೆಯುವಂತಿಲ್ಲ. ದೇಶಿ ವೈದ್ಯಪದ್ಧತಿಯು ಕನ್ನಡಿಗರಿಂದ ಪಾರಂಪರಿಕವಾಗಿ ಕೆಲವು ವಿಶಿಷ್ಟ ಅಂಶಗಳ ಆಧಾರದ ಮೇಲೆ ಬೆಳೆದುಬಂದುದಾಗಿದೆ. ಇದು ಮೊದಲು ಸ್ವಾನುಭವ ಪ್ರಧಾನವಾಗಿದ್ದು ಪ್ರಯೋಗದ ಮೂಲಕವೇ ಪರಿಪಕ್ವಗೊಳ್ಳುತ್ತ ಬಂದಿತ್ತು. ನಂತರ ಅಕ್ಷರ ಜ್ಞಾನದಿಂದ ಸಂಸ್ಕೃತ ಗ್ರಂಥಗಳನ್ನು ಅಧ್ಯಯನ ಮಾಡಿ ತಮ್ಮ ಅನುಭವದ ಜ್ಞಾನವನ್ನು ಹಸ್ತಪ್ರತಿಗಳಲ್ಲಿ ಬರೆದಿಟ್ಟರು. ಇದು ಮನೆವೈದ್ಯ, ಓಣಿವೈದ್ಯ, ಗ್ರಾಮವೈದ್ಯ, ನಾಡವೈದ್ಯ, ಅಜ್ಜಿವೈದ್ಯ, ಹಿತ್ತಲವೈದ್ಯ, ಜನಪದವೈದ್ಯ ಎಂಬ ಹೆಸರುಗಳಿಂದ ಬೆಳೆದು ಬಂದಿದೆ. ಇದು ಸಾಮಾನ್ಯವಾಗಿ ನಿಸರ್ಗವನ್ನೆ ಅವಲಂಬಿಸಿ ಬೆಳೆದುಬಂದಿದೆಂಬುದು ಗಮನಾರ್ಹ. ಜನರು ಸಹ ನಿಸರ್ಗದ ಮಧ್ಯದಲ್ಲೆ ಬದುಕುತ್ತಿದ್ದರು. ನಾಗರಿಕತೆ ಬೆಳೆದಂತೆ ವೈಜ್ಞಾನಿಕ ಮನೋಧರ್ಮ ಪ್ರಯೋಗಗಳು ಪ್ರಾರಂಭವಾದವು. ಕಾರಣ ಪೂರ್ವದಿಂದ ಬಂದ ಸಾಂಪ್ರದಾಯಿಕ ವೈದ್ಯ ಪದ್ಧತಿಯನ್ನು ಈ ಮನೋಧರ್ಮ ಪರಿಷ್ಕರಣಗೊಳಿತು. ಅದೇ ಕಾಲಕ್ಕೆ ಸಾಂಪ್ರದಾಯಿಕ ಪದ್ಧತಿಯ ನಾಶಕ್ಕೂ ನಾಂದಿಹಾಡಿತು.

ಸಂಸ್ಕೃತ ಭಾಷಾ ಪಾಂಡಿತ್ಯ ಪ್ರಧಾನವಾದ ಆಯುರ್ವೇದವು ಶಾಸ್ತ್ರಬದ್ಧವಾಗಿ ನೀತಿ–ನಿಯಮಗಳಿಗೊಳಪಟ್ಟು ಬೆಳೆದು ಬಂದಿತು. ಸ್ವಾತಂತ್ರ್ಯಾನಂತರ ಕಾಲೇಜುಗಳಲ್ಲಿ ಅದು ಶಿಸ್ತುಬದ್ಧವಾಗಿ ಕಲಿಸಲ್ಪಡುತ್ತಿತ್ತು. ಆದರೆ ಕನ್ನಡ ವೈದ್ಯಶಾಸ್ತ್ರವು ಬರಹ ಪಾತಳಿಗಿಂತ ಪ್ರಯೋಗ ಪಾತಳಿಯಲ್ಲಿ ಜನಮುಖಿ ಸಂಸ್ಕೃತಿ ಆಯಾಮ ಪಡೆಯಿತು. ಸಂಸ್ಕೃತದ ವೈದ್ಯಪದ್ಧತಿಯು ವೈದಿಕ ಸಂಸ್ಕೃತಿಯದು; ಅದು ಅಮರತ್ವದ ಗುರಿಯನ್ನು ಪ್ರಧಾನವಾಗಿ ಹೊಂದಿತ್ತು. ಆದರೆ ಕನ್ನಡದ ಪಾರಂಪರಿಕ ವೈದ್ಯೆಪದ್ಧತಿಯು ಪುನರ್‌ಜನ್ಮದ ಗುರಿಯನ್ನು ಹೊದಿತ್ತು. ಈ ಕುರಿತು ಚಿಂತನೆ ಮಾಡುವಾಗ ಡಾ. ವೀರೇಶ ಬಡಿಗೇರರ 'ಬಾಚಿಕಾಯಕದ ಬಸವಯ್ಯ; ವೃತ್ತಿ ಹಾಗೂ ತತ್ವ ಮೀಮಾಂಸೆ'ಯಲ್ಲಿನ ಸಾಲುಗಳು ನೆನಪಾಗುತ್ತವೆ. "ಬಿಳಿಹಾಳೆ ಉಪಯುಕ್ತ ದಾಖಲೆಯಾಗಬೇಕಾದರೆ 'ಕರಿಮಸಿ'ಯ ಸಹಾಯ ಹೇಗೆ ಅಗತ್ಯವೋ ಹಾಗೆ ಚಿನ್ನಕ್ಕೆ ತಾಮ್ರದ ಸ್ಪರ್ಷ ಅತ್ಯಗತ್ಯ. ಅಮೂರ್ತದ ಶೋಭೆಗೆ ಮೂರ್ತದ ಸ್ಪರ್ಷ ಎಷ್ಟು ಅಗತ್ಯ ಎನ್ನುವುದನ್ನು ಇಲ್ಲಿ ಕಾಣಬಹುದು ವಾಸ್ತವ ಹೀಗಿರುವಾಗ ಚರಿತ್ರೆಯ ಯಾವ ಹಂತದಲ್ಲಿ ಇದು ತಿರುಮುರುವು ಆಯಿತು ಎನ್ನುವುದು ಜಿಜ್ಞಾಸೆ. ಮೂಗು ಮಾಡಿದವನ ಮರೆತು ನತ್ತು ಮಾಡಿದವನ ನೆನೆವ ಬಗೆಯಿದು. ಚಿನ್ನದೊಂದಿಗೆ ಚಿನ್ನವಾಗಿ ಸೇರಿಕೊಳ್ಳುವ ತಾಮ್ರದ ಅಸ್ತಿತ್ವ ಸಂಸ್ಕೃತೀಕರಣದ ತರ್ಕದಲ್ಲಿ ಅಡಗಿದೆ. ಹೊರಗಿದ್ದಾಗ ಕೀಳಾಗಿ ನೋಡುವ, ಒಳಸೇರಿದಾಗ ಉನ್ನತೀಕರಣಗೊಳ್ಳುವ ಈ ಪರಿಯ ಸಾಮಾಜಿಕ ಆಲೋಚನೆಯ ಶ್ರೇಣೀಕರಣವನ್ನು ಮಾರ್ಮಿಕವಾಗಿ ಚಿತ್ರಿಸುತ್ತದೆ"[೨೨] ಎನ್ನುವಲ್ಲಿ ನಮ್ಮದೇ ಆದ ವೈದ್ಯಪದ್ಧತಿ ಕರ್ನಾಟಕದಲ್ಲಿ ಕನ್ನಡಿಗರಿಂದ ಪರಂಪರಾಗತವಾಗಿ ಬೆಳೆದುಬಂದಿದ್ದರೂ ಸಂಸ್ಕೃತದ ಪ್ರಭಾವದಿಂದ ಅದು ಹೊರಬಂದು ತನ್ನ ಅಸ್ಮಿತೆಯನ್ನು ತೋರುವಲ್ಲಿ ಹಿಂದೆ ಉಳಿದಿದೆ.

ಆಯುರಾರೋಗ್ಯಗಳ ಸಂರಕ್ಷಣೆಗಾಗಿ ಆಯುರ್ವೇದ ಶಾಸ್ತ್ರದಲ್ಲಿ ಪ್ರಾಚೀನ ಆಚಾರ್ಯರುಗಳ ದಿನಚರ್ಯೆ, ಋತುಚರ್ಯೆ ಮತ್ತು ಸದ್ವೃತ್ತಗಳೆಂಬ ಮೂರು ಪರಮೋಪಾಯಗಳನ್ನು ಹೇಳಿದ್ದಾರೆ. ಇದರ ಅನುಸರಣೆಯು ಆತನ ದೇಹಸ್ವಾಸ್ಥ್ಯಕ್ಕೆ ಕಾರಣವಾಗಿರುವುದಲ್ಲದೆ ಆತ್ಮಸಾಕ್ಷಾತ್ಕಾರಕ್ಕೂ ಸಹಾಯಕವಾಗಿರುತ್ತದೆ. ಇಲ್ಲಿ ದಿನಚರ್ಯೆ ಅಂದರೆ–ಆರೋಗ್ಯವನ್ನು ಕಾಪಾಡಿಕೊಳ್ಳಲು ಮನುಷ್ಯನು ದಿನನಿತ್ಯದಲ್ಲಿ ಆಚರಿಸಬೇಕಾದ ಜೀವನಕ್ರಮ. ಆದರೆ ಈ ದಿನಚರ್ಯೆಯು ಋತುಮಾನಕ್ಕನುಸಾರವಾಗಿ ಬದಲಾವಣೆಯಾಗಬೇಕಾಗುತ್ತದೆ. ಆದುದರಿಂದ ಋತುಮಾನಕ್ಕೆ ತಕ್ಕಂತೆ ಬದುಕನ್ನು ಹೊಂದಿಸಿಕೊಂಡು ಹೋಗುವುದೇ ಋತುಚರ್ಯೆ. ಸದ್ವೃತ್ತವೆಂದರೆ ಮಾನವನು ಆಚರಿಸಬೇಕಾದ ನೀತಿ–ನಿಯಮಗಳು. ಅಂದರೆ ನೆರೆಹೊರೆಯವರೊಡನೆ, ಕುಟುಂಬದವರೊಡನೆ ಸಮಾಜದಲ್ಲಿ ಉತ್ತಮವಾಗಿ ಬದುಕಿ ಬಾಳಲಿಕ್ಕೆ ಬೇಕಾದ ಗುಣಗಳು. ದೇಶೀ ವೈದ್ಯಪದ್ಧತಿಯ ಮೂಲ ಉದ್ದೇಶ ರೋಗ ನಿವಾರಣೆಗಿಂತ ಹೆಚ್ಚಾಗಿ ರೋಗ ಬಾರದಂತೆ ನೋಡಿಕೊಳ್ಳುವುದು. ಹೀಗಿರುವುದರಿಂದ ದಿನಚರ್ಯೆಗೆ ಋತುಚರ್ಯೆಯು ಸಾಧನೆಗೂ, ಆರೋಗ್ಯ ರಕ್ಷಣೆಗೂ ಮಾನವನು ಆಚರಣೆಯಲ್ಲಿಟ್ಟುಕೊಳ್ಳಬೇಕಾದ ನೀತಿ ನಿಯಮಗಳು ಮುಖ್ಯವಾಗುತ್ತವೆ. ಇದು ದಿನಚರ್ಯೆಗೆ ಪೋಷಕ. ಹೀಗೆ ಈ ಮೂರು ಸೂತ್ರಗಳನ್ನು ಜೀವನದಲ್ಲಿ ಹೊಂದಿಸಿಕೊಂಡು ನಡೆಯತಕ್ಕವನು "ಶತಾಯುರ್ವೈ ಪುರುಷಃ ಶತವೀರ್ಯ" ಎಂದೆನ್ನುವಂತೆ ಮನುಷ್ಯನು ತನ್ನ ಜೀವಿತಾವಧಿಯ ಪರಿಪೂರ್ಣವಾದ ಬಾಳಿನಲ್ಲಿ ವೀರ್ಯವಂತನಾಗಿ ರೋಗರುಜಿನಗಳಿಲ್ಲದೆ ಆರೋಗ್ಯವಂತನಾಗಿ ಬಲವಂತನಾಗಿ ಕ್ರಿಯಾಶೀಲನಾಗಿ ಬಾಳುತ್ತಾನೆ ಎನ್ನುತ್ತದೆ ದೇಶೀ ವೈದ್ಯಪದ್ಧತಿ. ಇದು ತಮ್ಮ ಸುತ್ತಲವರ ಮನಸ್ಸಿನ, ದೇಹದ ರೋಗರುಜಿನಗಳನ್ನು ವಾಸಿಮಾಡಲು ಬಳಸಿಕೊಂಡ ಅವರದೇ ಆದ ಜೀವನದ ದೀರ್ಘಾನುಭದ ಹಾಗೂ ಪ್ರಯೋಗಗಳ ಪ್ರತಿಫಲದಿಂದ ಬೆಳೆದು ರೋಗರುಜಿನಗಳು ಬಂತೆಂದರೆ ಪ್ರಕೃತಿಯೇ ವೈದ್ಯಮಾತೆಯೆಂದು ನಂಬಿ ರೋಗಗಳಿಗೆ ಅಲ್ಲಿಯೇ ಪರಿಹಾರವನ್ನು ಕಂಡುಕೊಂಡ. ಬಹುಮುಖ್ಯವಾಗಿ ಇದು ಜನಪದ ಸಂಸ್ಕೃತಿಯ ಒಂದು ಭಾಗ. ಅದು ದೇಶೀಯವಾದುದು ಸಾಂಪ್ರದಾಯಿಕವಾದುದು; ಮುಖ್ಯವಾಗಿ ಪ್ರಾದೇಶಿಕವಾದುದೂ ಆಗಿದೆ. ಹೀಗೆ ನಮ್ಮ ದೇಶೀ ವೈದ್ಯಪದ್ಧತಿಯು ಕನ್ನಡ ನಾಡಿನಲ್ಲಿ ತನ್ನ ಅಸ್ಮಿತೆಯನ್ನು ಉಳಿಸಿಕೊಂಡು ಮಾನವಮುಖಿ ಹಿನ್ನೆಲೆಯಲ್ಲಿ ಬೆಳೆದುಕೊಂಡು ಮುಂದುವರಿದುಕೊಂಡು ಬಂದಿದೆ.

ಕನ್ನಡನಾಡಿನ ಪ್ರಾಚೀನರು ಸ್ವ–ಅನುಭವದಿಂದ ಕೊಡುವ ಔಷಧದ ಜೊತೆಗೆ ಕೆಲವು ಸಂಸ್ಕೃತ ಗ್ರಂಥಗಳಿಂದ ನಿತ್ಯೋಪಯೋಗಕ್ಕೆ ಬೇಕಾದ ಚಿಕಿತ್ಸಾ ಭಾಗಗಳನ್ನು ಮಾತ್ರ ಅಧ್ಯಯನ ಮಾಡಿ ಗ್ರಂಥಗಳನ್ನು ರಚಿಸಿದ್ದಾರೆ. ಕರ್ನಾಟಕದಲ್ಲಿ ಅನೇಕ ವರ್ಷಗಳ ಕಾಲ ಪ್ರಸಿದ್ಧ ವೈದ್ಯರು ಸುಶ್ರೂಷೆ ಮಾಡಿಕೊಂಡು ವಿದ್ಯಾರ್ಥಿಗಳು ವೃತ್ತಿ ಕೌಶಲ್ಯವನ್ನು ಸಂಪಾದಿಸಿ ಶಾಸ್ತ್ರಾಧ್ಯಯನ ಮತ್ತು ವೃತ್ತಿ ನೈಪುಣ್ಯಗಳೆರಡನ್ನೂ ರೂಢಿಸಿಕೊಂಡ ವೈದ್ಯರು ಒಂದೆಡೆಯಾದರೆ, ಯಾವುದಾದರೊಂದೋ ಎರಡೋ ವ್ಯಾಧಿಗಳಿಗೆ ಯಶಸ್ವಿ ಔಷಧ ಪ್ರಯೋಗಗಳನ್ನು ಮಾತ್ರ ತಿಳಿದುಕೊಂಡು ಆ ವಿದ್ಯೆಯನ್ನು ಗೋಪ್ಯವಾಗಿಟ್ಟು ವಂಶಪಾರಂಪರ್ಯವಾಗಿ ನಡೆಸಿಕೊಂಡು ಬರುವ ವೃತ್ತಿಯ ಜನರು ಸಮಾಜದಲ್ಲಿದ್ದಾರೆ. ಮಂತ್ರ, ತಂತ್ರ ಬಲದಿಂದ ವ್ಯಾಧಿಗಳನ್ನು ನಿವಾರಿಸುವುದನ್ನು ಅರ್ಚಕ, ಪುರೋಹಿತರು ನಡೆಸುತ್ತಿದ್ದರು. ದೇಶೀ ವೈದ್ಯರು ತಾವು ತಯಾರಿಸಿದ ಔಷಧವನ್ನು ಮಾರುವ ಪದ್ಧತಿ ಇರಲಿಲ್ಲ. ತಮ್ಮ ವೃತ್ತಿಪಾಲನೆಯಲ್ಲಿ ನಿಷ್ಠೆ ಗೌರವಗಳನ್ನು ಪಾಲಿಸುತ್ತಿದ್ದ ವೈದ್ಯರು ಔಷಧವನ್ನು ಉಚಿತವಾಗಿ ಕೊಡುವುದೇ ವಾಡಿಕೆಯಾಗಿತ್ತು. ಮಾನವೀಯ ದೃಷ್ಟಿಯಿಂದ ಜನಾನುರಾಗಿಯಾದರೆ ಮಾತ್ರ

ತಾವು ಸುಖದಿಂದ ಜೀವಿಸಬಹುದೆಂಬುದನ್ನು ಅರಿತಿದ್ದರು. ತಮ್ಮನ್ನು ಆಶ್ರಯಿಸಿದ ರೋಗಿಯನ್ನು ಕೆಲವು ಕಾಲ ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಸುಶ್ರೂಷೆ ಮಾಡುತ್ತಿದ್ದುದೂ ಸಂಪ್ರದಾಯವಾಗಿತ್ತು. ಜನರು ವೈದ್ಯರಲ್ಲಿ ಗೌರವಾದರಗಳನ್ನೂ ದೇವರಲ್ಲಿ ಭಕ್ತಿ-ನಂಬಿಕೆಯನ್ನು ಹೊಂದಿದವರಾಗಿದ್ದರು. ಶ್ರದ್ಧೆಯಿಂದ ಔಷಧವನ್ನು ಸೇವಿಸುತ್ತಿದ್ದರು. ಮತ್ತು ಪಥ್ಯಪಾಲನೆ ಮಾಡುತ್ತಿದ್ದರು. ಯಾವಾಗಲೂ ಸದೃಢ ಮನಸ್ಸನಾಗಿ ಪರಿವರ್ತಿಸುತ್ತದೆಂಬುದು ವಾಸ್ತವ. ಈ ಎಲ್ಲಾ ಕಾರಣಗಳಿಂದಾಗಿಯೇ ಚಿಕಿತ್ಸೆ ಯಶಸ್ವಿಯಾಗಲು ಸಹಾಯಕವಾಗಿದ್ದವು.

ಈ ಮೇಲಿನ ಎಲ್ಲ ಅಂಶಗಳನ್ನು ಗಮನದಲ್ಲಿಟುಕೊಂಡು ವೈದ್ಯಶಾಸ್ತ್ರವನ್ನು ಆಯುರ್ವೇದ ಎಂದು ಅರ್ಥೈಸುವಲ್ಲಿಯೂ ಜೀವಿತಾವಧಿಯಲ್ಲಿ ದೇಹವನ್ನು ಕಾಪಾಡಿಕೊಳ್ಳುವುದಕ್ಕಾಗಿ ಪ್ರಯೋಜನವಾಗುವಂತಹ ಔಷಧೋಪಚಾರ ಮಾಡುವ ಒಂದು ಪ್ರಾಚೀನ ಪದ್ಧತಿ ಎಂದು ಕರೆಯಬಹುದು. ಇದರ ಮುಖ್ಯ ಗುರಿ ಲೌಖಿಕ ಜಗತ್ತನ್ನು ಸಂರಕ್ಷಿಸುವುದು. ಇದು ಪರಂಪರಾಗತವಾಗಿ ಪ್ರಯೋಗಶೀಲತೆಯನ್ನು ಪಡೆದುಕೊಂಡು ಬಂದಿರುವಂತದ್ದು. ಅಲ್ಲದೆ ಒಂದು ಬೌದ್ಧಿಕ ಶಿಸ್ತಾಗಿ ಅರಿವಿನ ಪಾತಳಿಯಲ್ಲಿ ಉತ್ತುಂಗ ಶಿಖರವನ್ನು ತಲುಪಿ ಬರವಣಿಗೆ ರೂಪವನ್ನು ಪಡೆದುಕೊಂಡು ಒಂದು ಚೌಕಟ್ಟಿನೊಳಗೆ ಬಂಧಿತವಾಗಿರುವುದು ಗಮನಾರ್ಹವಾದುದ್ದು. ನಮ್ಮ ದೇಶೀ ವೈದ್ಯಶಾಸ್ತ್ರವು ಸಮುದಾಯದ ಸ್ವಾಸ್ಥ್ಯಕ್ಕೆ ಮನ್ನಡೆಸುವ ಬಹುದೊಡ್ಡ ಗುರುತರವಾದ ಜವಾಬ್ದಾರಿಯನ್ನು ಹೊತ್ತು ಸಾಗಿಬಂದುದಾಗಿದೆ. ಆದ್ದರಿಂದ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳು ಸಮುದಾಯದ ಒಂದು ಭಾಗವಾಗಿ ಪ್ರತಿನಿತ್ಯ ಪ್ರಯೋಗದಿಂದ ಕಂಡಕೊಂಡ ಜ್ಞಾನವನ್ನು ಒಳಗೊಂಡಿವೆ. ಪ್ರಯೋಗವು; ಪ್ರಯೋಗ ಮಾಡುವವರ ಮತ್ತು ಪ್ರಯೋಗಕ್ಕೆ ಒಳಗಾಗುವವರ ಮಾನವೀಯ ಸಂಬಂಧದ ಹಿನ್ನೆಲೆಯಲ್ಲಿ ನಡೆಯುತ್ತಿತ್ತು. ಪ್ರಯೋಗದಲ್ಲಿ ಯಶಸ್ಸು ಕಂಡ ಪ್ರಯೋಗಕಾರ ಸಮುದಾಯದ ಸ್ವಾಸ್ಥ್ಯಕ್ಕೆ ಅರ್ಪಣಾ ಮನೋಭಾವದಿಂದ ಕಾರ್ಯನಿರ್ವಹಿಸುತ್ತಿದ್ದನೆಂಬುದು ಅಷ್ಟೇ ಗಮನೀಯವಾದುದು. ಈ ಎಲ್ಲಾ ಸಂಗತಿಗಳು ವೈದ್ಯಶಾಸ್ತ್ರದ ಪದಶಃ ಅರ್ಥದಲ್ಲೇ ಅಡಕವಾಗಿವೆ. ಹಾಗೂ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳು ಆ ಹಿನ್ನೆಲೆಯಲ್ಲೇ ರಚನೆಯಾಗಿವೆ.

**೩.೧.೨.ಪರಂಪರೆ**

ವೈದ್ಯಶಾಸ್ತ್ರದ ಹುಟ್ಟು ಬೆಳವಣಿಗೆಗಳ ವಿಚಾರದಲ್ಲಿ ಸಾಕಷ್ಟು ಆಧಾರಗಳ ಕೊರತೆಯಿದೆ. ಇಡೀ ಜಗತ್ತಿನಲ್ಲಿ ವೈದ್ಯಶಾಸ್ತ್ರವು ಈ ಪೃಥ್ವಿಯ ಮೇಲೆ ಮಾನವ ಹಾಗೂ ಇತರ ಜೀವಿಗಳು ಹುಟ್ಟಿಕೊಂಡಾಗಲೇ ಹುಟ್ಟಿಕೊಂಡಿರಬೇಕು. ಮನುಷ್ಯ ಮತ್ತು ಇತರ ಜೀವಗಳು ಆಹಾರ, ವಿಹಾರ, ಪರಿಸರದಲ್ಲಾದ ಏರು ಪೇರುಗಳಿಂದ ಆಗುವ ರೋಗ ರುಜಿನಾದಿಗಳ ಪರಿಹಾರಕ್ಕಾಗಿ ಏನಾದರೊಂದು ಪ್ರಯತ್ನ ಮಾಡುತ್ತಲೇ ಬರಲಾಗಿದೆ. ಈಗಲೂ ಪಶು, ಪಕ್ಷಿ, ಪ್ರಾಣಿಗಳು ತಮಗೆ ರೋಗರುಜಿನಗಳಾದಾಗ ಉಪವಾಸವಿದ್ದೋ ಇಲ್ಲವೇ ಯಾವುದಾದರೊಂದು ಮೂಲಿಕೆಯನ್ನು ತಿಂದು ವಾಂತಿ ಮಾಡಿಕೊಳ್ಳುವುದರ ಮೂಲಕ ತಮ್ಮ ರೋಗಗಳನ್ನು ಪರಿಹಾರ ಮಾಡಿಕೊಳ್ಳುವುದನ್ನು ನಾವು ಕಾಣುತ್ತೇವೆ. ಅದರಂತೆ ಆದಿಮಾನವ ಬೆಂಕಿ ಹಚ್ಚುವುದನ್ನು ಅರಿತುಕೊಂಡಂತೆ ಲೋಹದ ಬಳಕೆಯನ್ನು ಕಲಿತುಕೊಂಡಂತೆ, ರೋಗಗಳಿಗೆ ಔಷಧವನ್ನು ಪ್ರಾಣಿ ಪಕ್ಷಿಗಳ ಚಲನವಲನಗಳನ್ನು ಅರಿತು ಕಂಡುಕೊಂಡ. ಪ್ರಕೃತಿಯ ಮಡಿಲಲ್ಲಿ ಬೆಳೆದ ಮಾನವನು ಪ್ರಾಣಿಗಳ ಚಲನವಲನವನ್ನು

ಪ್ರಕೃತಿಯು ಹತ್ತು ಹಲವು ವ್ಯಾಪಾರವನ್ನು ತೆರೆದ ಕಣ್ಣುಗಳಿಂದ ನೋಡಿದಾಗ ವೈದ್ಯದ ಆವಿರ್ಭಾವವಾಯಿತೆನ್ನಬಹುದು. ಡಾ.ಸತ್ಯನಾರಾಯಣ ಭಟ್.ಪಿ ಅವರು ವೈದ್ಯ ವಿಜ್ಞಾನದ ಉಗಮಕ್ಕೆ ಮೂಲಕಾರಣ ಹೀಗೆ ಉಲ್ಲೇಖಿಸಿದ್ದಾರೆ; "ಭೂಮಿಯ ಮೇಲೆ ಹುಟ್ಟಿದಾತನು ತಾನು ಸುಖಿಯಾಗಿರಬೇಕು. ಚಿರಕಾಲ ಉಳಿಯಬೇಕು. ನಿರೋಗಿಯಾಗಿರಬೇಕು' ಎಂಬ ಮಹಾದಾಕಾಂಕ್ಷೆಯೇ ವೈದ್ಯದ ಹುಟ್ಟಿಗೆ ಕಾರಣ"[೧೩] ಎಂದು ಹೇಳುತ್ತಾರೆ.

ನಮ್ಮ ಪೂರ್ವಿಕರು ಬರೆದಿಡುತ್ತಿದ್ದ ವೈದ್ಯಶಾಸ್ತ್ರ ಗ್ರಂಥಗಳಿಗೆ ಒಂದು ಇತಿಹಾಸವೇ ಇದೆ. ಪ್ರಯೋಗ ಪ್ರಧಾನವಾಗಿ ಆಸಕ್ತರಿಂದ ಆಸಕ್ತರಿಗೆ ಹರಿದು ಬರುತ್ತಿದ್ದ, ಆ ಮೂಲಕವಾಗಿ ಬೆಳೆಯುತ್ತಿದ್ದ ವೈದ್ಯವಿದ್ಯೆಯನ್ನು ಹಿಡಿದಿಡುವ ಪ್ರಕಾರಗಳನ್ನು ಗುರುತಿಸುವುದು ಒಂದು ಚರಿತ್ರೆಯನ್ನು ರಚಿಸಿದಂತೆಯೇ ಕಷ್ಟಕರವಾದುದು. ಕನ್ನಡಿಗರು ಸಾವಿರಾರು ವರ್ಷಗಳ ಹಿಂದಿನಿಂದ ತಮಗೆ ಗೊತ್ತಿದ್ದ ಮತ್ತು ಸಂಸ್ಕೃತ ಗ್ರಂಥಗಳ ಅಧ್ಯಯನಗಳಿಂದ ವೈದ್ಯಶಾಸ್ತ್ರವನ್ನು ತಮ್ಮ ಮುಂದಿನ ಪೀಳಿಗೆಯವರಿಗಾಗಿ ತಾಳೆಗರಿ, ಕೋರಿಕಾಗದಗಳ ಮೇಲೆ ಬರೆದಿಟ್ಟಿರುವರು. ಪ್ರಾಚೀನರು ವೈದ್ಯಶಾಸ್ತ್ರ ಗ್ರಂಥಗಳನ್ನು ರಚನೆ ಮಾಡಿದ್ದು ಲೋಕೋಪಕಾರಕ್ಕಾಗಿ, ಅದೊಂದು 'ಸುಜ್ಞಾನ ದಾಸೋಹ' ಎಂದೇ ಅವರು ಭಾವಿಸಿದ್ದರು. ಅವರು ಕೊಟ್ಟು ಹೋಗಿರುವ ಈ ಸುಜ್ಞಾನ ಸಂಪುಟಗಳನ್ನು ನಮ್ಮವರು ಕತ್ತಲೆ ಕೋಣೆಯಲ್ಲಿಟ್ಟು ಮುಚ್ಚಿಟ್ಟಿದ್ದಾರೆ. ಕೆಲವರು ನದಿಪಾಲು, ಬೆಂಕಿಪಾಲು ಮಾಡಿದ್ದಾರೆ. ಇದುವರೆಗೂ ಬೆಳಕಿಗೆ ಬಂದ ಗಣನೀಯ ಸಂಖ್ಯೆಯಲ್ಲಿ ಉಪಲಬ್ಧವಾಗಿರುವ ಹಸ್ತಪ್ರತಿಗಳು ಹಾಗು ಅವುಗಳ ಕುರಿತು ಅವಲೋಕಿಸಿದ ಕವಿಚರಿತೆ ಸಂಪುಟಗಳ ಸಹಾಯದಿಂದ ವೈದ್ಯಶಾಸ್ತ್ರ ಪರಂಪರೆಯನ್ನು ಕಟ್ಟುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕನ್ನಡ ವೈದ್ಯಕೀಯ ಪರಂಪರೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಿಂಧೂ ಸಂಸ್ಕೃತಿಯ ಕಾಲದಿಂದ (ಕ್ರಿ.ಪೂ.೨೮೦೦) ಸಮಗ್ರ ಭಾರತದಲ್ಲಿ ವೈದ್ಯಶಾಸ್ತ್ರ ಬೆಳೆದು ಬಂದಿರುವ ರೀತಿಯನ್ನು ಸ್ಥೂಲವಾಗಿ ತಿಳಿಯುವುದು ಅತ್ಯವಶ್ಯಕ. ಭಾರತೀಯ ವೈದ್ಯಕೀಯ ಪರಂಪರೆಯನ್ನು ಅರಿಯುವ ಸಲುವಾಗಿ ಕೆಲವು ಸಂಗತಿಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

ಆಯುರ್ವೇದವು ವೇದಗಳ ಕಾಲದಲ್ಲಿಯೇ ಹುಟ್ಟಿದೆಯೆಂದೂ ಲೋಕಕರ್ತನಾದ ಬ್ರಹ್ಮನು ಈಶ್ವರನಿಂದ ಆಯುರ್ವೇದದ ಶಾಸ್ತ್ರವನ್ನು ಅಮೂಲಾಗ್ರವಾಗಿ ತಿಳಿದುಕೊಂಡು ದಕ್ಷಪ್ರಜಾಪತಿಗೆ ಉಪದೇಶಿಸಿದನು. ದಕ್ಷಪ್ರಜಾಪತಿಯು ಅಶ್ವಿನಿ ದೇವತೆಗಳಿಗೆ ಈ ವಿದ್ಯೆಯನ್ನು ಹೇಳಿಕೊಟ್ಟನೆಂದೂ ಅವರಿಂದ ಇಂದ್ರನೂ ಕಲಿತನೆಂದೂ ಭಾರದ್ವಾಜನೆಂಬ ಋಷಿಯು ಇಂದ್ರನಿಂದ ಇದನ್ನು ಕಲಿತು ಮನುಷ್ಯರ ನಡುವೆ ತಂದನೆಂದೂ ಒಕ್ಕಣೆಯಿದೆ. ಪುನರ್ವಸು ಆತ್ರೇಯ ಋಷಿಯು ಆಯುರ್ವೇದವನ್ನು ಅಧ್ಯಯನ ಮಾಡಿ ಆರು ಜನ ಶಿಷ್ಯರಾದ ಅಗ್ನಿವೇಶ, ಭೇಡ, ಜತುಕರ್ಣ, ಪರಾಶರ, ಹಾರೀತ ಮತ್ತು ಕ್ಷಾರಪಾಣಿಗಳಿಗೆ ಈ ಶಾಸ್ತ್ರವನ್ನು ಹೇಳಿಕೊಟ್ಟನೆಂದೂ ಪ್ರತೀತಿ ಇದೆ. ಇವರೆಲ್ಲರೂ ಈ ಶಾಸ್ತ್ರದ ಮೇಲೆ ಗ್ರಂಥಗಳನ್ನು ರಚಿಸಿದರೆಂದೂ ಅವು ಉಪಲಬ್ಧವಿಲ್ಲವೆಂದು ತಿಳಿದುಬರುತ್ತದೆ. ಅಗ್ನಿವೇಶನ ಗ್ರಂಥವನ್ನು ಆಧರಿಸಿ ಕ್ರಿ.ಪೂ.ಮೂರು ಅಥವಾ ಎರಡನೆಯ ಶತಮಾನದಲ್ಲಿದ್ದ ಚರಕಾಚಾರ್ಯನು ಆಯುರ್ವೇದದ ಸಂಗತಿಗಳಿಗೆ ಶಾಸ್ತ್ರೀಯ ಚೌಕಟ್ಟು ನೀಡಿದ. ಐತಿಹಾಸಿಕವಾಗಿ ಈತನ ಕೃತಿ 'ಚರಕ ಸಂಹಿತ' ಕೃತಿಗೆ ಮಹತ್ವವಿದೆ. ಚರಕ ಸಂಹಿತ ಎಂಟು ಪ್ರಕರಣಗಳು ಮೂವತ್ತು ಅಧ್ಯಾಯಗಳನ್ನು

ಒಳಗೊಂಡಥದ್ದು. ಈ ಗ್ರಂಥ ಶರೀರದ ಆಂತರ್ಯಭಾಗಕ್ಕೆ ಸಂಬಂಧಪಟ್ಟ ಚಿಕಿತ್ಸೆಯಲ್ಲಿ ಬಹು ಉತ್ತಮವಾದದ್ದೆಂಬ ಭಾವನೆಯಿದೆ. ಹಾಗಾಗಿ 'ಚರಕ ಸಂಹಿತೆ'ಗೆ ಸುಮಾರು ಐವತ್ತು ವ್ಯಾಖ್ಯಾನಗಳು ಸಿದ್ಧವಾದವು. ಒಂಬತ್ತನೆಯ ಶತಮಾನದಲ್ಲಿದ್ದ ದೃಢಬಲ, ಹನ್ನೊಂದನೆಯ ಶತಮಾನದಲ್ಲಿದ್ದ ಚಕ್ರಪಾಣಿದತ್ತ ಇವರ ವ್ಯಾಖ್ಯಾನಗಳು ಪ್ರಸಿದ್ದವಾಗಿವೆ"[೧೪].

ಇನ್ನೊಂದು ಪಂಥ ಭಗವಾನ್ ಧನ್ವಂತರಿಯದು. ಧನ್ವಂತರಿ ದಿವೋದಾಸನೆಂಬುವನು ಕಾಶಿಯ ರಾಜನಾಗಿದ್ದನಂತೆ. ಇವನು ಇಂದ್ರನಿಂದ ಆಯುರ್ವೇದವನ್ನು ಕಲಿತು ಸಶ್ರುತ, ಔಷದೇನವ, ವೈತರಣ, ಔರಭ್ರ, ಪುಷ್ಕಲಾವತ, ಕರವೀರ್ಯ ಅವರಿಗೆ ಶಲ್ಯ ಚಿಕಿತ್ಸೆಯನ್ನೇ ಮುಖ್ಯಾಗಿ ಉಪದೇಶಿಸಿದ. ಧನ್ವಂತರಿಯ ಶಿಷ್ಯರಲ್ಲಿ ಪ್ರಮುಖನಾದವನು ಸುಶ್ರತ"[೧೫].

ಈ ಮೇಲಿನ ಎರಡೂ ಪಂಥಗಳನ್ನು ಗಮನಿಸಿದಾಗ ಆಯುರ್ವೇದವು ವೇದಗಳ ಕಾಲದಲ್ಲಿ ಹುಟ್ಟಿದೆಯೆಂದೂ ಬ್ರಹ್ಮನೇ ಅದನ್ನು ಪ್ರಪ್ರಥಮವಾಗಿ ಬೋಧಿಸಿದನೆಂದು ತದನಂತರ ಅದು ದಕ್ಷಪ್ರಜಾಪತಿ, ಅಶ್ವಿನೀ ದೇವತೆಗಳು, ಇಂದ್ರ, ಭಾರದ್ವಾಜ, ಕಶ್ಯಪ, ಧನ್ವಂತರಿ, ಅಗ್ನಿವೇಶ, ಬೇಲ, ಜೀತೂಕರ್ಣ, ಪರಾಶರ, ಹಾರೀತ, ಕ್ಷೌರಪಾಣಿ ಹೀಗೆ ಈ ಸಂಪ್ರದಾಯ ಬೆಳೆಯುತ್ತ ಬಂದಿತೆಂದು ನಂಬಿಕೆಯಿದೆ. ಧನ್ವಂತರಿಯನ್ನು ವೈದ್ಯದೇವತೆ ಎಂದು ತಿಳಿಯಲಾಗಿದೆ. ಚರಕ, ಸುಶ್ರುತ ಮತ್ತು ವಾಗ್ಭಟರ ಕೃತಿಗಳು ಭಾರತದ ಪ್ರಾಚೀನ ಆಯುರ್ವೇದ ಗ್ರಂಥಗಳಲ್ಲಿ ಪ್ರಾಮುಖ್ಯವೆನಿಸಿವೆ ಎಂದು ತಿಳಿದುಬರುತ್ತದೆ.

ಧನ್ವಂತರಿಯನ್ನು ವೈದ್ಯದೇವತೆ ಎಂದು ಕರೆದ ಕಾರಣ ಕುರಿತು ಚರ್ಚಿಸಿದಾಗ; ಭಾರತದ ಮಟ್ಟಿಗೆ ಮಹೋನ್ನತ ವೈದ್ಯಕೀಯ ಶಾಸ್ತ್ರವೇ ಆಗಿರುವ ಆಯುರ್ವೇದದಲ್ಲಿ ಪ್ರಾತಃಸ್ಮರಣೀಯ ವಿದ್ವಾಂಸ, ವಿಜ್ಞಾನಿ 'ಧನ್ವಂತರಿ' ಎನ್ನುವುದು ಸತ್ಯ. ಆಯುರ್ವೇದದ ಅದ್ಭುತ ಪರಂಪರೆಯ ಸಂಕೇತವಾಗಿರುವ 'ಧನ್ವಂತರಿ'ಯನ್ನು ದೈವತ್ವಕ್ಕೆ ಏರಿಸಲಾಗಿದೆ. ಆಯುರ್ವೇದ ಸಂಹಿತೆ ಮತ್ತು ಪುರಾಣಗಳಲ್ಲಿ ಕಂಡು ಬರುವ ಪ್ರಸ್ತಾವಗಳ ಪ್ರಕಾರ ಹಲವು 'ಧನ್ವಂತರಿ'ಗಳು ಕಂಡು ಬರುತ್ತಾರೆ. ಆದಿ ಧನ್ವಂತರಿ, ಕಾಶಿರಾಜ ದಿವೋದಾಸ ಧನ್ವಂತರಿ... ಹೀಗೆ ಇವರೆಲ್ಲರೂ ಶಸ್ತ್ರ ಚಿಕಿತ್ಸಕರ ಪ್ರಾಚೀನ ಪರಂಪರೆಯ ಅದ್ಭುತ ಸಂಕೇತಗಳೂ ಆಗಿದ್ದಾರೆ.

ಆಯುರ್ವೇದವು ಮೊದಲಿಗೆ ಮೌಖಿಕ ಪರಂಪರೆ ಹೊಂದಿರಬಹುದಾದರೂ, ಚರಕ ಸುಶ್ರುತರು ಮೊದಲ ಬಾರಿಗೆ ಈ ಮಹತ್ವದ ವಿಜ್ಞಾನವನ್ನು ಬರಹ ರೂಪಕ್ಕಿಳಿಸಿದರು. ಸುಮಾರು ಐದು ಸಾವಿರ ವರ್ಷಗಳ ಹಿಂದೆಯೇ 'ಧನ್ವಂತರಿ'ಯ ಪರಿಕಲ್ಪನೆ ಇತ್ತು. ಇದು ಪುರಾಣ ಕಥೆಗಳೊಂದಿಗೂ ಬೆರೆತುಕೊಂಡಿದೆ. "ದೇವತೆಗಳು ಮತ್ತು ರಾಕ್ಷಸರ ನಡುವೆ ಕಿತ್ತಾಟ ನಡೆದು 'ವಾಸುಕಿ'ಯನ್ನು ಹಿಡಿದು 'ಹಗ್ಗಜಗ್ಗಾಟ' ನಡೆಸಿದ ಕಥೆ ಗೊತ್ತಿದೆಯಷ್ಟೆ. ಆಗ ಹಾಲು ಕಡಲಿನಿಂದ ಎದ್ದು ಬರುವಾತನೇ 'ಧನ್ವಂತರಿ'. ಆತನ ಕೈಯಲ್ಲಿರುವ ಮಡಿಕೆಯೊಳಗೆ ಅಮೃತವಿರುತ್ತದೆ. ಇದನ್ನು ಕುಡಿದವರು ಚಿರಂಜೀವಿಗಳಾಗುತ್ತಾರೆನ್ನುವುದು 'ಶ್ರೀಮದ್ ಭಗವತ್ ಪುರಾಣ' ದಲ್ಲಿದೆ. ಭಾರತದ ಮಟ್ಟಿಗೆ ಈತನೇ ವೈದ್ಯಕೀಯ ಶಾಸ್ತ್ರದ ದೇವತೆ ಕೂಡ. ಈತನನ್ನು ಆದಿ ಧನ್ವಂತರಿ ಎಂದೇ ಪರಿಗಣಿಸಲಾಗಿದೆಯಲ್ಲದೆ, ವಿಷ್ಣುವಿನ ಹನ್ನೆರಡನೇ ಅವತಾರ ಎಂದು ನಂಬಲಾಗುತ್ತದೆ"[೧೬]. ಇವೆಲ್ಲಾ ಪುರಾಣ. ಆದರೆ ಇತಿಹಾಸದ ನೆಲೆಗಟ್ಟಿನಲ್ಲಿ ನೋಡಿದಾಗ ಕ್ರೈಸ್ತ ಹುಟ್ಟುವ ಮೊದಲೇ ತನ್ನ ಅತ್ಯದ್ಭುತ ವೈದ್ಯಕೀಯ ಜ್ಞಾನದಿಂದ ಮನೆಮಾತಾದನು ಕಾಸಿರಾಜ ದಿವೋದಾಸ ಧನ್ವಂತರಿ. ಜಗತ್ತಿನಲ್ಲಿ ವೈದ್ಯಶಾಸ್ತ್ರದ

ಪ್ರಾಚೀನ ಮೇರು ಕೃತಿ ಎಂದು ಪರಿಗಣಿಸಲಾಗಿರುವ 'ಸುಶ್ರುತ ಸಂಹಿತೆ'ಯನ್ನು ಸುಶ್ರುತನು ಬರೆದಿಟ್ಟಿದ್ದನಾದರೂ, ಇವೆಲ್ಲವೂ ಕಾಶರಾಜ ಧನ್ವಂತರಿಯ ಉಪನ್ಯಾಸಗಳೇ ಎಂಬ ಅಭಿಪ್ರಾಯವಿದೆ.

ಭಾರತದ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಮಹತ್ವದ ಸಂಶೋಧಕ ಎನ್ನಬಹುದಾದ ಆದಿ ಧನ್ವಂತರಿಯನ್ನು ಸಹಸ್ರಮಾನಗಳ ಮೌಖಿಕ ಪರಂಪರೆಯಲ್ಲಿ ಆ ಕಾಲಗಟ್ಟದಲ್ಲಿಯೇ ದೈವತ್ವಕ್ಕೆ ಏರಿಸಿ ಕೃತಜ್ಞತೆ ವ್ಯಕ್ತಪಡಿಸಿದ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಈ ಹಿನ್ನೆಲೆಯೊಂದಿಗೆ ಧನ್ವಂತರಿ ಪರಂಪರೆಯೇ ಮುಂದುವರಿಯಿತು ಎನ್ನಲಾಗತ್ತಿದೆ.

ಹಾಗೇಯೇ ಅಷ್ಟಾಂಗ ಹೃದಯ, ಕಶ್ಯಪ ಸಂಹಿತಾ, ಬೇಲ ಸಂಹಿತಾ, ಮಾಧವ ನಿದಾನ, ಶಾರಂಗಧರ ಸಂಹಿತೆ, ಭಾವಪ್ರಕಾಶ, ಮಧುಕೋಶ ಆತಂಕದರ್ಪಣ, ಸಿದ್ಧಯೋಗ, ಚಕ್ರಸಂಗ್ರಹ ಮೊದಲಾದ ಮೂಲ ಹಾಗೂ ವ್ಯಾಖ್ಯಾನ ಗ್ರಂಥಗಳು ದೇಶಿ ವೈದ್ಯದ ವ್ಯಾಪ್ತಿ ಮತ್ತು ಜನಪ್ರಿಯತೆಯನ್ನು ಸೂಚಿಸುತ್ತವೆ. ಅದು ವೇದಗಳಿಗೆ ಸಮಾನವೆನ್ನುವಲ್ಲಿ ಅದರ ಪ್ರಾಮುಖ್ಯತೆ ಹಾಗೂ ಶ್ರೇಷ್ಠತೆಗಳು ಸುಸ್ಪಷ್ಟವಾಗಿವೆ. "ಪೂರ್ವೋಕ್ತ ಗ್ರಂಥಗಳ ಪೈಕಿ ವಾಗ್ಭಟ ವಿರಚಿತ 'ಅಷ್ಟಾಂಗ ಹೃದಯ, ವಿಶಿಷ್ಟವಾದುದು; ಅದು ವೈದ್ಯವಿಜ್ಞಾನದ ವಿಭಾಗಗಳನ್ನು ತಿಳಿಸುತ್ತದೆ"[೧೭].

ಕರ್ನಾಟಕದ ಪೂರ್ವೇತಿಹಾಸದ ಉಗಮದ ಬಗ್ಗೆ ವಿದ್ವಾಂಸರಲ್ಲಿ ಸ್ವಲ್ಪ ಮಟ್ಟಿನ ಭಿನ್ನಾಭಿಪ್ರಾಯವಿದ್ದರೂ ಕ್ರಿ.ಪೂ. ಮೂರನೆಯ ಶತಮಾನವನ್ನು ಪ್ರಾಚೀನ ಕಾಲವೆಂದು ಹೆಚ್ಚು ಜನ ವಿದ್ವಾಂಸರು ಒಪ್ಪುತ್ತಾರೆ. ದಕ್ಷಿಣ ಭಾರತದಲ್ಲಿ ಸ್ಥಾಪಿತವಾದ ಪ್ರಥಮ ಸಾಮ್ರಾಜ್ಯವೆಂದರೆ ಶಾತವಾಹನರದೇ ಆಗಿದೆ. (ಕ್ರಿಪೂ.೨೩೦) ಆದ್ದರಿಂದ ಕರ್ನಾಟಕದ ಚರಿತ್ರೆಯನ್ನು ಇಲ್ಲಿಂದಲೇ ಪ್ರಾರಂಭಿಸುವುದು ರೂಢಿಗೆ ಬಂದಿರುತ್ತದೆ. ಅಂತೆಯೇ ಕನ್ನಡ ವೈದ್ಯಶಾಸ್ತ್ರ ಪರಂಪರೆಯನ್ನು ಈ ಕಾಲದಿಂದಲೇ ಉಪಲಬ್ದ ಮಾಹಿತಿಯ ಆಧಾರದ ಮೇಲೆ ಪ್ರಾರಂಭಿಸಲಾಗಿದೆ. ಇಲ್ಲಿ ಕನ್ನಡ ಭಾಷೆಯಲ್ಲಿ ರಚಿತವಾದ ಮತ್ತು ಸಂಸ್ಕೃತ ಗ್ರಂಥಗಳ ಶ್ಲೋಕಗಳಿಗೆ ಕನ್ನಡ ಟೀಕು ಬರೆದಿರುವ ಗ್ರಂಥಗಳನ್ನು ಕನ್ನಡ ಕೃತಿಗಳೆಂದು ಪರಿಗಣಿಸಲಾಗಿದೆ. ಅಲ್ಲದೆ ಕನ್ನಡ ವೈದ್ಯಶಾಸ್ತ್ರವು ಸಂಸ್ಕೃತದ ಸಂಪ್ರದಾಯಕ್ಕೆ ಅನುಗುಣವಾಗಿ ಹುಟ್ಟಿ ಬೆಳೆದಿದ್ದರೂ ಕನ್ನಡ ಭಾಷೆಯಲ್ಲಿ ಅದು ತನ್ನದೇ ಆದ ಸ್ವತಂತ್ರ ಮಾರ್ಗವನ್ನು ಅವಲಂಬಿಸಿತು. ಕನ್ನಡದಲ್ಲಿ ರಚಿತವಾದ ಎಲ್ಲ ಗ್ರಂಥಗಳು ಉಪಲಬ್ದವಾಗಿಲ್ಲ. ಕೆಲವು ಗ್ರಂಥಗಳ ಹೆಸರು ಮಾತ್ರ ದೊರೆಯುವುದಲ್ಲದೆ ಅವುಗಳ ಬಗ್ಗೆ ಹೆಚ್ಚಿನ ವಿವರಗಳೇನು ದೊರೆಯುವುದಿಲ್ಲ. ಕೆಲವು ವೈದ್ಯಗ್ರಂಥ ಬರೆದವರು ಯಾರೆಂದು ತಿಳಿದುಬರುವುದಿಲ್ಲ. ಕೆಲವೊಂದು ವೈದ್ಯಗ್ರಂಥಗಳ ಶೀರ್ಷಿಕೆಗಳೇ ಇರುವುದಿಲ್ಲ. ಅಂತೆಯೇ ಕೆಲವು ವೈದ್ಯಗ್ರಂಥಗಳ ಹಾಗು ರಚನಾಕಾರರ ಕಾಲದ ಬಗ್ಗೆಯೂ ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯ. ಹಾಗಾಗಿ ಹೆಚ್ಚಿನ ಸಾಹಿತ್ಯ ಚರಿತ್ರಾಕಾರರು ಒಪ್ಪಿಕೊಂಡಿರುವ ಕಾಲ ಹಾಗೂ ಕೃತಿಗಳ ಆಧಾರದಲ್ಲಿ ಕನ್ನಡ ವೈದ್ಯಶಾಸ್ತ್ರ ಪರಂಪರೆಯನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗಿದೆ. ಹಾಗೂ ಪ್ರಾಚೀನ ಕಾಲದಿಂದ ೧೯ನೆಯ ಶತಮಾನದವರೆಗಿನ ಕಾಲಘಟ್ಟಕ್ಕೆ ಸೀಮಿತಗೊಳಿಸಲಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯ ಪ್ರೇರಕವಾಗಿರುವಂತೆ ವೈದ್ಯಶಾಸ್ತ್ರ ಕೃತಿಗಳಿಗೂ ಸಂಸ್ಕೃತವೇ ಪ್ರೇರಣೆ ನೀಡಿದೆ. ಕನ್ನಡ ವೈದ್ಯಶಾಸ್ತ್ರ ಗ್ರಂಥಗಳಲ್ಲಿ ಮುಖ್ಯವಾಗಿ ಜೈನ ಸಂಪ್ರದಾಯದ ಕೃತಿಗಳು, ವೈದಿಕ ಸಂಪ್ರದಾಯದ ಕೃತಿಗಳು ಮತ್ತು ವೀರಶೈವ ಸಂಪ್ರದಾಯದ ಕೃತಿಗಳು ಕಂಡುಬರುತ್ತವೆ. ಕನ್ನಡ ವೈದ್ಯಶಾಸ್ತ್ರ

ಕೃತಿಗಳ ಪರಂಪರೆ ಆರಂಭಗೊಳ್ಳುವುದೇ ಜೈನಗ್ರಂಥಗಳಿಂದ. ಕನ್ನಡ ಭಾಷೆಯಲ್ಲಿ ರಚಿಸಲ್ಪಟ್ಟ ಇದುವರೆಗೂ ಉಪಲಬ್ದ ಮೊಟ್ಟಮೊದಲ ಕೃತಿ ಶ್ರೀವಿಜಯನ ಕವಿರಾಜಮಾರ್ಗ. ಆದರೆ ಕವಿರಾಜಮಾರ್ಗ ಪೂರ್ವ ಕಾಲದಿಂದಲೂ ಕನ್ನಡ ಸಾಹಿತ್ಯ ಲೋಕದಲ್ಲಿ ಶಾಸ್ತ್ರ ಕೃತಿಗಳು ಮನುಷ್ಯನ ಬದುಕಿಗೆ ಬೇಕಾದ ಅಗತ್ಯ ವಸ್ತುಗಳು, ಅನೇಕ ಜೀವಿಗಳ ಪರಿಚಯವನ್ನು ಹಾಗೂ ಅವುಗಳ ವಿವಿಧ ಆಯಾಮಗಳ ಕುರಿತಾದ ಜ್ಞಾನದ ಕಣಜವನ್ನೇ ನಮ್ಮ ಅನುಭವ ಕೋಶದಲ್ಲಿ ತುಂಬುತ್ತಾ ಬಂದಿವೆ. ಅಭೂತಪೂರ್ವ ಪರಂಪರೆಯನ್ನು ನಿರ್ಮಾಣ ಮಾಡಿವೆ. ಈ ಸಂದರ್ಭದಲ್ಲಿ ಎಂ.ಎಂ.ಕಲಬುರ್ಗಿ ಅವರ ಮಾತನ್ನು ಗಮನಿಸುವುದಾದರೆ "ರಾಷ್ಟ್ರಕೂಟ ನೃಪತುಂಗನ ಕವಿರಾಜಮಾರ್ಗ ಸೃಷ್ಟಿಗೆ ಪ್ರೇರಣೆ ನೀಡುವ ಮೂಲಕ ಕಾವ್ಯಶಾಸ್ತ್ರ ಪರಂಪರೆಯ ಗಂಗೋತ್ರಿ ಎನಿಸಿದಂತೆ, ಕಲ್ಯಾಣ ಚಾಲುಕ್ಯ ಜಯಸಿಂಹ (೧೦೪೨) ಕಾವ್ಯಾವಲೋಕನ, ಭಾಷಾಭೂಷಣ, ವಸ್ತುಕೋಶಗಳಂಥ ಕಾವ್ಯಶಾಸ್ತ್ರಗಳಲ್ಲದೆ, ಚಂದ್ರರಾಜನ ಮದನತಿಲಕ, ವಜ್ರಭಟ್ಟನ ವೀರಾವಳಿಗಳಂಥ ಬಿಡಿ ಕಾವ್ಯೇತರ ಶಾಸ್ತ್ರಗಳೂ, ಲೋಕೋಪಕಾರದಂಥ ಸಮಗ್ರ ಲೌಖಿಕ ಶಾಸ್ತ್ರವೂ ಹುಟ್ಟಲು ಪ್ರೇರಣೆ ನೀಡಿದೆ. ಹೆಚ್ಚಿನದಾಗಿ ತಾನೆ ಸಂಸ್ಕೃತದಲ್ಲಿ 'ಮಾನಸೊಲ್ಲಾಸ' ಹೆಸರಿನ ವಿಶ್ವಕೋಶ ರಚಿಸಿದ. ಮುಂದೆ ೮-೧೦ ವರ್ಷಗಳಲ್ಲಿಯೇ ಗೋವೈದ್ಯ, ಜಾತಕತಿಲಕ, ಕಲ್ಯಾಣಕಾರಕ ಹುಟ್ಟಿದುದು ಜಯಸಿಂಹನು ಸಾಹಿತ್ಯೇತರ ಶಾಸ್ತ್ರ ಸೃಷ್ಟಿಯ ದೊಡ್ಡ ಕನಸುಗಾರನೆಂದು ಸ್ಪಷ್ಟಪಡಿಸುತ್ತದೆ. ಈ ದೃಷ್ಟಿಯಿಂದ ಇವನು ಎರಡನೆಯ ನೃಪತುಂಗನೆನಿಸುತ್ತಾನೆ"[೧೮]. ಎಂಬ ಅಭಿಪ್ರಾಯ ಗಮನಾರ್ಹನಿಸಿದೆ. ಅಂದರೆ ಅನೇಕ ಶಾಸ್ತ್ರಗ್ರಂಥಗಳು ರಚಿತವಾಗಿದ್ದಂತೆ ತಿಳಿದುಬರುತ್ತದೆ. ಅದರಲ್ಲೂ ವೈದ್ಯಶಾಸ್ತ್ರಕ್ಕೆ ಸಂಬಂಧಸಿದಂತೆ ಅನೇಕ ಗ್ರಂಥಗಳಿದ್ದವೆಂದು ವಿದ್ವಾಂಸರು ಊಹಿಸಿದ್ದಾರೆ. ಕ್ರಿ.ಶ.೨ರಿಂದಲೇ ವೈದ್ಯಗ್ರಂಥಕರ್ತೃ ನಾಗಾರ್ಜುನ ಎಂಬುವವನ ಹೆಸರು ಕೇಳಿಬರುತ್ತದೆ. ಪೂಜ್ಯಪಾದನ ಸೋದರಳಿಯನಾದ ಈತನು 'ರಸವಾದ' ದಲ್ಲಿ ನುರಿತವನೂ ವೈದ್ಯಶಾಸ್ತ್ರದಲ್ಲಿ ನಿಪುಣನೂ ಆಗಿದ್ದನೆಂಬದು ತಿಳಿದುಬರುತ್ತದೆ. ಕವಿಚರಿತೆಕಾರರು ಹೇಳುವ "ನಾಗಾರ್ಜುನ ಕಕ್ಷಪುಟ" ಎಂಬ ವೈದ್ಯಗ್ರಂಥ ಈ ನಾಗರ್ಜುನದೇ ಆಗಿರುವ ಸಂಭವವಿದೆ ಎಂಬುದು ರಂ. ಶ್ರೀ. ಮುಗಳಿ ಅವರ ಅಭಿಪ್ರಾಯವಾಗಿದೆ. ಹೀಗಾಗಿ ಸುಮಾರು ಆರೇಳನೆಯ ಶತಮಾನದಷ್ಟೊತ್ತಿಗೆ ಶಾಸ್ತ್ರ ವಿಷಯ ಕುರಿತ ವ್ಯಾಖ್ಯಾನ ರೂಪವಾಗಿ ಈ ಬಗೆಯ ಹೊತ್ತಿಗೆಗಳು ರಚನೆಯಾಗಿರುವುದು ಅದರ ಪ್ರಾಚೀನತೆಯನ್ನು ಎತ್ತಿ ತೋರಿಸಬಲ್ಲದು.

ತುಂಬಲೂರಾಚಾರ್ಯನ ಕಾಲದಲ್ಲಿಯೇ ಇದ್ದ ಶ್ಯಾಮಕುಂದಾಚಾರ್ಯನು ಪ್ರಾಕೃತ ಸಂಸ್ಕೃತ ಹಾಗೂ ಕರ್ಣಾಟಕ ಭಾಷೆಯಲ್ಲಿ ಪ್ರಾಭೃತವನ್ನು ರಚಿಸಿದ್ದಾಗಿ ತಿಳಿದುಬರುತ್ತದೆ. ಈ ಕಾರಣಗಳಿಂದ ಜೈನ ಆಚಾರ್ಯರು ಕನ್ನಡದಲ್ಲಿ ಜೈನಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಕ್ರಿ.ಶ.೨೦೦೦ರಿಂದ ಬರೆಯತೊಡಗಿದರೆಂದು ರಂ.ಶ್ರೀ.ಮುಗಳಿಯವರು ಅಭಿಪ್ರಾಯ ಪಡುತ್ತಾರೆ"[೧೯]. ಅದೇನೇ ಇದ್ದರೂ ಕವಿರಾಜಮಾರ್ಗ ಪೂರ್ವದಲ್ಲಿ ವೈದ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳ ಸಾಲಿನಲ್ಲಿ ವೈದ್ಯಶಾಸ್ತ್ರ, ಅಶ್ವಶಾಸ್ತ್ರದಂಥ ಲೋಕಕ್ಕೆ ಹಿತವನ್ನು ಬಯಸುವ, ಜನಹಿತಕಾರಿ, ಸರ್ವಜನ ಸಮುದಾಯಕ್ಕೆ ಉಪಯೋಗವಾಗುವ ಲೌಕಿಕಶಾಸ್ತ್ರ ಕೃತಿಗಳು ಬರೆಯಲ್ಪಟ್ಟಿದ್ದವು ಎಂಬುದನ್ನು ಗಮನಿಸಬೇಕು. ಆದರೆ ಅವುಗಳು ದೊರೆಯದಿರುವುದು ವೈದ್ಯಶಾಸ್ತ್ರ ಪರಂಪರೆಗೆ ನಷ್ಟ ಎಂದೇ ಹೇಳಬೇಕು.

ಕ್ರಿ.ಶ. ಹನ್ನೊಂದು ಮತ್ತು ಹನ್ನೆರಡನೆಯ ಶತಮಾನಗಳು ಕರ್ನಾಟಕದ ಇತಿಹಾಸದಲ್ಲಿ ಸುಖಸಂಪತ್ತಿನ ಕಾಲ. ಅನೇಕ ರಾಜಮನೆತನಗಳು ಆಳ್ವಿಕೆ ಮಾಡುತ್ತಿದ್ದು ಸಾಹಿತ್ಯ, ಕಲೆ, ಮತ್ತು ಶಾಸ್ತ್ರಗಳಿಗೆ ಹೆಚ್ಚು ಪ್ರೋತ್ಸಾಹಕೊಟ್ಟ ತತ್ಪರಿಣಾಮವಾಗಿ ಅನೇಕ ಮಂದಿ ಶಾಸ್ತ್ರಜ್ಞರು ರಾಜಾಶ್ರಯದಲ್ಲಿದ್ದು ಗ್ರಂಥಗಳನ್ನು ರಚಿಸಿದರು.

ಚಾಲುಕ್ಯರಾಜ ಜಯಸಿಂಹನ ಸಾಮಂತ ರಾಜರಲ್ಲೊಬ್ಬನ ಆಸ್ಥಾನದಲ್ಲಿ ಚಂದ್ರರಾಜನೆಂಬ ಬ್ರಾಹ್ಮಣ ಕವಿಯೊಬ್ಬನಿದ್ದನು (ಕ್ರಿ.ಶ.೧೦೪೯) ಇವನಿಗೆ ವೈದ್ಯಶಾಸ್ತ್ರವಲ್ಲದೆ ಇನ್ನೂ ಅನೇಕ ಶಾಸ್ತ್ರಗಳಲ್ಲಿ ಪಾಂಡಿತ್ಯವಿತ್ತೆಂಬುದು ಗ್ರಹಿಕೆಗೆ ಬರುತ್ತದೆ. "ಸಕಲ ವ್ಯಾಕರಣಾರ್ಥಶಾಸ್ತ್ರ ಗಣಿತಾಲಂಕಾರ ಸತ್ಕಾವ್ಯ ನಾಟಕ ವಾತ್ಸಾಯನ ನೃತ್ಯಗೀತ ಹಯಶಾಸ್ತ್ರದ್ವೈತ ಗಾಂಧರ್ವ ತಾರ್ಕಿಕರ ವಿಂದ್ರಾಗಮ ವೈದ್ಯವಾದ್ಯ ಶಕುನೋದ್ಯೂತ ಹೃದ್ಯ ವಿದ್ಯಾಕದಂಬಕ"ನೆಂಬ ಆತನ ವಾಕ್ಯದಿಂದಲೇ ಸ್ಪಷ್ಟಪಡುತ್ತದೆ. ಇವನು 'ಮದನ ತಿಲಕ ' ಹಯಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾನೆ. ಹಯಶಾಸ್ತ್ರ, ಲಭ್ಯವಾಗಿಲ್ಲ[೨೦].

ಕ್ರಿ.ಶ.ಸು.೧೧೦೦ರಲ್ಲಿ ರಚಿತವಾದ ಕೀರ್ತಿವರ್ಮನ ಗೋವೈದ್ಯವೇ ವೈದ್ಯಶಾಸ್ತ್ರದ ಪ್ರಾಚೀನ ಕೃತಿ. ಈತನ ಕುರಿತಾಗಿ ಮಾಹಿತಿಯು ಈ ಕೆಳಿಗನ ಪದ್ಯದಿಂದ ತಿಳಿದುಬರುತ್ತದೆ.

ಜಿನನಾಪ್ತಂ ಗುರು ದೇವಚಂದ್ರಮುನಿಪಂ ತ್ರೈಲೋಕ್ಯಮಲ್ಲಾಧಿಪಂ।
ಜನಕಂ ಪಾಲಭವಂದ್ಯ....ವಾಕ್ಫೀವರಂ ವಿಕ್ರಮಾಂ॥
ಕನರೇಂದ್ರಂ ತನಗಗ್ರಜಾತನೆನಲಂತಾರ್ ನೋಂತರೀಕೀರ್ತಿವ।
ರ್ಮನರೇಂದ್ರಂಬರಮೆಂದು ಧಾತ್ರಿ ಪೊಗಟ್ಗಿಂ ನಿಶ್ಚಮಹೋತ್ಸಾಹದಿಂ॥

ಈತನ ತಂದೆ ತ್ರೈಲೋಕ್ಯಮಲ್ಲಾಧಿಪ, ಅಣ್ಣ ವಿಕ್ರಮಾಂಕನರೇಂದ್ರ, ಗುರು ದೇವಚಂದ್ರಮುನಿ. ಇಷ್ಟದೇವತೆ ಜಿನ. ಇದರಿಂದ ಕೀರ್ತಿವರ್ಮನು ಚಾಳುಕ್ಯರಾಜನ ವಂಶದಲ್ಲಿ ಹುಟ್ಟಿದವನೆಂದು ವ್ಯಕ್ತವಾಗುತ್ತದೆ. ಆ ರಾಜ್ಯದಲ್ಲಿ ತ್ರೈಲೋಕ್ಯಮಲ್ಲನು ೧೦೪೨ ರಿಂದ ೧೦೬೮ರ ವರೆಗೆ ಆಳಿದಂತೆಯೂ ಅವನ ಮಗನಾದ ವಿಕ್ರಮಾದಿತ್ಯನು ಕ್ರಿ.ಶ.೧೦೭೬-೧೧೨೬ರವರೆಗೆ ಆಳಿದಂತೆಯೂ ತಿಳಿಯುತ್ತದೆ. ಈ ವಿಕ್ರಮಾದಿತ್ಯನೇ ಕವಿಯ ಅಣ್ಣನಾಗಿರಬೇಕು ಅದುದರಿಂದ ಕವಿ ಸುಮಾರು ಕ್ರಿ.ಶ.೧೧೦೦ರಲ್ಲಿ ಇದ್ದಿರಬಹುದು. ಮೇಲೆ ಹೇಳಿದ ವಿಕ್ರಮಾದಿತ್ಯನಿಗೆ ಜಯಸಿಂಹ III, ವಿಷ್ಣುವರ್ಧನ ವಿಜಯಾದಿತ್ಯ ಎಂಬ ಇಬ್ಬರು ತಮ್ಮಂದಿರಿದ್ದರು. ಇವರಲ್ಲಿ ಕವಿ ಒಬ್ಬನಾಗಿರುಬಹುದೋ ಏನೋ ತಿಳಿಯದು. ತ್ರೈಲೋಕ್ಯಮಲ್ಲನಿಗೆ ಕೇತಲದೇವಿಯೆಂಬ ಜೈನಧರ್ಮಾನು ಸಾರಿಣಿಯಾದ ಪತ್ನಿಯೊಬ್ಬಳು ಇದ್ದಂತೆಯೂ ಆಕೆ ಕೆಲವು ಜಿನಾಲಯಗಳನ್ನು ಕಟ್ಟಿಸಿದಂತೆಯೂ ತಿಳಿದುಬರುತ್ತದೆ. ಕವಿ 'ಜಿನನಾಪ್ತಂ' ಎಂದು ಹೇಳಿಕೊಂಡಿರುವುದರಿಂದ ಈಕೆಯ ಮಗನಾಗಿದ್ದಿರಬಹುದು"[೨೧] ಕವಿಚರಿತೆಕಾರರು ಊಹಿಸಿದ್ದಾರೆ.

ಮನುಷ್ಯ ವೈದ್ಯಕ್ಕೆ ಸಂಬಂಧಿಸಿದ ಸಮಗ್ರ ಗ್ರಂಥಗಳಲ್ಲಿ ಜಗದ್ದಳ ಸೋಮನಾಥ ನಿರೂಪಿಸಿದ 'ಕರ್ನಾಟಕ ಕಲ್ಯಾಣಕಾರಕ' ಮೊದಲ ಆಧ್ಯ ಕೃತಿ. ಕೃತಿಯ ಕಾಲ ಕ್ರಿ.ಶ.ಸು. ೧೧೭೫. ಕವಿ ಜೈನನಾದ ಕಾರಣ ಚಂದ್ರನಾಥನ ಸ್ತುತಿಯಿಂದ ಕೃತಿ ಆರಂಭವಾಗುತ್ತದೆ. ಈತನು ಕವಿತಾಶಕ್ತಿಯಲ್ಲಿ ಸಿದ್ಧಹಸ್ತನಾಗಿ ವಿಚಿತ್ರಕವಿ ಎಂಬ ಪ್ರಶಸ್ತಿಯನ್ನು ಪಡೆದಿದ್ದನು.

ಈ ಕೃತಿಯನ್ನು ಅಭಯಚಂದ್ರ ಸಿದ್ಧಾಂತಿಗಳು ಮತ್ತು ಸುಮನೋಬಾಣರು ಪರಿಸ್ಕರಿಸಿರುವರೆಂದೂ ಕವಿ ಹೇಳುವುದರಿಂದ ಇವರ ಕಾಲದವನು ಎಂಬುದು ವ್ಯಕ್ತವಾಗುತ್ತದೆ. ಸುಮನೋಬಾಣನು ಸುಮಾರು ೧೧೭೫ರಲ್ಲಿ ಇದ್ದುದಾಗಿ ತಿಳಿಯುವುದರಿಂದ ಕವಿಯ ಕಾಲವು ಅದೇ ಆಗಿರಬೇಕು ಎಂದು ಕವಿಚರಿತೆಕಾರರು ಹೇಳುತ್ತಾರೆ.

ಕ್ರಿ.ಶ.೧೧೬೦ರಲ್ಲಿ ವೈದ್ಯಸಂಗಣ್ಣ ಎಂಬ ವೀರಶೈವ ವಚನಕಾರನನ್ನು ಎಂದು ಸಂಭೋದಿಸಿರುವುದರಿಂದ ಇವನು ವೈದ್ಯ ವೃತ್ತಿಯನ್ನು ಕೈಗೊಂಡವನಾಗಿರಬೇಕೆಂದು ಊಹಿಸಬಹುದು. ಗ್ರಂಥಗಳನ್ನು ರಚಿಸಿದ್ದಾನೋ ಇಲ್ಲವೋ ಎಂಬುದು ತಿಳಿದುಬಂದಿಲ್ಲ. ವೈದ್ಯ ಕುರಿತ ವಚನಗಳು ಲಭ್ಯವಾಗಿವೆ.

ಹದಿಮೂರನೆಯ ಶತಮಾನದ ಆದಿ ಭಾಗದಲ್ಲಿ ಮಕ್ಕಳಿಗೆ ಕಾಡುವ ಬಾಲಗ್ರಹದ ಬಗೆಗೆ ಪ್ರತ್ಯೇಕವಾದ ಗ್ರಂಥವೊಂದು ದೇವೆಂದ್ರ ಮುನಿಯಿಂದ (ಕ್ರಿ.ಶ.೧೨೦೦) ರಚಿಸಲ್ಪಟ್ಟಿದೆ. ಇದು ಬಾಲವೈದ್ಯ ಅಥವಾ ಬಾಲಗ್ರಹ ಚಿಕಿತ್ಸೆ ಎಂಬ ಹೆಸರುಗಳಿಂದ ಕಂಡುಬರುತ್ತದೆ. ಇವನು ಜೈನಕವಿ. ಇದೇ ಕಾಲದಲ್ಲಿ ಮಲದಾರಿ ದೇವನು ವೈದ್ಯ ವಿದ್ಯೆಯಲ್ಲಿ ನಿಪುಣನಾಗಿದ್ದು ರಾಜಮಾನ್ಯತೆಯನ್ನು ಪಡೆದಿದ್ದನಂತೆ ಇವನ ಕೃತಿಗಳಾವುವು ದೊರೆತಿಲ್ಲ"[೨೨].

ಕ್ರಿ.ಶ.ಸು.೧೩೦೦ರಲ್ಲಿ ಅಮೃತನಂದಿ ಎಂಬ ಜೈನಕವಿಯೊಬ್ಬನು 'ಅಕಾರದಿ ವೈದ್ಯ ನಿಘಂಟು' ಎಂಬ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಸಂಸ್ಕೃತ ಶಬ್ದಗಳಿಗೆ ಕನ್ನಡ ಭಾಷೆಯ ಹೆಸರನ್ನು ಹೇಳಲಾಗಿದೆ. ಇದನ್ನು ಡಾ.ವೈ.ಸಿ. ಭಾನುಮತಿ ಅವರು ಪ್ರಕಟಿಸಲು ಕೈಗೆತ್ತಿಕೊಂಡಿದ್ದಾರೆ.

ವಿಜಯನಗರದ ಒಂದನೆಯ ಹರಿಹರರಾಯನ ಆಶ್ರಿತ ರಾಜರಲ್ಲೊಬ್ಬನಾದ ಮಂಗರಾಜ (ಕ್ರಿ.ಶ.ಸು.೧೩೬೦)ನೆಂಬುವನು ಹೊಯ್ಸಳ ರಾಜ್ಯದ ಮುಗಳೀಪುರದ ಮಂಗವಿಭು. ಜೈನ ಮತಾವಲಂಬಿಯಾಗಿದ್ದ ಈತನು ಸಮಂತಭದ್ರ, ಸೋಮಸಮಕೀರ್ತಿ, ಪೂಜ್ಯಪಾದರನ್ನೂ ಸುತ್ತಿಸಿರುವದರಿಂದ ಇವನ ಗುರು ಪೂಜ್ಯಪಾದರು ಇರುವುದು ಈ ಪದ್ಯದಿಂದ ತಿಳಿಯುತ್ತದೆ.

ಅಧಿಗತತತ್ವರುವಿತರೌಂದ್ರರೆನಿಪ್ಪ ಸಮಂತಭದ್ರರಂ
ಮಧುರ ಮನೋಹರಾಂಗ ವಿನಯೋಕ್ತ ನಯಾರ್ಥವಚಃ ಪ್ರಯುಕ್ತರಂ
ವಿಧುನಿಭಕೀರ್ತಿಸುಯಂ ಪವಿತ್ರರನೂರ್ಜಿತ ಪುಣ್ಯಪಾತ್ರರಂ
ಬುಧತತಿವಂದ್ಯರಂ ಪೊಗಟ್ವೆನಾದರದಿಂದಮೆ ಪೂಜ್ಯಪಾದರಂ"[೨೩]

ತತ್ವಜ್ಞಾನಿಗಳೂ ಸೌಮ್ಯಸ್ವಭಾವದವರೂ ಆದ ಸಮಂತಭದ್ರರನ್ನೂ, ಕಾಂತಿಯಿಂದ ಕೂಡಿದ ಕೋಮಲ ಶರೀರರೂ ನಯವಿನಯ ಅರ್ಥವಚನದಿಂದ ಕೂಡಿದವರೂ, ಸೋಮಸಮಕೀರ್ತಿ ಸಂಯಮಗಳಿಂದ ಕೂಡಿ ಪವಿತ್ರರೂ ಪೂಜ್ಯಪಾತ್ರರೂ ಬುಧಸಮೂಹದಿಂದ ವಂದಿತರೂ ಆದ ಪೂಜ್ಯಪಾದರನ್ನೂ ಅತಿ ಪ್ರೀತಿಯಿಂದ ಸ್ತುತಿಸುತ್ತೇನೆ. ಎಂದು 'ಖಗೇಂದ್ರಮಣಿಮಣಿ ದರ್ಪಣಂ' ಎಂಬ ವಿಷವೈದ್ಯ ಗ್ರಂಥ ಬರೆದಿದ್ದಾನೆ. ಈ ಕೃತಿಯನ್ನು ಬಿ.ಎಸ್.ಸಣ್ಣಯ್ಯ ಅವರು ೨೦೦೪ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ.

ಕವಿಚರಿತೆಕಾರರು ಊಹಿಸಿದಂತೆ ಕ್ರಿ.ಶ.ಸುಮಾರು ೧೫೦೦ರಲ್ಲಿ ರಚನೆಯಾದ 'ವೈದ್ಯಾಮೃತ ಗ್ರಂಥದ ಕರ್ತೃ ಶ್ರೀಧರದೇವ. ಇವನ ಮತ ಜೈನ ಮತ. ಜಗದೇಕ ಮಹಾಮಂತ್ರವಾದಿ ಎಂದು ತನ್ನನ್ನು ವಿಶ್ಲೇಷಿಸಿ

ಹೇಳಿಕೊಂಡಿದ್ದಾನೆ. ಮುನಿ ಚಂದ್ರದೇವನ ಇಷ್ಟಾನುಸಾರ ಈ ಗ್ರಂಥವನ್ನು ರಚಿಸಿದಂತೆ ತಿಳಿಯುತ್ತದೆ. ಕವಿಯ ವಿಷಯವಾಗಿ ಹಸ್ತಪ್ರತಿಯಲ್ಲಿ ಇನ್ನೇನು ತಿಳಿಯುವುದಿಲ್ಲ. 'ವೈದ್ಯಾಮೃತಮಂ ಬಾಲವೃದ್ಧರಜೀವಂತೆ ಮನಮೊಸೆದು ಪೇಳಿ' ಎಂದು ಹೇಳುತ್ತಾ ಹೊಸಗನ್ನಡದಲ್ಲಿ ಬರೆದುದಾಗಿ ಹೇಳಿಕೊಂಡಿದ್ದಾನೆ.

ಹದಿನೈದನೆಯ ಶತಮಾನದಲ್ಲಿ ರಚಿತವಾಗಿರಬಹುದೆಂದು ಊಹಿಸಲಾದ 'ವೈದ್ಯಚಿಂತಾಮಣಿ' ಗ್ರಂಥವನ್ನು ವಲ್ಲಬೇಂದ್ರನು ರಚಿಸಿದ್ದಾನೆ. ಗ್ರಂಥಾರಂಭದಲ್ಲಿ ರಾಮಾನುಜಸ್ತುತಿ ಇರುವುದರಿಂದ ಶ್ರೀವೈಷ್ಣವನೆಂದು ತಿಳಿಯಬಹುದು. ಇವನ ತಂದೆಯ ಹೆಸರು ಅಮರೇಶ್ವರಭಟ್ಟ. ಈ ಕೃತಿ ಮತ್ತು ಕರ್ತೃ ಬಗೆಗೆ ಗ್ರಂಥಾಂತ್ಯದ ಸಾಲುಗಳಿಂದ ತಿಳಿಯುತ್ತದೆ.

ಬಾಚರಸನೆಂಬ ಶಾಸ್ತ್ರಜ್ಞ 'ಅಶ್ವವೈದ್ಯ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇವನು ಜೈನಕವಿ ಎಂದು ತೋರುತ್ತದೆ. ಇವನ ತಂದೆ ಚೌಂಡರಸ. ಇವನಿಗೆ 'ಸುಜನೈಕ ಬಾಂಧವ' ಎಂಬ ಬಿರುದಿದ್ದಂತೆ ತಿಳಿಯುತ್ತದೆ. ಇವನ ಕಾಲ ಸುಮಾರು ೧೫೦೦ ಆಗಿರಬಹುದು"[೨೪] ಎಂದು ಕವಿಚರಿತೆಕಾರರು ಊಹಿಸಿದ್ದಾರೆ.

ಕ್ರಿ.ಶ.ಸುಮಾರು ೧೫೭೦ರಲ್ಲಿ ಶ್ರೀನರಸಿಂಹ ಶಾಸ್ತ್ರಿ ಎಂಬ ವೈದ್ಯಶ್ರೇಷ್ಠನಿಂದ ರಚಿತವಾದ 'ವೈದ್ಯಸಾರ ಸಂಗ್ರಹ' ಗ್ರಂಥವು ೧೪ ಪ್ರಕರಣಗಳ ಗ್ರಂಥವಾಗಿದ್ದು, ಇದು ಈಗಾಗಲೇ ಪ್ರಕಟವಾಗಿದೆ. ಇವನು ತನ್ನನ್ನು ಪ್ರಕಟಣ ಸಮಾಪ್ತಿ ವಚನಗಳಲ್ಲಿ 'ಸರ್ವವಿದ್ಯಾ ವಿಶಾರದ' ಎಂಬ ಬಿರುದಿನಿಂದ ಕರೆದುಕೊಂಡಿದ್ದಾನೆ. ಪ್ರಕರಣ ಸಮಾಪ್ತಿ ವಚನಗಳು ಹೊರತು ಕವಿಯ ವಿಷಯವನ್ನು ತಿಳಿಸುವ ಬೇರಾವ ಪುರಾವೆಗಳು ಈ ಗ್ರಂಥದಲ್ಲಿ ಸಿಗುವುದಿಲ್ಲ. ನಾಲ್ಕನೆಯ ಪ್ರಕರಣದ ಸಮಾಪ್ತಿ ವಚನದಲ್ಲಿ ಇವನು ತಾನು ನಂಜುನಾಥಾತ್ಮಜನೆಂದು ಹೇಳಿಕೊಂಡಿರುವನು. ತಾನು ವಾಸವಾಗಿದ್ದ ಪ್ರದೇಶವನ್ನು 'ಕರ್ಣಾಟಕದೇಶಾಂತರ್ಗತ ಹೌಸಣದೇಶ ಮಧ್ಯೋಲ್ಲಸತ್ ಸ್ವರ್ಣನದೀತೀರವಿಲಸಿತ ಬಾಲಚಂದ್ರಪುರಸ್ಥಿತ' ಎಂದು ನಾಲ್ಕರಿಂದ ಹದಿನಾಲ್ಕನೇ ಪ್ರಕರಣಗಳವರೆಗಿನ ಸಮಾಪ್ತಿ ವಾಕ್ಯಗಳಲ್ಲಿ ಹೇಳಿಕೊಂಡಿರುವನು"[೨೫] ಎಂದು ಸಂಪಾದಕರು ಹೇಳಿದ್ದಾರೆ. ಅಂದರೆ ಬಾಲಚಂದ್ರಪುರದಲ್ಲಿ (ಯಳಂದೂರು) ಚನ್ನರಾಜನೆಂಬಾತ ಆಳುತ್ತಿದ್ದನು. ಅವನ ಆಸ್ಥಾನ ಕವಿ ನರಸಿಂಹಶಾಸ್ತ್ರಿಗಳಿಂದ ಈ ಗ್ರಂಥ ರಚಿಸಲ್ಪಟ್ಟಿದೆ ಎಂಬುದು ಗಮನೀಯ.

ಕ್ರಿ.ಶ.ಸು. ೧೫೫೦ ರಲ್ಲಿ ಸಾಳ್ವನಿಂದ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ 'ವೈದ್ಯಸಾಂಗತ್ಯ' ಅಥವಾ 'ಸಾಳ್ವಸಾಂಗತ್ಯ' ಎಂಬ ಕೃತಿ ರಚಿಸಲ್ಪಟ್ಟಿದೆ. ಈತನ ತಂದೆ ಧರ್ಮಚಂದ್ರ, ಗುರು ಶ್ರುತಕೀರ್ತಿ ಎಂದು ಹೇಳುವುದರಿಂದ ಕವಿ ಜೈನನೆಂಬುದು ಸ್ಪಷ್ಟ. ಸಾಳ್ವಕವಿಯು ಸಾಜಕವಿ, ಕರ್ನಾಟಕ ಲಕ್ಷಣದೋಜ ಎಂಬ ಬಿರುದುಗಳೊಂದಿಗೆ ವೈದ್ಯಸಾಂಗತ್ಯ ರಚನೆಗೆ ಕೈಹಾಕಿದಂತೆ ಕಾಣುತ್ತದೆ.

ವೀರಭದ್ರರಾಜನು ಪಾಲಕಾಪ್ಯಕೃತ ಹಸ್ತಾಯುರ್ವೇದಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ. ಇವನು ರಾಜವಂಶಕ್ಕೆ ಸೇರಿದವನು. ಇವನ ತಂದೆ ನೃಸಿಂಹರಾಜ, ತಾಯಿ ವೀರಾಂಬೆ. ಕವಿಯ ವಿಷಯವಾಗಿ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಈತನು ಸುಮಾರು ೧೬೦೦ರಲ್ಲಿ ಇದ್ದಿರಬಹುದೆಂದು"[೨೬]. ಕವಿಚರಿತೆಕಾರರು ಊಹಿಸಿದ್ದಾರೆ.

ಕ್ರಿ.ಶ.ಸುಮಾರು ೧೭೦೦ರ ಸುಮಾರಿನಲ್ಲಿ ರಚಿತವಾಗಿರಬಹುದೆಂದು ಊಹಿಸಬಹುದಾದ ವೈದ್ಯಕೀಯ ನಿಘಂಟು ಗ್ರಂಥವೊಂದನ್ನು 'ಓಷಧಿಕೋಶ' ಎಂಬ ಹೆಸರಿನಲ್ಲಿ ಮದರಾಸು ಸರ್ಕಾರದವರು ತಮ್ಮ

ಪ್ರಾಚ್ಯವಿದ್ಯಾ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದಾರೆ. ಕರ್ತೃವಿನ ಹೆಸರು ತಿಳಿದುಬಂದಿರುವುದಿಲ್ಲ ಎಂದು ಸಂಪಾದಕರು ತಿಳಿಸುತ್ತಾರೆ. ಆದರೆ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ದೊರೆಯುವ ಆಕಾರಾದಿವೈದ್ಯ ನಿಘಂಟು ಎನ್ನುವ ಕೃತಿಯು ಹಸ್ತಪ್ರತಿ ಸಂಖ್ಯೆ ಕೆ೧೩೨, ಕೆ೧೬೪.೧ ಕೆಬಿ೧೧೮ ಮತ್ತು ಕನ್ನಡ ಅಧ್ಯಯನ ಕೇಂದ್ರ ಬೆಂಗಳೂರು ಹಸ್ತಪ್ರತಿ ಭಂಡಾರದಲ್ಲಿ ಲಭ್ಯವಿರುವ ಕೆ೧೨೬.೧ ನಂಬರಿನ ಹಸ್ತಪ್ರತಿಗಳು ಲಕ್ಷ್ಮಣ ಪಂಡಿತನಿಂದ ಕ್ರಿ.ಶ.ಸು. ೧೭೭೫ರಲ್ಲಿ ರಚನೆಯಾಗಿರಬೇಕು. ಒಂದೇ ತೆರನಾಗಿರುವುದರಿಂದ ಈ ಕೃತಿಯ ಹೆಸರು. ಅಕಾರಾದಿ ವೈದ್ಯನಿಘಂಟು, ಔಷಧಿಕೋಶ ಒಂದೇ ಆಗಿರಬೇಕು ಎಂದೆನಿಸುತ್ತದೆ.

'ಸಕಲವೈದ್ಯಸಂಹಿತಾಸಾರಾರ್ಣವ' ಅಥವಾ 'ವೀರರಾಜೇಂದ್ರೋಕ್ತಿ ವಿಲಾಸ' ಎಂಬುದು ಕಳಲೆಯ ರಾಜನಾಗಿದ್ದ ವೀರರಾಜನಿಂದ ರಚಿತವಾಗಿದೆ. "ವೀರರಾಜನು ಕಳಲೆಯ ಪ್ರಭು. ಈತನ ಕಾಲನಿರ್ಣಯಕ್ಕೆ ಗ್ರಂಥದಲ್ಲಿ ಯಾವ ಆಧಾರಗಳು ದೊರೆಯುವುದಿಲ್ಲ. 'ಕಳಲೆ ಅರಸುಗಳ ವಂಶಾವಳಿ' (ಕೆಬಿ ೨೩೪ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ.) ಯಲ್ಲಿ ದೊರೆಯುವ ಆಧಾರದಿಂದ ಹೇಳುವುದಾದರೆ ಈತನ ತಂದೆ ದೊಡ್ಡರಾಜನು ಕಳಲೆರಾಜ್ಯವನ್ನು ಬಿಟ್ಟು ಮೈಸೂರು ಚಿಕ್ಕದೇವರಾಜನಲ್ಲಿ (೧೬೭೯-೧೭೦೪) ದಳವಾಯಿ ಪದವಿಯನ್ನು ಹೊಂದಿದ್ದನು. ಈ ದಳವಾಯಿ ದೊಡ್ಡರಾಜನ ಮಗನೇ ಈ ಗ್ರಂಥಕರ್ತ ಅಥವಾ ಗ್ರಂಥಪ್ರೇರಕ ವೀರರಾಜನಾಗಿದ್ದಾನೆ. ಈ ಆಧಾರದ ಮೇಲೆ ಈತನ ಕಾಲವನ್ನು ಕ್ರಿ.ಶ.ಸು.೧೭೨೦ ಎಂದು ನಿರ್ಣಯಿಸಬಹುದಾಗಿದೆ"[೨]. ಈ ಗ್ರಂಥವು ಕನ್ನಡ ಹಾಗು ಅಲ್ಲಲ್ಲಿ ತೆಲುಗು ಭಾಷೆಯಲ್ಲಿ ರಚನೆಯಾಗಿದೆ. ಈ ಗ್ರಂಥ ಕನ್ನಡದಲ್ಲೆ ಅತ್ಯಂತ ದೊಡ್ಡ ಪ್ರಮಾಣದ ವೈದ್ಯಗ್ರಂಥ.

ವೀರರಾಜನ ಮಗ ನಂಜರಾಜಭೂಪಾಲನು ತಂದೆಯ ಮೇಲ್ಪಂಕ್ತಿಯನ್ನೇ ಅನುಸರಿಸಿ 'ವೈದ್ಯಸಾರ ಸಂಗ್ರಹ' ಎಂಬ ಗ್ರಂಥವನ್ನು ೧೭೪೦ ರಲ್ಲಿ ರಚಿಸಿರುವುದಾಗಿ ತಿಳಿದುಬರುತ್ತದೆ. ಆದರೆ ಈತನು ಸ್ವತಂತ್ರವಾಗಿ ರಚಿಸದೆ ನರಸಿಂಹಶಾಸ್ತ್ರಿಗಳ ವೈದ್ಯಸಾರ ಸಂಗ್ರಹವನ್ನೆ ತನ್ನ ಪ್ರಖ್ಯಾತಿಗಾಗಿ ಹೆಸರನ್ನು ಬದಲಾಯಿಸಿಕೊಂಡಿರುವುದಾಗಿ ತಿಳಿದು ಬರುತ್ತದೆ. ಈತ ತನ್ನನ್ನು "ಕವಿಲಾಕೌಂಡಿನೀ ಸಂಗಮ ಕ್ಷೇತ್ರನಿವಾಸ ನಂಜುಂಡೇಶ ಕೃಪಾಲಬ್ಧವಿಭವಂ ಶಾಂಕೂರ ಪುವರಾಧೀಶಂ" ಎಂದು ಹೇಳಿಕೊಂಡಿರುವುದರಿಂದ ಈತನು ವೀರರಾಜನ ಮಗನೇ ಕಳಲೆಯ ಅರಸನು ಆಗಿರಬೇಕು.

ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಚಿಕುಪಾಧ್ಯಾಯ 'ಆರೋಗ್ಯಾಮೃತ'ವೆಂಬ 'ಕರ್ಣಾಟ ವೈದ್ಯಸಾರ ಸಂಗ್ರಹ' ಎಂಬ ಗದ್ಯಗ್ರಂಥವನ್ನು ಬರೆದಿದ್ದಾನೆ. ಈತನು ಶಿವ ವೀರಭದ್ರ, ಸಾಸಲಸೋಮೇಶ್ವರನನ್ನು ಸ್ತುತಿಸಿರುವುದರಿಂದ ಈತನು ವೀರಶೈವ ಕವಿ. ಈತನು ತನ್ನ ಗ್ರಂಥದಲ್ಲಿ ವೀರರಾಜನ ಕೃತಿಯಿಂದ ನಾಡೀ ಪರೀಕ್ಷೆಯ ಭಾಗವನ್ನು ಸಂಗ್ರಹಿಸಿದ್ದೇನೆ ಎಂದು ಹೇಳಿರುವುದರಿಂದ ವೀರರಾಜನ ಕಾಲ ೧೭೨೦ಆಗಿದ್ದರಿಂದ ಇವನ ಕಾಲವನ್ನು ೧೭೪೦ ಎಂದು ನಿರ್ಣಯಿಸಬಹುದು.

ಕವಿಚರಿತೆಕಾರರು ಊಹಿಸಿದಂತೆ ೧೭೫೦ರಲ್ಲಿದ್ದ ಬೊಮ್ಮಯ್ಯನು 'ವೈದ್ಯಕಂದ' ಎಂಬ ಕೃತಿ ರಚಿಸಿದ್ದಾನೆ. ಈ ಕೃತಿಯನ್ನು ಬಿ.ಎಸ್.ಸಣ್ಣಯ್ಯ ಅವರು ಸಂಪಾದಿಸಿ ೧೯೯೧ರಲ್ಲಿ ಅಭಿನಂದನ ಪ್ರಕಾಶನ ಮೈಸೂರಿನಿಂದ ಪ್ರಕಟಿಸಿದ್ದಾರೆ. ಬೊಮ್ಮಯ್ಯ ಪಂಪಾಕ್ಷೇತ್ರದ ಪಶ್ಚಿಮದಲ್ಲಿರುವ ಬಳ್ಳಾರಿ ಜಿಲ್ಲೆಯ ಕೊಟ್ಟೂರು

ಸೀಮೆಯ ಇಟಗಿ ಎಂಬ ಗ್ರಾಮದವನು. ಈತನ ತಂದೆ ಹನಮಪ್ಪದಾಸ ತಾಯಿ ಭಾಗಾಂಬೆ. ಇಷ್ಟದೈವ ಭಂಡೆಯರಂಗ ಎಂದು ತಿಳಿದುಬರುತ್ತದೆ.

ತಿಮ್ಮರಾಜಗೌಡನು ೧೭೫೦ರಲ್ಲಿ 'ಸ್ತ್ರೀವೈದ್ಯ' ವೆಂಬ ಗ್ರಂಥವೊಂದನ್ನು ರಚಿಸಿದ್ದಾನೆ. ಇದರಲ್ಲಿ ಕೇವಲ ಐದು ಓಲೆಗಳಿವೆ. ವಾಕ್ಯರೂಪವಾಗಿದೆ. ಸ್ತ್ರೀಯರ ಕೆಲವು ಪ್ರಮಾಣವಾದ ರೋಗಗಳಿಗೆ ಔಷಧಯೋಗಗಳನ್ನು ಹೇಳಲಾಗಿದೆ ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ. ಈ ಕುರಿತು ಹಸ್ತಪ್ರತಿ ಈಗ ಲಭ್ಯವಿಲ್ಲ.

ಕ್ರಿ.ಶ.ಸು. ೧೭೪೯ರಲ್ಲಿ ಮೈಸೂರು ಒಡೆಯ ಇಮ್ಮಡಿ ಕೃಷ್ಣರಾಜನು ಪ್ರಾಚೀನ ಸಾಹಿತ್ಯ, ಶಾಸ್ತ್ರ ಗ್ರಂಥಗಳ ರಕ್ಷಣೆಯ ಹೊಣೆಗಾರಿಕೆ ಹೊತ್ತು ಪಂಡಿತರಿಂದ ಗ್ರಂಥಗಳನ್ನು ಬರೆಸಿದನು. ತಾನು ವಾಗ್ಭಟನ ಅಷ್ಟಾಂಗ ಹೃದಯವೆಂಬ ಗ್ರಂಥಕ್ಕೆ 'ಬಾಹಟ ಟೀಕೆ' ಎಂಬ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ಕುರಿತ ಅಸಮಗ್ರ ಹಸ್ತಪ್ರತಿಯೊಂದು ಕನ್ನಡ ಅಧ್ಯಯನ ಸಂಸ್ಥೆ ಮೈಸೂರಿನಲ್ಲಿ ಕೆ.ಬಿ.೨೦೧ ನಂಬರಿನ ಕಾಗದ ಪ್ರತಿ ಲಭ್ಯವಿದೆ.

ಹದಿನೆಂಟನೆಯ ಶತಮಾನದಲ್ಲಿ ರಚನೆಯಾಗಿರಬಹುದೆಂದು ನಂಬಲಾದ 'ಭೇಷಜಕಲ್ಪ' ಎಂಬ ವೈದ್ಯ ಗ್ರಂಥವನ್ನು ಗಂಗಾಧರನೆಂಬ ಪ್ರಸಿದ್ಧ ವೈದ್ಯ ಬರೆದಿದ್ದಾನೆ. ಈತನನ್ನು ಚಂನಣಾರ್ಯನ ಮಗನೂ ದೇಶಿಕೇಂದ್ರ ಮಠವೆಂದು ಪ್ರಸಿದ್ಧವಾಗಿರುವ ವೀರಶೈವ ಸಂಪ್ರದಾಯಸ್ಥ ವಂಶಕ್ಕೆ ಸೇರಿದವನೆಂದು ತಿಳಿಯಬಹುದಾಗಿದೆ.

ಕ್ರಿ.ಶ.೧೭೮೧ರಲ್ಲಿ ಶ್ರೀ ಮೋರೇಶ್ವರ ಎಂಬ ಕವಿ ವೈದ್ಯಾಮೃತ ಎಂಬ ಗ್ರಂಥವನ್ನು ರಚಿಸಿದ್ದಾನೆ. ಆರಂಭದಲ್ಲಿ "ಶ್ರೀಗುರುಭ್ಯೋನಮಃ ಎಂದಿರುವುದರಿಂದ ಈತನು ವೀರಶೈವ ಕವಿ ಆಗಿರಬೇಕು.

ಮೈಸೂರಿನಲ್ಲಿರುವ ಕನ್ನಡ ಅಧ್ಯಯನ ಸಂಸ್ಥೆ, ಹಸ್ತಪ್ರತಿ ಭಂಡಾರದಲ್ಲಿ ಲಭ್ಯವಿರುವ ತಾಳೆಪ್ರತಿ ಕೆ೩೫೧ ನಂಬರಿನ ವೈದ್ಯಪುಸ್ತಕವನ್ನು ಚನ್ನಬಸಪ್ಪ ರಚಿಸಿರುವುದಾಗಿ ತಿಳಿಯುತ್ತದೆ. ಕೆಬಿ ೩೫೫ರಲ್ಲಿ ಪದ್ಮರಾಜನಿಂದ ರಚಿತವಾದ 'ವೈದ್ಯಶಾಸ್ತ್ರ' ಕೃತಿ ಲಭ್ಯವಾಗಿದೆ. ಕನ್ನಡ ವಿಶ್ವವಿದ್ಯಾಲಯ ಕುಂದಣ ಹಸ್ತಪ್ರತಿ ಭಂಡಾರದಲ್ಲಿ ಇರುವ ಕಾಗದ ಪ್ರತಿ ಕೆಬಿಳ೨೬.೧ನಂಬರಿನ 'ವೈದ್ಯಶಾಸ್ತ್ರ' ವೆಂಬ ಕೃತಿ ರಂಗಪ್ಪ ಬಳಗಾನೂರು ಅವರಿಂದ ರಚಿಸಲ್ಪಟ್ಟಿದೆ ಎಂಬುದು ತಿಳಿದುಬರುತ್ತವೆ. ಆದರೆ ಇವುಗಳ ಕಾಲವನ್ನು ಕುರಿತು ಹಸ್ತಪ್ರತಿಗಳಲ್ಲಿ ಮಾಹಿತಿ ದೊರೆಯುವುದಿಲ್ಲ. ಈ ಹಸ್ತಪ್ರತಿಗಳು ಬರವಣಿಗೆ ಶೈಲಿ ಹಸ್ತಪ್ರತಿ ಸ್ವರೂಪಗಳಿಂದ ಗ್ರಂಥಗಳು ಹದಿನೆಂಟನೆಯ ಶತಮಾನದಲ್ಲಿಯೇ ರಚನೆಯಾಗಿದ್ದವುಗಳೆಂದು ಊಹಿಸಲು ಸಾಧ್ಯ. ಈ ಗ್ರಂಥಗಳ ಕುರಿತು ಆರ್.ನರಂಸಿಹಾಚಾರ್ಯ ಅವರೂ ಸಹ ಕವಿಚರಿತೆ ಸಂಪುಟಗಳಲ್ಲಿ ಪ್ರಸ್ತಾಪಿಸಿರುವುದಿಲ್ಲ. ಬಹುಶಃ ಕಾಲನಿರ್ಣಯಿಸುವುದರಲ್ಲಿ ತೊಡಕುಂಟಾಗಿರಬೇಕು.

ಮೇಲ್ಕಂಡ ವೈದ್ಯ ಕೃತಿಗಳಲ್ಲದೆ ವೈದ್ಯಪುಸ್ತಕ, ವೈದ್ಯಗ್ರಂಥ, ವೈದ್ಯಶಾಸ್ತ್ರ, ವೈದ್ಯ, ವೈದ್ಯಪ್ರಕಾಶ, ವೈದ್ಯಸಂಗ್ರಹ, ಚಿಕಿತ್ಸಾಗ್ರಂಥ ಇತ್ಯಾದಿ ಹೆಸರುಗಳಿಂದ ಪ್ರಾರಂಭವಾಗುವ ವಿಷಯ ವೈವಿಧ್ಯತೆಯನ್ನೊಳಗೊಂಡ, ಅಂತ್ಯವಿಲ್ಲದ ಕರ್ತೃವಿನ ಬಗೆಗೆ, ಕಾಲದ ಬಗೆಗೆ ಯಾವುದೇ ಮಾಹಿತಿ ಇಲ್ಲದ ನೂರಾರು ವೈದ್ಯಶಾಸ್ತ್ರ ಹಸ್ತಪ್ರತಿಗಳು ದೊರೆಯುತ್ತವೆ. ಇವೆಲ್ಲವುಗಳು ಕನ್ನಡ ವೈದ್ಯಶಾಸ್ತ್ರ ಸಾಹಿತ್ಯ ಪರಂಪರೆಯ ಶ್ರೀಮಂತಿಕೆಗೆ ಅಜ್ಞಾತವಾಗಿಯೇ ಉಳಿದುಕೊಂಡಿವೆ. ಇವುಗಳೆಲ್ಲನ್ನೂ ಸಂಗ್ರಹಿಸಿ ಸಂಶೋಧನೆಗೆ ಒಳಪಡಿಸಬೇಕಾಗಿದೆ.

ಉಪಲಬ್ಧವಿರುವ ಗ್ರಂಥಗಳಿಂದ ಕನ್ನಡದಲ್ಲಿ ವೈದ್ಯಶಾಸ್ತ್ರಗ್ರಂಥಗಳ ರಚನೆ ಸೃಷ್ಟಿಯಾದದ್ದು ಹನ್ನೊಂದನೆಯ ಶತಮಾನದಿಂದ ಈಚೆಗೆ ಎಂಬ ದಾಖಲೆಗಳಿದ್ದರೂ, ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಅನೇಕ

ವೈದ್ಯಶಾಸ್ತ್ರಜ್ಞರು ಆಗಿಹೋದುದರ ಕುರಿತು ದಾಖಲೆಗಳಿವೆ. ಕ್ರಿ.ಶ.೨ನೆಯ ಶತಮಾನದಲ್ಲಿ ಸಮಂತಭದ್ರನು ವೈದ್ಯಗ್ರಂಥಗಳನ್ನು ಬರೆದಿದ್ದನೆಂಬುದಕ್ಕೆ ಉಲ್ಲೇಖಗಳಿವೆ. ಐದನೆಯ ಶತಮಾನದಲ್ಲಿ ಪೂಜ್ಯಪಾದಾಚಾರ್ಯನು ವೈದ್ಯಗ್ರಂಥ ಬರೆದ ಕುರಿತು ಹೇಳಿಕೆಗಳಿದ್ದರೂ ಇವಾವವೂ ಇಂದು ನಮ್ಮ ಕಣ್ಮುಂದೆ ಇಲ್ಲ. ಎಂಟನೆಯ ಶತಮಾನದ ಉಗ್ರಾದಿತ್ಯನ ಕಲ್ಯಾಣಕಾರಕವೇ ಕರ್ನಾಟಕದಲ್ಲಿ ಪ್ರಸಿದ್ಧವಾದ ಮೊಟ್ಟಮೊದಲ ಸ್ವತಂತ್ರ ವೈದ್ಯಕೃತಿ. ಆದರೆ ಇದು ಸಂಸ್ಕೃತ ಭಾಷೆಯಲ್ಲಿ ರಚನೆಯಾಗಿದೆ. ಹೀಗೆ ಒಂಬತ್ತನೆಯ ಶತಮಾನಕ್ಕೆ ಹಿಂದಿನಿಂದಲೂ ಅನೇಕ ವೈದ್ಯಗ್ರಂಥಗಳು ಜೈನ ಕವಿಗಳಿಂದ ರಚಿತವಾಗಿದ್ದವೆಂದು ತಿಳಿಯುತ್ತದೆ. ಆದರೂ ಕನ್ನಡದಲ್ಲಿ ವ್ಯಾಖ್ಯಾನ ಗ್ರಂಥಗಳು ಲಭ್ಯವಾಗುತ್ತವೆ. ಅಲ್ಲದೆ ಸಂಸ್ಕೃತ ಗ್ರಂಥಗಳಿಗೆ ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆಯುವ ಸಂಪ್ರದಾಯವನ್ನು ಜೈನರು ಆರಂಭಿಸಿದರು. ಈ ಪರಂಪರೆ ಮುಂದುವರಿದುಕೊಂಡು ಬಂದಿರುವುದು ಗೋಚರಿಸುತ್ತದೆ. ಈ ಕಾರಣಕ್ಕಾಗಿಯೇನೋ ಸ್ಫೂರ್ತಿದಾಯಕವಾಗಿಯೋ ನಮಗೆ ಸ್ವತಂತ್ರ ಕೃತಿಗಳು ರಚನೆಯಾದವುಗಳು ಲಭ್ಯವಾಗಿವೆ. ಪ್ರಾರಂಭದಲ್ಲಿ ಸಂಸ್ಕೃತ ಗ್ರಂಥಗಳ ಅಧ್ಯಯನ ಆಧಾರದ ಮೇಲೆ ಗ್ರಂಥಗಳು ಸ್ವಲ್ಪ ಶಾಸ್ತ್ರಬದ್ಧವಾಗಿ ರಚನೆಯಾದವು. ತದನಂತರ ಶಾಸ್ತ್ರ ಬದ್ಧತೆ ಸರಳಗೊಂಡು ಪದ್ಯದ ಬದಲಾಗಿ ಗದ್ಯದಲ್ಲಿ ರಚನೆಯಾಗಿರುವುದು ಕಂಡುಬರುತ್ತದೆ. ಪ್ರಾರಂಭದಲ್ಲಿ ಪುರುಷ, ಸ್ತ್ರೀ, ಬಾಲವೈದ್ಯ ಕುರಿತು ಒಂದೇ ಗ್ರಂಥದಲ್ಲಿ ರಚನೆಯಾಗಿರುವ ಉಲ್ಲೇಖ ಸಿಗುತ್ತದೆ. ತದನಂತರ ಇವುಗಳ ಕುರಿತು ಪ್ರತ್ಯೇಕವಾದ ಗ್ರಂಥಗಳು ರಚನೆಗೊಂಡಿವೆ. ಹದಿನೇಳು ಹದಿನೆಂಟನೆಯ ಶತಮಾನದಲ್ಲಿಯೂ ಬಾಹಟ ಟೀಕೆಯಂಥ ಟೀಕು ಗ್ರಂಥಗಳು ಮತ್ತು ನಿತ್ಯೋಪಯೋಗಕ್ಕೆ ಬೇಕಾದ ಚಿಕಿತ್ಸಾ ಭಾಗಗಳನ್ನೊಳಗೊಂಡ ಅನೇಕ ಗ್ರಂಥಗಳು ರಚನೆಯಾಗಿವೆ.

ಲೋಕಕ್ಕೆ ಉಪಯುಕ್ತವಾಗುವ ಇಂಥ ವೈದ್ಯಶಾಸ್ತ್ರ ಗ್ರಂಥಗಳು ಲೌಕಿಕ ಶಾಸ್ತ್ರಗಳು. ನಿಜಗುಣಶಿವಯೋಗಿಗಳು ತಮ್ಮ ವಿವೇಕ ಚಿಂತಾಮಣಿಯಲ್ಲಿ ಲೌಕಿಕವೇ ಧನ್ವಂತರ್‍ಯಾದಿಗಳಿಂದುಕ್ತಮಾದ ಆಯುರ್ವೇದ, ದಂಡನೀತಿ ಮೊದಲಾದ ದೃಷ್ಟ ಫಲಂಗಳಂ ನಿರ್ಧರಿಸುತ್ತಿಕ್ಕಂ' ಎಂದು ಲೌಕಿಕದ ಅರ್ಥವನ್ನು ವ್ಯಾಖ್ಯಾನಿಸಿದ್ದಾರೆ. ಈ ಬಗೆಯ ಶಾಸ್ತ್ರಗಳನ್ನು ಪ್ರತಿಪಾದಿಸುವ ಸಾಕಷ್ಟು ಗ್ರಂಥಗಳು ಕನ್ನಡದಲ್ಲಿ ರಚನೆಗೊಂಡಿವೆ. ಕನ್ನಡದಲ್ಲಿ ಕಾವ್ಯ ಸೃಷ್ಟಿಯೊಡನೆ ಲೋಕೋಪಯೋಗಿ ಶಾಸ್ತ್ರಗ್ರಂಥಗಳ ರಚನೆಯೂ ಸಾಕಷ್ಟಾಗಿತ್ತೆಂಬುದಕ್ಕೆ ಭಟ್ಟಾಕಳಂಕನ 'ಶಬ್ದಾಗಮಯುಕ್ತ್ಯಾಗಮ ಪರಮಾಗಮ ವಿಷಯಣಾಂತಥಾಕಾವ್ಯ ನಾಟಕಾಲಂಕಾರಕಲಾಶಾಸ್ತ್ರ ವಿಷಯಣಾಂಚ ಬಹೂನಾಂ ಗ್ರಂಥನಾಮಾಪಿ ಭಾಷಾಕೃತಾನಾಮುಪಲಭ್ಯ ಮಾನತ್ವಾತ್' ಎಂಬ ಮಾತು ನಿದರ್ಶನ.

ಒಟ್ಟಾರೆಯಾಗಿ ವೈದ್ಯಶಾಸ್ತ್ರ ಪರಂಪರೆಯ ವಿಶಿಷ್ಟತೆಯೆಂದರೆ, ಇಷ್ಟೆಲ್ಲ ಕೃತಿಗಳು ರಚಿತಗೊಂಡರೂ ಇವೆಲ್ಲಕ್ಕಿಂತ ಹೆಚ್ಚಾಗಿ 'ಪ್ರಕೃತಿಯೇ ಒಂದು ಪ್ರಯೋಗಶಾಲೆ' ಎಂದು ಭಾವಿಸಿದ್ದ ಜನಪದರಲ್ಲಿ ಕೃತಿರೂಪ ಪಡೆಯದಿದ್ದರೂ ಅವರ ದೈನಂದಿನ ಬದುಕಿನಲ್ಲಿ ಅಡಿಗೆ, ಆಹಾರ ಸೇವನೆ, ಪಾತ್ರೆಗಳ ಬಳಕೆ, ಅಷ್ಟೇ ಏಕೆ ಉಡುಗೆ-ತೊಡುಗೆಗಳಲ್ಲೂ ವೈದ್ಯಶಾಸ್ತ್ರ ಜೀವಂತವಾಗಿ ಉಳಿದುಕೊಂಡು ಬಂದಿರುವುದು ವಿಶೇಷವಾಗಿದೆ.

### ೩.೨. ಕನ್ನಡ ಸಾಹಿತ್ಯ ಕೃತಿಗಳಲ್ಲಿ ವೈದ್ಯಕೀಯ ಉಲ್ಲೇಖಗಳ ಸಮೀಕ್ಷೆ

ನಮಗೆ ದೊರೆತ ಆಧಾರಗಳಿಂದ ವೈದ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಕೃತಿಗಳು ಸೃಷ್ಟಿಯಾದದ್ದು ೧೧ನೆಯ ಶತಮಾನದ ಈಚೆಗೆ. ಆದರೆ ಆರಂಭದ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಈ ಕುರಿತ ಉಲ್ಲೇಖಗಳು ಕಂಡುಬರುವುದರಿಂದ ವೈದ್ಯಶಾಸ್ತ್ರದ ಅಸ್ತಿತ್ವ ತುಂಬಾ ಪ್ರಾಚೀನ ಕಾಲದಿಂದ ಇರಬೇಕೆಂದು ಹಿಂದಿನ ಪುಟಗಳಲ್ಲಿ ವಿವೇಚಿಸಲಾಗಿದೆ.

ನಮ್ಮ ಪ್ರಾಚೀನ ಶಾಸ್ತ್ರಜ್ಞರು ವೈದ್ಯಶಾಸ್ತ್ರ ಗ್ರಂಥಗಳನ್ನು ಬರೆದರೆ, ಕವಿಗಳು ತಮ್ಮ ಕೃತಿಗಳಲ್ಲಿ ಅಲ್ಲಲ್ಲಿ ಲೋಕೋಪಯೋಗಿ ವೈದ್ಯಕೀಯ ಕುರಿತ ಮಾಹಿತಿಯನ್ನು ವಿಶೇಷವಾಗಿ ವರ್ಣಿಸಿದ್ದಾರೆ. ಕವಿರಾಜಮಾರ್ಗಕಾರಾದಿಯಾಗಿ ಕನ್ನಡ ಸಾಹಿತ್ಯ ಕೃತಿಗಳ ಹಲವಾರು ಸಂದರ್ಭಗಳಲ್ಲಿ ಅಪರೂಪದ ದೇಶೀ ವೈದ್ಯಕೀಯ ವಿಷಯವನ್ನು ಸಾರವತ್ತಾಗಿ ಬಣ್ಣಿಸಿರುವ ವಿವರಗಳು ದೊರೆಯುತ್ತವೆ. ಕನ್ನಡದ ಪ್ರಸಿದ್ಧ ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಾಸಂಗಿಕವಾಗಿ ನವರಸೋತ್ಪತ್ತಿಗೆ ಆಧಾರವೋ ಎಂಬಂತೆ ಅರಸರ ಆರೋಗ್ಯ ಪೋಷಣೆ, ಯುದ್ಧದಲ್ಲಿ ಗಾಯಾಳುಗಳ ಚಿಕಿತ್ಸೆಯ ಸಂದರ್ಭ, ಔತಣ ಸಂದರ್ಭ, ನೀತಿಪಾಠ ಹೇಳುವ ಮೂಲಕವೂ ಸರ್ವಜ್ಞ, ವೈದ್ಯ ಸಂಗಣ್ಣನಂತಹವರು ತಮ್ಮ ವಚನಗಳಲ್ಲಿ ದೇಹದ ಆರೋಗ್ಯ ರಕ್ಷಣೆಗೆ ಆಹಾರ, ಆಚಾರ–ವಿಚಾರ ಇತ್ಯಾದಿ ವಿಷಯಗಳ ಕುರಿತು; ಸಾಹಿತ್ಯ ಕೃತಿಗಳಲ್ಲಿ ರೋಗ, ರೋಗನಿವಾರಣೆಯ ಪದ್ಧತಿಗಳು, ನಾಡಿಪರೀಕ್ಷೆ, ಮೂಲಿಕೆಗಳು, ಶಸ್ತ್ರ ಚಿಕಿತ್ಸೆ, ವೈದ್ಯಗ್ರಂಥ ರಚಿಸಿದ ಶಾಸ್ತ್ರಜ್ಞರ ಹೆಸರುಗಳು, ಗ್ರಂಥಗಳ ಕುರಿತ ವಿವರಗಳು ಕಂಡುಬರುತ್ತವೆ.

ಪ್ರಾಚೀನ ಯುದ್ಧ ಶಿಬಿರಗಳಲ್ಲಿ ನಡೆಯುತ್ತಿದ್ದ ಚಿಕಿತ್ಸೆಗಳೆಲ್ಲವೂ ದೇಶಿ ವೈದ್ಯಪದ್ಧತಿಯಂತೆ ನಡೆಯುತ್ತದ್ದವು. ಪಂಪಭಾರತದಲ್ಲಿ ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮನ ಶರೀರದಲ್ಲಿ ಆಯುಧಗಳಿಂದ ಆದ ಗಾಯಗಳಿದ್ದವು ಎಂದು "ಮೆಯ್ಯೆಳತ್ತಮಿತ್ತಂ ತೆರಿದಿರ್ದ ಪುಣ್ಗಳೆಸೆವಕ್ಕರದಂತಿದೆ" (ಪಂಪ ಭಾರತ ೧೧–೪೬) ಎಂದು ಪಂಪ ಹೇಳಿರುವನು. ಆದ್ದರಿಂದ ಗಾಯಾಳುಗಳ ಉಪಚಾರಕ್ಕಾಗಿ ಸೈನ್ಯದ ಜೊತೆಯಲ್ಲಿ ಯುದ್ಧರಂಗಕ್ಕೆ ವೈದ್ಯರೂ ಹೋಗುತ್ತಿದ್ದರು. ಧರ್ಮರಾಯನ ಸೈನ್ಯದ ಜೊತೆಯಲ್ಲಿ ಗಾಡಿ, ಅಂಗಡಿ ಮುಂಗಟ್ಟುಗಳಲ್ಲದೆ ವೈದ್ಯರೂ, ಚಿಕಿತ್ಸಕರೂ ತೆರಳಿದ ಅಂಶವನ್ನು ಗಮನಿಸಬಹುದು"[೨೮] ರಥಗಳಲ್ಲಿ ಅನಿಷ್ಟ ನಿವಾರಣಾರ್ಥವಾಗಿ ಯಂತ್ರೌಷಧಿಗಳನ್ನು ಕಟ್ಟುತ್ತಿದ್ದರು"[೨೯] ಎಂದಿದೆ. ಯೋಧರ ದೇಹದಲ್ಲಿ ಬಾಣ, ಕತ್ತಿ ಮುಂತಾದ ಆಯುಧಗಳ ಚುರುಗಳು ಉಳಿದಲ್ಲಿ ಅದನ್ನು ಶಸ್ತ್ರಕ್ರಿಯೆ ಮಾಡಿ ಹೊರತೆಗೆಯುತ್ತಿದ್ದರು. ಅವರ ಧೈರ್ಯ ಹಾಗೂ ಅಸಾಧಾರಣ ವ್ಯಕ್ತಿತ್ವವನ್ನು ಪಂಪ ವಿಕ್ರಮಾರ್ಜುನ ವಿಜಯದಲ್ಲಿ ಈ ಕೆಳಗಿನಂತೆ ಚಿತ್ರಿಸಿದ್ದಾನೆ.

ಉನ್ನತಮಸ್ತಕಸ್ಥಳದೊಳಂಬುಗಳಟ್ಟಿಡಿದಿರ್ದೊಡತ್ತಮಿ
ತ್ತನ್ನೆಱು ತಂದು ಬಲ್ದಡಿಗರಿಟ್ಟುಮಿಯೊಳ್ ಕಿಱು ನೊಂದೆನೆನ್ನದಃ
ಎನ್ನದಣಂ ಮೊಗಂ ಮುರಿಯದಳ್ಳದೆ ಬೇನೆಗಳೊಳ್ ಮೊಗಂಗಳಂ
ಬಿನ್ನಗೆ ಮೊಡದಿರ್ದರಗಳವಚ್ಚರಿಯಾಗೆ ಕೆಲರ್ ಮಹಾರಥರ್' (ಪಂಪ ಭಾರತ ೧೧.೩)

ಅಂದರೆ ಎತ್ತರವಾದ ತಲೆಯ ಪ್ರದೇಶದಲ್ಲಿ ಬಾಣಗಳು ನಾಟಿಕೊಂಡಿರಲು, ಮುರಿದಿರಲು, ಬಲಿಷ್ಠರಾದ ದಾಂಡಿಗರು ಆ ಕಡೆಯಿಂದ ಈ ಕಡೆಯಿಂದ ಒಟ್ಟಾಗಿ ಬಂದು ಸೇರಿ ಇಕ್ಕಳದಿಂದ ಅವುಗಳನ್ನು ಕೀಳುತ್ತಿದ್ದರೂ ನೋವಾಯಿತು ಎನ್ನದೆ, ಅಃ ಎನ್ನದೆ, ಸ್ವಲ್ಪವೂ ಮುಖವನ್ನು ತಿರುಗಿಸದೆ; ಹೆದರದೆ, ಮುಖವನ್ನು ಪೆಚ್ಚಾಗಿ ಮಾಡಿಕೊಳ್ಳದೆ, ಕೆಲವು ಮಹಾರಥರು ತಮ್ಮ ಸಾಮರ್ಥ್ಯವು ಆಶ್ಚರ್ಯಕರವಾಗುವ ಹಾಗೆ ಇದ್ದರು."ಆಯುರ್ವೇಧೀ ಭಿಷಕ್ ವೈದ್ಯಃ ದೋಷಜ್ಞಃ ಚಿಕಿತ್ಸಕ ಈ ೫ ವೈದ್ಯಂ ಉಪಚರ್ಯಾ ಚಿಕಿತ್ಸಾ ಈ ೨ ವೈದ್ಯಂ ಮಾಡುಹ" (ಅಭಿಧಾನ ರತ್ನಮಾಲಾ ಕರ್ನಾಟಕ ಟೀಕು ೬೧.೩೫೦) ಮರ್ದುವೇಟ್ಟಿ ಬೆಜ್ಜನ ತೆರದಿಂ" (ಕವಿರಾ.೩.೧೫೨) ಒದವಿದನಿತು ಧನಮುಮಂ ಕೊಟ್ಟು ಬೆಜ್ಜಂಗೆಯ್ವುದು" (ವ್ಯ.ಷ.ವಿ.೧೦.೨೫ವ) ಎಂದಿದೆ. ವೈದ್ಯಕೀಯಕ್ಕೆ

ಅಗತ್ಯವಿರುವ ಸುರಭಿ, ಸಾರಸ, ಕರ್ಪೂರ, ಲೇಪನಾದಿಗಳನ್ನು ಸೈನಿಕರು ದಂಡಿನಲ್ಲಿ ಹೊತ್ತು ಹೋಗುತ್ತಿದ್ದರೆಂದು ಸೂಕ್ತಿಸೂಧಾರ್ಣವದಲ್ಲಿದೆ". (ಸೂಕ್ತಿ.ಸು.ಪು.೩೭೫) ಮತ್ತು "ಉದದಿ ಪುರಾಧಿಪಸುತ ಮಂತ್ರದೂತ ಗಮನಾಜಿ ವಿರಹ ಪರಿಣಯ ಸುರತರ್ತುದಿನೇಶ ಚಂದ್ರ ಮಧುಕುರಭೃದುದಕ ವನಸ್ಪತಿಯೇ ಕೃತಿಗೆ ಪದಿನೆಂಟಂಗಂ" (ಅದೇ.೧.೭೮) ಎನ್ನುವಲ್ಲಿ ಚಿಕಿತ್ಸೆಗೆ ವನಸ್ಪತಿಗಳೇ ಅತಿ ಮುಖ್ಯ ಪಾತ್ರವಹಿಸುತ್ತವೆ ಎಂದು ಹೇಳಲಾಗಿದೆ.

ಕುಮಾರವ್ಯಾಸನಲ್ಲಿ "ಆದ ಮೈಗಂಡಿಯೊಳು ರಕುತವ ಶೋಧಿಸುತ ಹಳದುಪ್ಪವನು ತೊಡೆದಾದರಿಸಿದುದು ವೈದ್ಯ ಸಂತತಿ ವೀರಭಟರುಗಳು" (ಕು.ವ್ಯಾ.ಭಿ.೫.೪೧) ಎಂಬಲ್ಲಿ ಗಾಯಗೊಂಡ ಸೈನಿಕರಿಗೆ ವೈದ್ಯರು ನೀಡುತ್ತಿದ್ದ ಚಿಕಿತ್ಸೆಯ ಉಲ್ಲೇಖವಿದೆ. ಅಲ್ಲದೆ ಐದನೆಯ ಸಂಧಿಯಲ್ಲಿ ನೊಂದವರಿಗೆ ಮಾಡಿದ ಚಿಕಿತ್ಸೆಯ ವಿವರ ಈ ರೀತಿ ಇದೆ:

ಹರಿದ ಕೊರಳನು ಬಿಗಿವ ಉರದೊಳು
ಮುರಿದ ಬಾಣವ ಕೀಳ್ವ ಹೊಟ್ಟೆಯ
ನಿರಿಗರುಳನೊಳಗಿಕ್ಕಿ ಹೊಲಿಸುವ ಮದ್ದಗಳನಿಡಿವ
ಉರಿವ ಸೇವಕ ನಸ್ಯದೊಳು ಹದ
ನರಿವ ತುಂಗದ ವೈದ್ಯ ತತಿಯೆ
ಚ್ಚರಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ"(ಕು.ವ್ಯಾ.ಭೀ,೫-೨೫)

ಯುದ್ಧದಲ್ಲಿ ಗಾಯಾಳುಗಳಿಗೆ ವೈದ್ಯರು ಉಪಚರಿಸಿ ಚೈತನ್ಯ ತುಂಬುತ್ತಿದ್ದರು. ದುರ್ವ್ರಣಗಳನ್ನು ತೊಡೆದು ಕಟ್ಟುತ್ತಿದ್ದರು. ಇದನ್ನು ಕುಮಾರವ್ಯಾಸ ಸೊಗಸಾಗಿ ಈ ಪದ್ಯದಲ್ಲಿ ದಾಖಲಿಸಿರುವನು:

ಒಡಲಿನೊಳು ಮುರಿದಿದ್ದ ಸಬಳವ
ನುಡಿಯಲೀಯದೆ ಕೀಳ್ವ ಮದ್ದನು
ಗಿಡಿವ ಜೇವಣಿಗೆಯೊಳು ಸಪ್ರಾಣಿಸುವ ದುರ್ವ್ರಣವ
ತೊಡೆದು ಕಟ್ಟುವ ಹಸ್ತಿವೈದ್ಯರ
ಗಡಣವುಭಯದೊಳೆಸೆವಂತ್ಯದ
ಕಡಲ ಸಭಸಕೆ ತೊಡಕನಿಕ್ಕಿತು ಬಹಳ ಬಲಜಲಧಿ"(ಕು.ವ್ಯಾ.ಭೀ.೫.೪೦)

ಅಲ್ಲದೆ ವೈದ್ಯ ತಂಡಗಳು ಗಾಯಗೊಂಡ ವೀರಭಟರನ್ನು ಉಪಚರಿಸುವುದಕ್ಕೆ ಇರುತ್ತಿದ್ದರು. ಬಾಸಣಿಸಿದ ಗಾಯಗಳ ಬಾಯಲ್ಲಿ ಕಾದ ಬಾರಂಗಿಗಳನ್ನು ಅಳತೆಗೆ ಸರಿಯಗಿ ತುಂಬಿದರು. ತೆಲದಾರೆಗಳನ್ನು ಹಿಡಿದರು. ಮೈಗಂಡಿಯಲ್ಲಿ ರಕ್ತವನ್ನು ಶೋಧಿಸಿದರು. ಹಳೆಯ ತುಪ್ಪವನ್ನು ತೊಡೆದರು. ಖಡ್ಗದ ಅಡ್ಡ ಹೊಯ್ಲಿನಲ್ಲಿ ಅಡುಮದ್ದನ್ನು ಒತ್ತಿ ತುಂಬಿದರು ಸೂಕರನ ತುಪ್ಪವನ್ನು ತೊಡೆದರು. ಇರಿದ ಗಾಯದ ಒಳಗೆ ಔಷಧದ ತೈಲಧಾರೆಗಳನ್ನು ಬಿಟ್ಟರು. ಮಂತ್ರೋದಕಗಳನ್ನು ಕುಡಿದರು. ಹೊರಬಂದ ಕರಳನ್ನು ಒಳಕ್ಕೆ ನೂಕಿ ಮುಚ್ಚಿ ಮಂತ್ರಿಸಿ ಔಷಧಿಗಳನ್ನು ತೊಡೆದು ವೀರಭಟರನ್ನು ವೈದ್ಯರು ಉಪಚರಿಸುತ್ತಿದ್ದರು." (ಕು.ವ್ಯಾ.ಭೀ.೫.೪೧,೪೨) ಎಂಬ ಮಾಹಿತಿ ದೊರೆಯುತ್ತದೆ. ಮತ್ತು ಶಲ್ಯನು ಮೈಗೆ ನಾಟಿದ್ದ ಸರಳನ್ನು ಕಿತ್ತು ತೊಳೆದು ಔಷಧಿಯ ಲೇಪವನ್ನು ಒರಸಿದನು. ಧರ್ಮರಾಯನ ದೇಹದಲ್ಲಿ ಅಂಬನ್ನು ಸೇವಕರು ಕಿತ್ತು ಗಾಯವನ್ನು ಮಂತ್ರಜಲದಿಂದ

ತೊಳೆದರು. ಮಂತ್ರಿಸಿದ ಕರ್ಪೂರ ಕವಳವನ್ನು ಕೊಟ್ಟು, ಯಂತ್ರ ರಕ್ಷೆಯನ್ನು ಇಟ್ಟು ಅವನಿಪನನ್ನು ಸಂತೈಸಿದರೆಂದು ಹೇಳಲಾಗಿದೆ. (ಕು.ವ್ಯಾ.ಕ.೧೧.೫೫,೫೬) ಇಲ್ಲಿ ಯಂತ್ರ, ಮಂತ್ರ ಬಳಸಿರುವದು ನಮ್ಮ ದೇಶೀ ವೈದ್ಯ ಪದ್ಧತಿಯ ನಂಬಿಕೆಯಂತೆ ಮನೋಚಿಕಿತ್ಸೆಯಾಗಿ ಬಳಸಲಾಗಿದೆ.

ಆಚಾರ, ವಿಚಾರ ಸಂಪ್ರದಾಯದಲ್ಲಿ ಅಪಾರ ನಂಬಿಕೆ ಇಟ್ಟುಕೊಂಡಿದ್ದ ಪ್ರಾಚೀನ ಕನ್ನಡಿಗರು ಮಂತ್ರವೈದ್ಯವನ್ನೂ ಮಾಡಿಸುತ್ತಿದ್ದರು. ಇದರಿಂದ ಕ್ಷುದ್ರಜೀವಿಗಳಿಂದ ರಕ್ಷಣೆ ದೊರೆಯುತ್ತಿದ್ದ ವಿಶ್ವಾಸ ಅವರದು. "ಗುರುಪದೇಶ ಮಂತ್ರವೈದ್ಯ ಜಂಗಮೋಪದೇಶ ಶಸ್ತ್ರ ವೈದ್ಯ ನೋಡಾ ಭವರೋಗವ ಗೆಲುವ ಪರಿಯ ನೋಡಾ"[೩೦] ಎಂಬಲ್ಲಿ ಬಸವಣ್ಣನವರು ಗುರುಪದೇಶ ಮಂತ್ರ ವೈದ್ಯ ಜಂಗಮೋಪದೇಶ ಶಸ್ತ್ರವೈದ್ಯ ಎಂಬ ನುಡಿಯನ್ನು ಗಮನಿಸಿದರೆ ವೈದ್ಯ, ಮಂತ್ರವೈದ್ಯ, ಶಸ್ತ್ರ ವೈದ್ಯಗಳ ಪರಿಚಯವಿರುವುದು ತಿಳಿಯುತ್ತದೆ. "ಗಿಡಮರ ಬಳ್ಳಿಗಳ ನಾರು ಬೇರುಗಳ ಶರೀರದೊಂಡೆಯಲ್ಲಿ ಧರಿಸಿದಡೆ ರೋಗಿಯ ಹಲವು ರೋಗಗಳು ನಷ್ಟವಪ್ಪ ಪರಿಯಂತೆ" ಎಂಬ ಚನ್ನಬಸವಣ್ಣನವರ ಮಾತು ಕೇವಲ ಹೊಟ್ಟೆಯೊಳಗೆ ಆರೋಗಣೆ ಮಾಡುವುದರಿಂದ ಮಾತ್ರ ರೋಗ–ರುಜಿನಗಳು ಪರಿಹಾರವಾಗುವುದಿಲ್ಲ. ದೇಹದ ಮೇಲೆ ನಾರುಬೇರು, ಕಾಯಿಸ್ವರೂಪದ ರುದ್ರಾಕ್ಷಿ ಮುಂತಾದ ವನಸ್ಪತಿ ಜಾತಿಯನ್ನು ಧರಿಸುವುದರಿಂದ ಹಲವು ರೋಗಗಳು ಪರಿಹಾರವಾಗುತ್ತವೆಂಬ ಮಾತು ಇಲ್ಲಿ ಗಮನಿಸಬೇಕಾದ ಅಂಶ.

ವೈದ್ಯಸಂಗಣ್ಣನೆಂಬ ಶಿವಶರಣ ತನ್ನ ೨೦ ವಚನಗಳಲ್ಲಿ ಧಾರಾಳವಾಗಿ ವೈದ್ಯಕೀಯ ಉಲ್ಲೇಖಗಳನ್ನು ವಿವರೀಸಿದ್ದಾನೆ. ವೈದ್ಯ ಎಂದು ಸಂಭೋರಿದಿಸಿರುವುದರಿಂದ ಇವನು ವೈದ್ಯವೃತ್ತಿಯನ್ನು ಕೈಗೊಂಡವನಾಗಿರಬೇಕು. ಎಂಬುದು ಈ ವಚನದಿಂದ ತಿಳಿಯುತ್ತದೆ.

ಈ ವೈದ್ಯದ ಚೀಲವ ಹೊತ್ತು ಸಗಣಿಗೊಳ್ಳುತ್ತಿದ್ದೇನೆ
ಈ ಕಾಯಕದ ಸೇವೆಯ ಬಿಡಿಸಿ, ಕರಣ ಪ್ರಸಾದವ ಕೊಟ್ಟು
ಮರಳ ಶಂಕರಪ್ರಿಯ ಸಿದ್ಧರಾಮೇಶ್ವರಲಿಂಗ ನಿಮ್ಮಡಿಯೊಳಗೆನ್ನನಿರಿಸು"[೩೧]

ಈತನಿಗೆ ಶರೀರಶಾಸ್ತ್ರ ಮತ್ತು ವೈದ್ಯಶಾಸ್ತ್ರದ ತಿಳಿವಳಿಕೆ ಸಾಕಷ್ಟಿದ್ದಿತೆಂಬುದಕ್ಕೆ 'ಮರುಳ ಶಂಕರ ಪ್ರಿಯ ಸಿದ್ಧರಾಮೇಶ್ವರ' ಎಂಬ ಅಂಕಿತದಲ್ಲಿರುವ ಆತನ ವಚನಗಳು ಪುರಾವೆಯನ್ನೊದಗಿಸುತ್ತವೆ.

ನಾಡಿ ಪರೀಕ್ಷೆ ರೋಗನಿದಾನದಲ್ಲಿ ತುಂಬ ಮುಖ್ಯ ಪಾತ್ರವನ್ನು ವಹಿಸುತ್ತದೆ. ಅದರ ಅಧ್ಯಯನದಿಂದ ರೋಗಗಳನ್ನು ತಿಳಿದುಕೊಳ್ಳಬಹುದು. ಸಂಗಣ್ಣನವರು ನಾಡಿಯನ್ನು ಪರೀಕ್ಷಿಸಿ ವ್ಯಾದಿಯನ್ನು ಗುರುತಿಸಿದ್ದು ಹೀಗೆ;

ಅಂಗಾಲ ಮೇಲಣ ದೊಡ್ಡಂಗುಷ್ಠ ಮಧ್ಯದಲ್ಲಿ ಪೃಥ್ವಿನಾಡಿ,
ನಾಭಿ ಮೂತ್ರನಾಳದ ನಾಲ್ಕಂಗುಲ ಮಧ್ಯದಲ್ಲಿ ಅಪ್ಪುನಾಡಿ,
ಉಡಸೂತ್ರ ನಾಭಿ ಮೊದಲಾದ
ಪಂಚಾಂಗುಲ ಮಧ್ಯದ ಮೇಲ್ದೆಸೆಯಲ್ಲಿ (ತೇಜನಾಡಿ)
ಇಡಾ ಪಿಂಗಳ ಮಧ್ಯದಲ್ಲಿ ವಾಯುನಾಡಿ,
ಸುಷುಮ್ನನಾಳದ ಅಂಗುಲ ನಡುಮಧ್ಯದಲ್ಲಿ ಆಕಾಶಕೈದಿದನಾಡಿ,

ಇಂತೀ ಪಂಚಪಥವನೈದುವ ನಾಡಿನಲ್ಲಿ ಆಡುವ
ಆತ್ಮನ ವಿವರದ ದೆಸೆಯನರಿದು,
ಇಂತೀ ಐದು ಮುಚ್ಚಿ ಮೇಗಳ ಬ್ರಹ್ಮರಂಧ್ರದಲ್ಲಿಯೆಯ್ದಿದರೆಮ್ಮ ವೈದ್ಯರು
ನಾದ ಬಿಂದು ಕಳೆಗುತೀತ ನೋಡಾ,
ಮರುಳ ಶಂಕರ ಪ್ರಿಯ ಸಿದ್ಧರಾಮೇಶ್ವರಲಿಂಗವು"[೩೨].

ಅಲ್ಲದೆ ಸಂಚೂನಾಡಿ, ಸಂಚಲನಾಡಿ, ಶ್ವೇತ್ಯನಾಡಿ, ಇತ್ಯಾದಿ ನಾಡಿ ಪರೀಕ್ಷಿಸದೇ ರೋಗ ಪರೀಕ್ಷೆ ಅಸಾಧ್ಯ ಎಂದು ಹೇಳುತ್ತ ವೈದ್ಯಶಾಸ್ತ್ರ ಗ್ರಂಥಗಳಲ್ಲಿ ಹೇಳಲಾರದ ನಾಡಿಗಳನ್ನು ಗುರುತಿಸಿದ್ದಾನೆ. "ಪಂಚೇಂದ್ರಿಯಂಗಳಲ್ಲಿ ಉಷ್ಣ ಶ್ವೇತ್ಯವಪ್ಪುದನರಿದು"[೩೩] ಎಂಬಲ್ಲಿ ಪಂಚೇಂದ್ರಿಯಗಳು ಅರಿವಿನ ಸಂವೇದನೆಗಳನ್ನು ಒದಗಿಸಿಕೊಡುತ್ತವೆ. ಅವುಗಳ ಕಾರ್ಯವನ್ನು ಮತ್ತು ಶಿತೋಷ್ಣದ ಫಲವಾಗಿ ದೇಹದಲ್ಲಿ ಉಂಟಾಗುವ ಬದಲಾವಣೆಗಳನ್ನು ವೈದ್ಯ ತನ್ನ ಪರೀಕ್ಷೆಯಲ್ಲಿ ಬಳಸಿಕೊಳ್ಳಲು ತಿಳಿಸುತ್ತಾನೆ. ತ್ರಿದೋಷಗಳಾದ ವಾತ ಪಿತ್ತ ಕಫಗಳ ವಿಕೃತಿಯ ಫಲದಿಂದಲೇ ವ್ಯಾದಿಗಳು ಉದ್ಭವವೆಂದು ತಿಳಿಸುವನು. "ಔಷಧಿ ಕ್ರಮದಲ್ಲಿ ಗಿಡಮೂಲಿಕೆಗಳು, ಬೇರು, ನಾರು, ಲವಣ, ಲೋಹ, ವನದ್ರವ್ಯಗಳೇ ಆಧಾರ"[೩೪] ಎಂದಿದ್ದಾನೆ.

ಪ್ರಾಚೀನ ಕಾಲದ ಜನರು ನಂಬಿಕಸ್ಥರಾಗಿರುತ್ತಿದ್ದರು. ದೇವರು, ಧರ್ಮ, ಕರ್ಮ, ಗುರು–ಹಿರಿಯರು ಎನ್ನುವುದು ದೊಡ್ಡದು ಎಂದು ತಿಳಿದು ಅಂಥವರ ವಿರುದ್ಧ ಮೋಸ ವಂಚನೆಗಳನ್ನು ಮಾಡಿದರೆ ಆಪತ್‌ಕಾಲವೆಂದು, ರೋಗರುಜಿನಗಳು ತಗುಲುತ್ತವೆಂದು ನಂಬಿ ಉತ್ತಮ ನೀತಿ–ನಿಯಮದಿಂದ ಬಾಳುತ್ತಿದ್ದರು. "ನೀತಿ ತಪ್ಪಿ ನಡೆದರೆ ನಿಮಗೆ ನರಕ ತಪ್ಪದಯ್ಯ ಮನುಜ" ಎಂಬ ದಾಸರ ನುಡಿಯಂತೆ ಜನರು ಸನ್ಮಾರ್ಗದಲ್ಲಿ ಜೀವಿಸುತ್ತಿದ್ದರು. ಕೆಲವರು ಅತಿ ಮೂರ್ಖತನದಿಂದ ವರ್ತಿಸುವುದನ್ನು ಕಂಡು ಕನಕದಾಸರು ತಮ್ಮ ಕೀರ್ತನೆಯಲ್ಲಿ

ಧರ್ಮವೆಂದನಿಪ ಮಾರ್ಗವನ್ನು ಬಿಟ್ಟು
ಕರ್ಮವೆಂದೆನಿಪ ಕಾನನವ ಪೊಕ್ಕು
ದುರ್ಮಾರ್ಗದಲ್ಲಿ ನಡೆದವಗೆ ಘೋರವ್ಯಾದಿ
ಕರ್ಮಪಾಕದಲ್ಲಿ ಸಾರುತಿದೆ ಜಗದಿ"[೩೫]

ಎಂದು ಹೇಳಿ ಉನ್ಮಾದ, ಪಾಂಡುರೋಗ, ಶೀತಜ್ಞರ, ಪೀನಾಶಿರೋಗ, ರಾಜರೋಗ, ಕಾಸಶ್ವಾಸ, ಮೂಲವ್ಯಾದಿ, ಗಂಡಮಾಲೆ, ಸನ್ನಿಪಾತ, ಮೂತ್ರಕೃಚ್ರ, ಅತಿಸಾರ, ಕ್ಷಯರೋಗ, ಇತ್ಯಾದಿ ರೋಗಗಳು ಸಮಾಜದಲ್ಲಿ ನೀತಿಬಾಹಿರ ಕಾರ್ಯದಲ್ಲಿ ತೊಡಗಿದವರಿಗೆ ಬರುತ್ತವೆ ಎಂದು ಸಮಾಜವನ್ನು ಸನ್ಮಾರ್ಗದಲ್ಲಿ ಕೊಂಡೊಯ್ಯುವ ಆರೋಗ್ಯವಂತರನ್ನಾಗಿಸುವ ನೀತಿ ಪದ್ಯವನ್ನು ಕನಕದಾಸರು ರಚಿಸಿದ್ದಾರೆ.

ರಾಘವಾಂಕ ಹರಿಶ್ಚಂದ್ರ ಕಾವ್ಯದಲ್ಲಿ 'ನಾಡಮದ್ದನ್ನು ತಿಂದರೆ ರೋಗ ಕೆಡದಿರುವುದೇ'? (ಹರಿಶ್ಚಂದ್ರ ಕಾವ್ಯ ೧೧–೨೪) ಎಂದಿರುವಲ್ಲಿ ವನಸ್ಪತಿ ಔಷಧವೇ ಮುಖ್ಯವಾಗಿದೆ. ದುರ್ಗಸಿಂಹ ತನ್ನ ಪಂಚತಂತ್ರದಲ್ಲಿ ಅನೇಕ ವನಸ್ಪತಿಗಳನ್ನು ಗುರುತಿಸಿದ್ದಾನೆ. ಅವುಗಳು; "ಇತ್ತ, ಬಸರಿ, ಕಡವೆ, ಬೇವು, ಹಲಸು, ಮತ್ತಿ, ತಾಳೆ, ಲವಂಗ, ರುದ್ರಾಕ್ಷಿ, ಸಾಂಬ್ರಾಣಿ, ಮುಷ್ಕ ಮುಂತಾದವುಗಳನ್ನು (ಕರ್ನಾಟಕ ಪಂಚತಂತ್ರ ೧–೯೨) ತಿಳಿಸುವಲ್ಲಿ

ಆರೋಗ್ಯದ ಕುರಿತಾದ ಅವನ ಕಾಳಜಿ ತಿಳಿಯುತ್ತದೆ. ನಯಸೇನ ಧರ್ಮಾಮೃತದಲ್ಲಿ ಮಲಶುದ್ಧಿ, ಕಣ್ಣುಬೇನೆ, ಜ್ವರಗಳಿಗೆ ಔಷಧಿಗಳನ್ನು ತನ್ನ ಒಂದು ಪದ್ಯದಲ್ಲಿ ಹೇಳುತ್ತಾನೆ.

ಅಣಿಲೆ ತಿಗಣೆಯಿಂ ಸುಣ್ಣದಿಂಪಲ್ ಕರೆಯಪ್ಪುದು
ಅಣಿಲೆ ತಿಗಡೆಯಿಂ ಬಸಿರೊಡೆವುದು ತ್ರಿಫಲೆಯ
ಸೇವೆಯಿಂ ಮಲಶುದ್ಧಿಯಕ್ಕುಂ ಪುಣಿಸೆಯ ಕೊನರುಮುಪ್ಪುಂ
ಕಣ್ಬೇನೆಯ ಕಳೆವುದು ಸುಂಟಿಯು ಮಮರ್ದುವಳ್ಳಿಯಂ
ಪುಷ್ಕಂ ಮೂಲವಂ ಬರಿವದನೆಯಂ ಜ್ವರದಕೇಡು...." (ಧರ್ಮಾಮೃತ ೯–೧೦೮, ಗದ್ಯಾನು)

ಎಂದು ಹೇಳಿರುವಲ್ಲಿ ನಯಸೇನ ಅಪ್ಪಟ ದೇಶೀಯತೆಯನ್ನು ಮೆರೆದಿದ್ದಾನೆ.

ಶಿವಕೋಟ್ಯಾಚಾರ್ಯರು ತಮ್ಮ ವಡ್ಡಾರಾಧನೆ ಕೃತಿಯಲ್ಲಿಯೂ ಆಗಿನ ಕಾಲದ ರಾಜರ ಬಳಿಯಲ್ಲಿ ಒಬ್ಬ ವೈದ್ಯ ಇರುತ್ತಿದ್ದನೆಂಬುದಕ್ಕೆ "ತನ್ನ ಪ್ರಧಾನನಪ್ಪ ಜಯನೆಂಬ ವೈದ್ಯನಂಕರೆದು" ಎಂಬ ಉಲ್ಲೇಖದಿಂದ ತಿಳಿಯುತ್ತದೆ. ಸುಕುಮಾರಸ್ವಾಮಿಯ ಕಥೆಯಲ್ಲಿ ಪ್ರಾಚೀನ ಕಾಲದ ಶಿಕ್ಷಣದಲ್ಲಿ ವೇದಶಾಸ್ತ್ರ, ಧರ್ಮಶಾಸ್ತ್ರ, ನ್ಯಾಯಶಾಸ್ತ್ರ, ಜ್ಯೋತಿಷ್ಯ, ಮಂತ್ರವಿದ್ಯೆಗಳನ್ನು ಕಲಿಸುವುದರ ಜೊತೆಗೆ "ಚರಕ ಮಶ್ವಿನೀಮತಂ ಬಾಹಟಂ ಶುಶ್ರುತಮುಮೆಂದಿವು ಮೊದಲಾದ ನರವೈದ್ಯಮುಮಂ"[೩೬] ಎನ್ನುವಲ್ಲಿ ಮನುಷ್ಯ ವೈದ್ಯಶಾಸ್ತ್ರವನ್ನು ಕಲಿಸುತ್ತಿದ್ದರು ಎಂದು ತಿಳಿಯುತ್ತದೆ. ಚಾಣಕ್ಯನಿಗೆ ನಾಲ್ಕುದಾಡೆಗಳು ಹುಟ್ಟಿದಾಗ "ಕೈಸಾಣೆಗಳಿಂದ ನಾಲ್ಕು ದಾಡೆಗಳನುರ್ದಿಸಿ ಕಳೆದು ಮಟ್ಟಂ ಮಾಡಿ"[೩೭] ಎನ್ನುವಲ್ಲಿ ದಂತವೈದ್ಯದ ವಿಚಾರವನ್ನು ತಿಳಿಸುತ್ತದೆ.

ಜನಪದ ಕವಿ ಸರ್ವಜ್ಞ ತನ್ನ ತ್ರಿಪದಿಯಲ್ಲಿ ಸರಳವಾದ ಮಾರ್ಗದಲ್ಲಿ ಆರೋಗ್ಯ ಸಂರಕ್ಷಣೆ ಕುರಿತು ಮಾರ್ಮಿಕವಾಗಿ ವಿಷದಪಡಿಸಿದ್ದಾನೆ. ದೇಹವು ಅನಾರೋಗ್ಯಕ್ಕೆ ತುತ್ತಾಗುವ ಪೂರ್ವದಲ್ಲೇ ಯಾವ ರೀತಿ ಕಾಪಾಡಿಕೊಳ್ಳಬೇಕು ಎಂಬುದಕ್ಕೆ 'ಹಸಿವಿಲ್ಲದೆ ಊಟ ಮಾಡದಿರುವುದು', 'ಬಿಸಿ ನೀರು ಕುಡಿಯುವುದು', ಎಡಮಗ್ಗುಲೊಳು ಮಲಗುವುದು' ಇತ್ಯಾದಿ ವೈಜ್ಞಾನಿಕವೆನಿಸುವ ಸಂಗತಿಗಳನ್ನು ಹೇಳಿದ್ದಾನೆ. ಅಲ್ಲದೆ ವ್ಯಾದಿ ಬರದ ಹಾಗೆ ನೋಡಿಕೊಂಡು ವೈದ್ಯರ ಬಳಿಗೆ ಸುಳಿಯದೇ ದಿನನಿತ್ಯದ ಆಹಾರ ವಿಹಾರಗಳಲ್ಲಿಯೇ ಆರೋಗ್ಯವನ್ನು ಕಾಪಾಡಿಕೊಳ್ಳಲು ಮಾರ್ಗದರ್ಶನ ಮಾಡಿದ್ದಾನೆ. ತನ್ನ ಒಂದು ವಚನದಲ್ಲಿ

ಉತ್ತರಣಿ ಉಪ್ಪಲಿಕ ಮತ್ತಲ್ಲಿ ಶಿಶುಮಾರಿ
ಕತ್ತೆಯ ಮೂತ್ರವೆರೆದರೆ ರಸಭಸ್ಮ
ಉತ್ತಮವಕ್ಕು ಸರ್ವಜ್ಞ

ಎನ್ನುವಲ್ಲಿ ಇಂದು ತಿರಸ್ಕಾರದಿಂದ ನೋಡುವ ಕತ್ತೆ ಮೂತ್ರವು ಔಷಧಿಯಾಗಿ ಬಳಕೆಯಾಗುತ್ತಿದ್ದುದು ಬಹುಮುಖ್ಯ ಅಂಶ. ಆಹಾರ ಪದಾರ್ಥಗಳಿಲ್ಲಿ ಶ್ರೇಷ್ಠವಾದದ್ದು ಎಂದು ಹೆಸರಾಗಿರುವ ಬಡವರ ಆಹಾರ 'ರಾಗಿ' ಉಂಡವನು ನಿರೋಗಿಯಾಗುತ್ತಾನೆ ಎಂದು ಆರೋಗ್ಯ ಹಾಗೂ ಆದರ್ಶ ಬದುಕನ್ನು ಸಾಧಿಸುವ ವಿಧಾನಗಳನ್ನು ತಿಳಿಸುತ್ತಾನೆ. ಶಿಶುನಾಳ ಶರೀಫ ಸಾಹೇಬರು ಸಹ ವೈದ್ಯಕೀಯ ಕುರಿತು;

....ಅದರೊಳು ಔಷಧಗಳಾದ ವಿನ್ನ
ಔಷಧದಿಂದ ಹುಟ್ಟಿತು ಅನ್ನ

ಅನ್ನದಿಂದ ವೀರ್ಯ ಉತ್ಪನ್ನ
ವೀರ್ಯದಿಂದ ಕ್ರಿಮಿ-ಕೀಟಕ ಜನನ
ಈ ಪರಿ ಆಯಿತೋ ಚರಾಚರ"[೨೮]

ಎಂದು ಹೇಳಿರುವಲ್ಲಿ ಪೃಥ್ವಿಯಿಂದ ಔಷಧಗಳು, ಔಷಧಗಳಿಂದ ಅನ್ನ, ಅನ್ನದಿಂದ ವೀರ್ಯ ಹಾಗೂ ವೀರ್ಯದಿಂದ ಸಕಲ ಚರಾಚರ ಜೀವಿಗಳು ಹುಟ್ಟಿಕೊಳ್ಳುವುದಕ್ಕೆ ಕಾರಣ ಎಂಬಲ್ಲಿ ಅನ್ನವೇ ಔಷಧಿ, ಅದೇ ವೀರ್ಯ, ಅದೇ ಆರೋಗ್ಯ ರಕ್ಷಣೆಗೆ ಅತಿಮುಖ್ಯ ಎಂದು ಹೇಳಿರುವರು.

ಸೋಮದೇವ ತನ್ನ ಅಭಿಲಷಿತಾರ್ಥ ಚಿಂತಾಮಣಿಯಲ್ಲಿ "ಶಸ್ತ್ರಕರ್ಮಕಲಾದಕ್ಷರಾದ ವೈದ್ಯರು" ಎಂಬ ಉಲ್ಲೇಖವಿದೆ. ಶಿವತತ್ವ ರತ್ನಾಕರದಲ್ಲಿ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಕೆಲವು ಉಪಯುಕ್ತ ವಿಚಾರಗಳು; ನಾಡಿಯ ಸ್ವರೂಪ, ಅದರ ಅವಯವಗಳು, ಸ್ತ್ರೀ ಪುರುಷರಲ್ಲಿ ನಾಡಿ ಪರೀಕ್ಷೆಯ ಸ್ಥಾನಗಳು, ಜ್ವರದ ಪ್ರಭೇದಗಳು, ಔಷಧಗಳ ನಿರೂಪಣೆ, ವಿವಿಧ ವ್ಯಾದಿಗಳಿಗೆ ಔಷಧ ನಿರ್ಮಾಣ ವಿಧಾನಗಳ ಹೇಳಿಕೆ, ಔಷಧ ತೆಗೆದುಕೊಳ್ಳುವ ನಕ್ಷತ್ರ ಮುಂತಾದವುಗಳ ಪರಿಶೀಲನೆ ಲೇಹ್ಯಾದಿಗಳನ್ನು ತಯಾರಿಸುವದು ಹಾಗೂ ವಿಷವೈದ್ಯಕ್ಕೆ ಸಂಬಂದಿಸಿದ ಹಲವಾರು ವಿಷಯಗಳು ಚರ್ಚಿತವಾಗಿವೆ. ನಿಜಗುಣರು ತಮ್ಮ ವಿವೇಕ ಚಿಂತಾಮಣಿಯಲ್ಲಿ "ವ್ಯಾಧಿನಿಧಾನ, ವ್ಯಾಧಿಚಿಹ್ನೆ, ಮಂತ್ರೌಷಧಿ ಚಿಕಿತ್ಸೆಗಳಿಂದ ಆಯುರಾರೋಗ್ಯವನ್ನು ತೋರಿಸುವುದು ಆಯುರ್ವೇದ" ಎಂದು ವ್ಯಾಖ್ಯಾನಿಸಿದ್ದಾರೆ. ಅಲ್ಲದೆ ಮನ್ಮಥ ವಿಜಯ, ಕಾಮಶಾಸ್ತ್ರ, ಗಜಶಾಸ್ತ್ರ, ಮದನ ತಿಲಕ, ಕೋಕಶಾಸ್ತ್ರ ಇತ್ಯಾದಿ ಶಾಸ್ತ್ರ ಕೃತಿಗಳಲ್ಲಿ ವೈದ್ಯಕೀಯ ಉಲ್ಲೇಖಗಳು ಗಣನೀಯವಾಗಿ ಕಂಡುಬರುತ್ತದೆ.

ಹೀಗೆ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಪ್ರಾಸಂಗಿಕವಾಗಿಯಾದರೂ ಕವಿಗಳು ವೈದ್ಯಕೀಯ ಕುರಿತ ವಿಷಯವನ್ನು ತುಂಬ ಅಪೂರ್ವವಾಗಿ, ಸ್ವಾರಸ್ಯವಾಗಿ ಅಂದಂದಿನ ಕಾಲದಲ್ಲಿ ಬಳಕೆಯಲ್ಲಿದ್ದ ರೋಗಗಳು, ಮೂಲಿಕೆಗಳು ಚಿಕಿತ್ಸಾ ಕ್ರಮಗಳನ್ನು ಉಲ್ಲೇಖಿಸಿ ಉಪಕರಿಸಿದ್ದಾರೆ. ಅಂದರೆ ಆರೋಗ್ಯ ಹಾಗೂ ಸುಸ್ಥಿರತೆಯ ಬಗ್ಗೆ ಕನ್ನಡಿಗರಿಗಿದ್ದ ದೂರದೃಷ್ಟಿ ಕುತೂಹಲಕವಾದಂಥದ್ದು. ವೈದ್ಯವೆಂದರೆ ಅದು ಬರೀ ಒಂದು ಬರೀ ಚಿಕಿತ್ಸಾ ವಿಧಾನವಲ್ಲ ಅದು ಬದುಕುವ ಹಾಗೂ ಇರುವಿಕೆಯ ವಿಧಾನವೂ ಆಗಿದೆ. ಎಂಬುದನ್ನು ಎಲ್ಲ ಸಾಹಿತ್ಯ ಕೃತಿಗಳೂ ತೋರಿಸಿರುವುದು ವಿಶೇಷವಾಗಿದೆ.

**ಅಡಿಟಿಪ್ಪಣಿಗಳು**

೧. ಮಂಗರಾಜ ವಿರಜಿತ ಖಗೇಂದ್ರಮಣಿದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೧೩
೨. ಗ್ರಂಥಸಂಪಾದನೆ ಕೆಲವು ಅಧ್ಯಯನಗಳು; ೧೯೯೭, ಡಾ.ವೈ.ಸಿ.ಭಾನುಮತಿ, ಪು.೧೯
೩. ಸಂಕ್ಷಿಪ್ತ ಕನ್ನಡ ನಿಘಂಟು; ೨೦೦೧, ಪು.೧೦೮೪
೪. ಅದೇ, ಪು.೧೨೦೨
೫. ಅದೇ, ಪು.೧೦೮೪
೬. ಆಯುರ್ವೇದ ಆರೋಗ್ಯ ಕೈಪಿಡಿ; ೧೯೯೪, ಜಿ.ಎಸ್.ಪ್ರಕಾಶಂ, ಪು.೨
೭. ಆಯುರ್ವೇದ ವಿಜ್ಞಾನ; ೧೯೭೦, ಡಾ. ಧನ್ಯಕುಮಾರ ಇಜಾರಿ, ಪು.೧

೮. ಆಯುರ್ವೇದೀಯ ಪದಾರ್ಥ ವಿಜ್ಞಾನ; ೧೯೯೯, ಡಾ.ಚಂದ್ರಮೌಳಿ ಎಸ್.ನಾಯ್ಕರ್, ಪು.೪
೯. ಆಯುರ್ವೇದ ವಿಜ್ಞಾನ; ೧೯೭೦, ಡಾ.ಧನ್ಯಕುಮಾರ ಇಜಾರಿ, ಪು.೧೧
೧೦. ಸಾಹಿತ್ಯಭಾರತೀ; ೧೯೭೦, ಎನ್.ಅನಂತರಂಗಾಚಾರ್, ಪು.೬೬
೧೧. ವೈದ್ಯಕಂದ; ೧೯೯೧, (ಸಂ) ಬಿ.ಎಸ್.ಸಣ್ಣಯ್ಯ, ಪು.೨೮
೧೨. ಬಾಚಿಕಾಯಕದ ಬಸವಯ್ಯ; ೨೦೦೭, ವೃತ್ತಿ ಹಾಗೂ ತತ್ವ ಮೀಮಾಂಸೆ; ಪ್ರೊ.ವೀರೇಶ ಬಡಿಗೇರ, ಪು.೫,೬
೧೩. ಕರಾವಳಿ ಜಾನಪದ; ೨೦೦೭, (ಸಂ)ಪ್ರೊ.ಎ.ವಿ.ನಾವಡ, ಪು.೩೮೦
೧೪. ಕನ್ನಡ ನಾಡಿನಲ್ಲಿ ಆಯುರ್ವೇದ; ೧೯೮೦, ಎಸ್.ಕೆ.ರಾಮಚಂದ್ರರಾವ್, ಪು.೬
೧೫. ಚಾವುಂಡರಾಯನ ಲೋಕೋಪಚಾರ ಒಂದು ಅಧ್ಯಯನ; ೧೯೯೬, ಡಾ.ಎ.ರಂಗಸ್ವಾಮಿ, ಪು.೨೬೪
೧೬. ಧನಂತರಿ ಮಹಿಮೆ; ಒಂದು ಸಾರ, ಪ್ರಜಾವಾಣಿ ೨೪ನೇ ಫೆಬ್ರವರಿ ೨೦೦೮, ಪು.೬
೧೭. ಚಾವುಂಡರಾಯನ ಲೋಕೋಪಕಾರ ಒಂದು ಅಧ್ಯಯನ; ೧೯೯೬, ಡಾ. ಎ. ರಂಗಸ್ವಾಮಿ, ಪು.೨೬೫
೧೮. ಜಯಸಿಂಹ ಆಸ್ಥಾನ; ಸಾಹಿತ್ಯಕ ಹೊಸ ಆವಿಷ್ಕಾರಗಳು ಮಾರ್ಗ-೪; ೨೦೦೪, ಎಂ.ಎಂ.ಕಲಬುರ್ಗಿ, ಪು.೨೫
೧೯. ಕನ್ನಡದಲ್ಲಿ ಸೂಪಶಾಸ್ತ್ರ ಸಾಹಿತ್ಯ; ೨೦೦೬, ಡಾ.ಬಿ.ಮಂಜುಳಾ, ಪು.೧೨
೨೦. ಕನ್ನಡ ಸಾಹಿತ್ಯ ಚರಿತ್ರೆ; ೨೦೦೨, ರಂ.ಶ್ರೀ. ಮುಗಳಿ, ಪು.೩೧
೨೧. ಕರ್ನಾಟಕ ಕವಿಚರಿತೆ ಸಂಪು.೧; ಆರ್.ನರಸಿಂಹಾಚಾರ್ಯ, ಪು.೧೨೬, ೨೭
೨೨. ಕರ್ನಾಟಕ ಆಯುರ್ವೇದ ಇತಿಹಾಸ; ೧೯೮೯, ಕೆ.ಆರ್.ಶ್ರೀಕಂಠಮೂರ್ತಿ, ಪು.೩೮
೨೩. ಖಗೇಂದ್ರಮಣಿದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೩
೨೪. ಕರ್ನಾಟಕ ಕವಿಚರಿತೆ ಸಂಪು.೨; ಆರ್. ನರಸಿಂಹಾಚಾರ್ಯ, ಪು.೧೧೨
೨೫. ವೈದ್ಯಸಾರ ಸಂಗ್ರಹ ಭಾಗ-೧, ೧೯೫೧, (ಸಂ) ಶ್ರೀನಿವಾಸಮೂರ್ತಿ ಮತ್ತು ಎನ್.ರಾಮಚಂದ್ರಭಟ್, ಪು.ಪ್ರಸ್ತಾವನೆ. XXVII
೨೬. ಕರ್ನಾಟಕ ಕವಿಚರಿತೆ ಸಂಪು.೨; ಆರ್.ನರಸಿಂಹಾಚಾರ್ಯ, ಪು.೨೯೪
೨೭. ಸಕಲವೈದ್ಯ ಸಂಹಿತಾಸಾರಾರ್ಣವಂ ಸಂಪುಟ.೨; ೧೯೮೪, (ಸಂ).ಬಿ.ಎಸ್.ಸಣ್ಣಯ್ಯ, ಪೀಠಿಕೆ
೨೮. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ; ೨೦೦೨, ಡಾ.ಶ್ರೀಧರ ಎಚ್.ಜಿ., ಪು.೨೩೦
೨೯. ಅದೇ, ಪು.೨೩೦
೩೦. ಬಸವಣ್ಣನವರ ಷಟ್‌ಸ್ಥಲದ ವಚನಗಳು; ೧೯೯೦, (ಸಂ)ಎಂ.ಎಂ.ಕಲಬುರ್ಗಿ, ಪುಟ.೬೫೩
೩೧. ಸಂಕೀರ್ಣ ವಚನ ಸಂಪುಟ-೪; ೧೯೯೩, (ಸಂ) ಡಾ.ಬಿ.ಆರ್. ಹಿರೇಮಠ, ಪು.೫೧
೩೨. ಅದೇ, ಪು.೪೪
೩೩. ಅದೇ, ಪು.೪೪
೩೪. ಅದೇ, ಪು.೪೬
೩೫. ಸಮಗ್ರ ದಾಸಸಾಹಿತ್ಯ ಸಂಪು-೫ ಭಾಗ-೧; ೨೦೦೩, (ಸಂ) ಪ್ರೊ.ಸುಧಾಕರ, ಪು.೧೭೪

೩೬. ವಡ್ಡಾರಾಧನೆ; ೧೯೯೮, (ಸಂ) ಡಿ.ಎಲ್.ನರಸಿಂಹಾಚಾರ್ಯ, ಪು.೭೬

೩೭. ಅದೇ, ಪು.೨೨೫

೩೮. ಶಿಶುನಾಳ ಶರೀಫಸಾಹೇಬರು; ೨೦೦೨, ಶಿವಾನಂದ ಗುಬ್ಬಣ್ಣನವರು, ಪು.೫೬

❑❑❑

ಅಧ್ಯಾಯ – ನಾಲ್ಕು

# ವೈದ್ಯಶಾಸ್ತ್ರ ಪ್ರಕಾರಗಳು : ರೋಗ–ಲಕ್ಷಣ ಚಿಕಿತ್ಸಾ ವಿಧಾನಗಳು

೪.೧. ವೈದ್ಯಶಾಸ್ತ್ರ ಪ್ರಕಾರಗಳು

೪.೧.೧. ಮನುಷ್ಯ ವೈದ್ಯ

೪.೧.೧.೧. ಸಾಮಾನ್ಯವೈದ್ಯ

೪.೧.೧.೨. ಪುರುಷವೈದ್ಯ

೪.೧.೧.೩. ಸ್ತ್ರೀವೈದ್ಯ

೪.೧.೧.೪. ಬಾಲವೈದ್ಯ

೪.೧.೧.೫. ವಿಷವೈದ್ಯ

೪.೧.೨. ಪ್ರಾಣಿ ವೈದ್ಯ

೪.೧.೨.೧. ಗೋವೈದ್ಯ

೪.೧.೨.೨. ಅಶ್ವವೈದ್ಯ

೪.೧.೨.೩. ಗಜವೈದ್ಯ

೪

# ವೈದ್ಯಶಾಸ್ತ್ರ ಪ್ರಕಾರಗಳು : ರೋಗ-ಲಕ್ಷಣ ಚಿಕಿತ್ಸಾ ವಿಧಾನಗಳು

ಜೀವನದಲ್ಲಿ ಪ್ರತಿಯೊಂದು ಜೀವಿಯು 'ಆರೋಗ್ಯ ಭಾಗ್ಯ'ವನ್ನು ಹೊಂದಿರಬೇಕಾದದ್ದು ಅತ್ಯಗತ್ಯ. ರೋಗಪೀಡಿತ ಬದುಕು ಎಂದಿಗೂ ಸುಖ, ಸಂತೋಷ, ನೆಮ್ಮದಿ ತಂದುಕೊಡದು. ರೋಗಕ್ಕೆ ತುತ್ತಾಗಿ ನರಳುತ್ತಿರುವವರನ್ನು ರೋಗಮುಕ್ತರನ್ನಾಗಿಸಲು ವೈದ್ಯ ಸಹಕಾರಿ. ವೈದ್ಯಶಾಸ್ತ್ರವು ರೋಗವನ್ನು ನಿವಾರಿಸಿ ಪ್ರಾಣವನ್ನು ಕಾಪಾಡುತ್ತಾದ್ದರಿಂದ ಇದೊಂದು 'ಜೀವರಕ್ಷಕಶಾಸ್ತ್ರ'. ದಾಸ ಶ್ರೇಷ್ಠರೆನಿಸಿದ ಪುರಂದರದಾಸರು "ಮಾನವಜನ್ಮ ದೊಡ್ಡದು ಅದನು ಹಾಳು ಮಾಡಬೇಡಿ ಹುಚ್ಚಪ್ಪಗಳಿರಾ" ಎಂದು ಮುನ್ನೆಚ್ಚರಿಕೆ ಕೊಟ್ಟಿದ್ದಾರೆ. ಅದರಂತೆ ನಾವು ಎಷ್ಟೇ ಮುನ್ನೆಚ್ಚರಿಕೆ ಕ್ರಮವಹಿಸಿದರೂ ರೋಗ ಜೀವಂತವಾಗಿರುವ ಎಲ್ಲಾ ಜೀವಿಗಳನ್ನೂ ಕಾಡುತ್ತದೆ. ಮಾನವರಿಗೆ ಮಾತ್ರವಲ್ಲದೆ, ಪ್ರಾಣಿ, ಪಕ್ಷಿಗಳಿಗೂ, ಕ್ರಿಮಿ ಕೀಟಗಳಿಗೂ, ಗಿಡ ಮರಗಳಿಗೂ ಬರುತ್ತದೆ. ರೋಗದ ಬಾಧೆಗೆ ಅನೇಕ ಕಾರಣಗಳಿರುತ್ತವೆ. ಆಹಾರದ ಸೇವನೆಯಲ್ಲಿ ವ್ಯತ್ಯಾಸ, ಸಮತೂಕದ ಅಥವಾ ಪೌಷ್ಠಿಕ ಆಹಾರದ ಕೊರತೆ, ಪರಿಸರ ಮಾಲಿನ್ಯ, ರೋಗಾಣುಗಳ ಕಾಟ, ವ್ಯತಿರಿಕ್ತ ಹವಾಮಾನ, ದೇಹದ ಶಕ್ತಿಗೆ ಮೀರಿದ ಶ್ರಮ, ಶ್ರಮರಹಿತ ಜೀವನ, ನಿದ್ರೆ ಕೆಡುವುದು, ದುಶ್ಚಟಗಳು, ಅತಿಯಾದ ಲೈಂಗಿಕತೆ ಇತ್ಯಾದಿ ಕಾರಣಗಳಿಂದ ರೋಗಗಳು ಉಂಟಾಗುತ್ತವೆ. ಈ ಎಲ್ಲಾ ಕಾರಣಗಳಿಂದ ಬಂದ ರೋಗವನ್ನು ಹೋಗಲಾಡಿಸಲು ಪ್ರಾಚೀನ ಕಾಲದಿಂದಲೂ ಮಾನವನು ಅನೇಕ ವಿಧವಾದ ಮಾರ್ಗಗಳನ್ನು ಅನುಸರಿಸುತ್ತಾ ಬಂದಿದ್ದಾನೆ.

ಮಾನವ ತನ್ನ ಬದುಕಿಗೆ ಅವಶ್ಯಕವಾದದ್ದನ್ನೆಲ್ಲ ತನ್ನ ಪ್ರಾಕೃತಿಕ ಪರಿಸರದಿಂದ ದೊರಕಿಸಿಕೊಂಡಂತೆ ತನ್ನ ರೋಗಗಳಿಗೂ ಅಲ್ಲಿಯೇ ಪರಿಹಾರವನ್ನು ಕಂಡುಕೊಂಡ. ಸಸ್ಯ, ಪ್ರಾಣಿ, ಖನಿಜಾಂಶಗಳನ್ನು ಔಷಧ ದ್ರವ್ಯಗಳನ್ನಾಗಿ ಬಳಸಿಕೊಂಡುದಲ್ಲದೆ ತಾನು ಉಪಯೋಗಿಸುತ್ತಿದ್ದ ಆಹಾರ ಪದಾರ್ಥಗಳನ್ನೂ ಔಷಧ ಪದಾರ್ಥಗಳನ್ನಾಗಿ ಮಾರ್ಪಡಿಸಿಕೊಂಡ. ಹೀಗೆ ತನ್ನನ್ನು ಕಾಡುವ ರೋಗಗಳಿಗೆ ಪರಿಹಾರ ಕಂಡುಕೊಳ್ಳುವ ಯತ್ನದಲ್ಲಿ ಅವನು ಮೊದಲು ಪ್ರಾಕೃತಿಕ ಪರಿಸರಕ್ಕೆ ಪ್ರತಿಕ್ರಿಯಿಸಿದ. ನೈಸರ್ಗಿಕವಾಗಿ ಲಭ್ಯವಾದದ್ದಷ್ಟನ್ನೇ ರೋಗ ನಿರೋಧಕಗಳನ್ನಾಗಿ ಬಳಸಿದ್ದಾನೆ. ಈ ಕುರಿತು ಡಾನ್‌ಯಾಡರ್

ಅವರು " Represents one of man`s earlist reactions to his natural environment and involves the seeking of cures for his ills in the herbs, plants, minerals and animal substance of nature"[೧] ಎಂದು ಹೇಳುತ್ತಾರೆ.

ನಾಗರಿಕತೆ ಬದಲಾಗುತ್ತ ಬಂದಂತೆ ವೈಜ್ಞಾನಿಕ ಸಂಶೋಧನೆಗಳು ಹೆಚ್ಚುತ್ತಾ ಬಂದವು. ವೇದ ಕಾಲಕ್ಕಾಗಲೇ ಮಾನವ ಬಹಳಷ್ಟು ನಾಗರಿಕತೆನಾಗಿದ್ದ. ಆ ಕಾಲದಲ್ಲಿ ಋಷಿಮುನಿಗಳು ಪ್ರಕೃತಿಯ ಅತ್ಯಂತ ನಿಕಟ ಸಂಪರ್ಕವನ್ನು ಹೊಂದಿಕೊಂಡಿದ್ದವರಾಗಿದ್ದರು. ಕಾರಣ ವೈದ್ಯ ಪದ್ಧತಿಯಲ್ಲಿ ಬಹಳಷ್ಟು ಸಂಶೋಧನೆ ನಡೆಸಿ ಪೂರ್ವದಿಂದ ಬಂದ ಜನಪದರ ಸಾಂಪ್ರದಾಯಿಕ ವೈದ್ಯಪದ್ಧತಿಯನ್ನು ಪರಿಷ್ಕರಣಗೊಳಿಸಿದರು. ಅಲ್ಲದೆ ಶಾಸ್ತ್ರಬದ್ಧವಾಗಿ ಗ್ರಂಥಗಳನ್ನು ರಚಿಸಿದರು. ನಮ್ಮ ದೇಶಿಯ ವೈದ್ಯಪದ್ಧತಿ ಜನ ಅಭಿವೃದ್ಧಿಗಳಿಸಿದ ಪರಿಶುದ್ಧ ಪದ್ಧತಿಯಾಗಿದೆ. ಇದು ವೈದ್ಯಕೀಯ ಸೇವೆಗೆ ಮಾತ್ರವಲ್ಲದೆ ಪುರುಷಾರ್ಥಾ ಫಲಪ್ರಾಪ್ತಿಗೂ ಸಾಧನವಾಗಬಲ್ಲದು ಎಂಬ ನಂಬಿಕೆ ಇದೆ. ಅದನ್ನು ಚರಕ ಸಂಹಿತೆ ಸೂತ್ರಸ್ಥಾನ ೧-೧೪ರಲ್ಲಿ;

ಧರ್ಮಾರ್ಥ ಕಾಮಮೋಕ್ಷಣಾಮಾರೋಗ್ಯಂ ಮೂಲಮುತ್ತಮಂ
ರೋಗಾಸ್ತಸ್ಯಾಪಹರ್ತಾರಃ ಶ್ರೇಯಸೋ ಜೀವಿತಸ್ಯ ಚ"[೨]

ಎಂದಿದೆ. ಅಂದರೆ; ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆ ಮುಖ್ಯವಾದ ಮೂಲವು ಆರೋಗ್ಯವಾಗಿರುತ್ತದೆ. ರೋಗಗಳು ಅಂಥ ಮೂಲವನ್ನು ಭೇದಿಸಿ ಪ್ರಾಣಕ್ಕೂ ಸದ್ಗತಿಗೂ ಹಾನಿಯನ್ನುಂಟು ಮಾಡುತ್ತವೆ. ಆದ್ದರಿಂದ ಜೀವಹಿತಾರ್ಥವಾಗಿ ರೋಗಲಕ್ಷಣಗಳನ್ನು ಅವುಗಳಿಗೆ ಪರಿಹಾರವಾಗಿ ಚಿಕಿತ್ಸೆಯನ್ನು ವೈದ್ಯ ಗ್ರಂಥಗಳು ಹೇಳುತ್ತವೆ. ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಪ್ರಸ್ತಾಪಿಸಲಾದ ವಿಷಯವಸ್ತುವನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ಅಧ್ಯಾಯವು ವೈದ್ಯ ಪ್ರಕಾರಗಳು : ರೋಗ-ಲಕ್ಷಣ-ಚಿಕಿತ್ಸಾ ವಿಧಿವಿಧಾನಗಳನ್ನು ಕುರಿತ ಸಮಗ್ರ ಅಧ್ಯಯನವಾಗಿದೆ.

### ೪.೧. ವೈದ್ಯಶಾಸ್ತ್ರ ಪ್ರಕಾರಗಳು

ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ವೈವಿಧ್ಯಮಯವಾದ ವೈದ್ಯಕೀಯ ವಿಷಯವನ್ನು ಕಾಣುತ್ತೇವೆ. ಒಂದೇ ಕೃತಿಯಲ್ಲಿ ಮನುಷ್ಯನಿಗೆ ಸಂಬಂಧಿಸಿದಂತೆ; ಸಾಮಾನ್ಯವೈದ್ಯ, ಪುರುಷವೈದ್ಯ, ಸ್ತ್ರೀವೈದ್ಯ, ಬಾಲವೈದ್ಯ ಮತ್ತು ವಿಷವೈದ್ಯಕ್ಕೆ ಸಂಬಂಧಿಸಿದ ರೋಗ-ಲಕ್ಷಣ-ಚಿಕಿತ್ಸಾವಿಧಾನಗಳನ್ನು ಹೇಳಲಾಗಿದೆ. ಹಾಗೂ ಪ್ರತ್ಯೇಕ ಹಸ್ತಪ್ರತಿಗಳಲ್ಲಿ ಒಂದೊಂದೆ ವಿಷಯ ಕುರಿತು ವಿವರವಾದ ವಿಷಯಗಳು ಇವೆ. ಮನುಷ್ಯರಿಗೆ ಅಷ್ಟೆ ಅಲ್ಲದೆ ಪ್ರಾಣಿಗಳಿಗೂ ಸಂಬಂಧಿಸಿದಂತೆ ಪ್ರತ್ಯೇಕ ವೈದ್ಯಗಂಥಗಳೂ ರಚಿಸಲ್ಪಟ್ಟಿವೆ. ಈ ಎಲ್ಲಾ ವೈದ್ಯಶಾಸ್ತ್ರ ಸಾಹಿತ್ಯದಲ್ಲಿ ಪ್ರಸ್ತಾಪಿಸಲಾದ ಪ್ರಕಾರಗಳು ಹಾಗೂ ಚಾವುಂಡರಾಯ ತನ್ನ ಲೋಕೋಪಕಾರ ಗ್ರಂಥದಲ್ಲಿ ಪ್ರಸ್ತಾಪಿಸಲಾದ ಪ್ರಕಾರಗಳನ್ನು ಶಾಸ್ತ್ರೀಯವಾಗಿ ಅಧ್ಯಯನಕ್ಕೆ ಒಳಪಡಿಸಿಕೊಂಡು ಚರ್ಚಿಸುವ ಅಗತ್ಯವಿದೆ. ಆದುದರಿಂದ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲಾ ಕೃತಿಗಳಲ್ಲಿ (ಹಸ್ತಪ್ರತಿಗಳಲ್ಲಿ) ಉಲ್ಲೇಖಿತವಾದ ಪ್ರಕಾರಗಳನ್ನು ಕುರಿತು ಸ್ಥೂಲವಾಗಿ ಈ ಕೆಳಗಿನಂತೆ ವರ್ಗೀಕರಿಸಿಕೊಳ್ಳಲಾಗಿದೆ.



### ೫.೨.೧. ಮನುಷ್ಯ ವೈದ್ಯ

ಮನುಷ್ಯ ವೈದ್ಯವು ಹೆಸರೇ ಸೂಚಿಸುವಂತೆ ಮನುಷ್ಯರಿಗೆ ಸಂಬಂಧಿಸಿದ ವೈದ್ಯಪದ್ಧತಿ. ಮನುಷ್ಯ ವೈದ್ಯವು ಪುರುಷ, ಸ್ತ್ರೀ, ಮತ್ತು ಮಕ್ಕಳಿಗೆ ತಗುಲುವ ರೋಗ-ಲಕ್ಷಣ-ಚಿಕಿತ್ಸಾ ವಿಧಿವಿಧಾನಗಳನ್ನು ಒಳಗೊಂಡಿರುತ್ತದೆ. "ಮನುಷ್ಯನ ಶರೀರವು ಪಂಚಭೂತಗಳಿಂದಾದದ್ದು. ಇವುಗಳಿಗೆ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೇ ಮೂಲವೆಂದೂ ಈ ಪಂಚಭೂತ ಮತ್ತು ತ್ರಿಗುಣ (ವಾತ, ಪಿತ್ತ, ಕಫ,) ದೋಷಗಳು; ಇವುಗಳ ಫಲವಾಗಿ ಮನುಷ್ಯನ ಶರೀರವನ್ನು ಒದಗಿಸುವ, ಎತ್ತಿ ನಿಲ್ಲಿಸುವ, ಕೆಡಿಸುವ ಮೂರು ಧಾತುಗಳು (ದೋಷಗಳು) ವಾತ, ಪಿತ್ತ, ಕಫಗಳೆಂದು ಆಯುರ್ವೇದ ಪ್ರತಿಪಾದಿಸುತ್ತದೆ."[೩] ವಾತ, ಪಿತ್ತ, ಕಫ ಈ ತ್ರಿದೋಷಗಳಿಂದ ಸಕಲ ರೋಗಗಳು ಉತ್ಪನ್ನವಾಗುತ್ತವೆನ್ನುವುದು ಇಲ್ಲಿಯ ಪ್ರಧಾನ ಸಿದ್ಧಾಂತ. 'ರೋಗಸ್ತು ದೋಷವೈಷಮ್ಯಂ ದೋಷಸಾಮ್ಯಮ ರೋಗತಾ' ಎಂದರೆ ಮನುಷ್ಯಜೀವಿಗೆ ಬರುವ ಸಕಲ ರೋಗಗಳಿಗೂ ಈ ದೂಷಿತ ತ್ರಿದೋಶಗಳೇ ಕಾರಣವೆಂದೂ, ಈ ದೋಷಗಳ ಸಾಮಾನ್ಯಾವಸ್ಥೆಯೇ ಆರೋಗ್ಯಕ್ಕೆ ಕಾರಣವಾಗುವುದೆಂದೂ ವೈದ್ಯಶಾಸ್ತ್ರ ಗ್ರಂಥಗಳಲ್ಲಿ ಹೇಳಲಾಗಿದೆ. ಅಂತೂ ಆರೋಗ್ಯ ಹಾಗೂ ಅನಾರೋಗ್ಯಗಳಿಗೆ ಈ ತ್ರಿದೋಶಗಳೇ ಕಾರಣವಾದ್ದರಿಂದ ಪ್ರತಿಯೊಂದು ವೈದ್ಯ ಗ್ರಂಥಗಳಲ್ಲಿ ವಾತ ಪಿತ್ತ ಕಫಗಳ ಉಲ್ಬಣಕ್ಕೆ ಕಾರಣಗಳನ್ನು ಅವುಗಳಿಂದ ಬರುವ ರೋಗ-ನಿಧಾನ-ಲಕ್ಷಣ ಹೇಳಿ, ಅವುಗಳ ಶಮನಕ್ಕೆ ಚಿಕಿತ್ಸೋಪಾಯಗಳನ್ನು ಸೂಚಿಸಿದ್ದಾರೆ. ಅದಕ್ಕೂ ಪೂರ್ವದಲ್ಲಿ ಆರೋಗ್ಯ ರಕ್ಷಣೆಯ ಬಗ್ಗೆ ದಿನಚರ್ಯೆ, ಋತುಚರ್ಯೆಗಳನ್ನು ಕೆಲ ಗ್ರಂಥಗಳಲ್ಲಿ ಹೇಳಿರುವರು. ನಂತರ ವೈದ್ಯ ರೋಗಿಗಳನ್ನು ಪರೀಕ್ಷಿಸಲು ನಾಡಿ, ಜಿಹ್ವೆ ಮತ್ತು ಮೂತ್ರ ಪರೀಕ್ಷೆ ಮಾಡುವ ಕ್ರಮಗಳು ಉಕ್ತವಾಗಿರುತ್ತವೆ. ಈ ಕುರಿತು ವಿವರವಾಗಿ ತಿಳಿಯಲು ಈ ಮನುಷ್ಯ ವೈದ್ಯದಲ್ಲಿ ಮೊದಲು ರಕ್ಷಣಾಕ್ರಮಗಳು ಮತ್ತು ಪರೀಕ್ಷೆಯ ವಿವರಗಳನ್ನು ಈ ಕೆಳಗಿನಂತೆ ವಿಷದಪಡಿಸಲಾಗಿದೆ.

**ದಿನಚರ್ಯೆ :**

ದಿನಚರ್ಯೆ ಎಂದರೆ ಪ್ರತಿನಿತ್ಯದ ನಿಯಮಗಳನ್ನು ಕ್ರಮಬದ್ಧವಾಗಿ ಪಾಲಿಸುವುದು ಎಂದರ್ಥ. ಆರೋಗ್ಯರಕ್ಷಣೆಗೆ ಪ್ರತಿದಿನ ಮುಂಜಾನೆಯಿಂದ ಮಲಗುವವರೆಗೂ ಮಾಡಬೇಕಾದ ಕಾರ್ಯಗಳನ್ನು ಈ ರೀತಿ ಹೇಳಲಾಗಿದೆ;

ದಿನದಾದಿಯೊಳೆದ್ದು ದೇವ।
ರ ನೆನೆವು ತಾಯುಷ್ಯವನ್ನು ರಕ್ಷಿಸುವುದಕಂ॥
ಘನಕಾರ್ಯಕೃತ್ಯಗಳನುಂ।
ಅನುಗೈದಾಮೇಲೆ ಪೂರ್ವಮುಖದೊಳ್‌ಕುಳಿತುಂ॥ (೧-೧೩)

ಕಾರಿಯಾ[ಲ] ಹುಲಿಗಿಲೆಕ್ಕೆಯ।
ಧರಿಪುದು ಗೇಣುದ್ದದಂತೆ ಕಾಷ್ಟವನದರಿಂ॥
ಪರಿಹರಿಸು ಹಲ್ಲು ನಾಲಗೆ ।

ಗೊಲಿದಿಹ ಮಲ [ವ] ರುಚಿಯು ಲಘುದೃಢತರುಹವು॥ (೧–೧೪)
ಜ್ವರದೊಳ್ ಬಾಯ್‌ಬಸಳೆಯ
ಮುಖ। ಮರಸಿದ ವಾತದೊಳ್ ಜೀರ್ಣದೊಳ್‌ತೃಷೆಕೆಮ್ಮಿ[ನ]
ಶಿರನೋತ ಕಣ್ಣುರೋಗದೊಳಿರೆ
ಮಾಡಲಿ ಬೇಡ ದಂತಧಾನವನಗಳನುಂ (೧–೧೫)"[೪]

ಆಯುಷ್ಯವನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ಬೆಳಗ್ಗೆ ದೇವರನ್ನು ನೆನೆಯುತ್ತಾ ಮೇಲೆದ್ದು ನಿತ್ಯ ಕಾರ್ಯಗಳನ್ನು ಮುಗಿಸಿ ಪೂರ್ವಾಭಿಮುಖವಾಗಿ ಕುಳಿತುಕೊಳ್ಳಬೇಕು. ಕರಿಯ ಜಾಲಿ, ಆಲ, ಹುಲಿಗಿಲ ಅಥವಾ ಎಕ್ಕೆಯ ಕಡ್ಡಿಯಿಂದ ಹಲ್ಲುಜ್ಜಬೇಕು. ಇದರಿಂದ ಹಲ್ಲು ನಾಲಿಗೆಗಳಿಗೆ ಒದಗಿಬಂದ ಕಸವು ಕಳೆದು ಅರುಚಿಯು ಹೋಗಿ ಅವು ದೃಢವಾಗುವವು. ಜ್ವರವಿದ್ದಾಗ, ಬಾಯ್‌ಬಸಳೆ ಬಂದಾಗ, ವಾತದಿಂದ ಮುಖ ಒಣಗಿದಾಗ, ಅಜೀರ್ಣಗಳಲ್ಲಿ, ಬಾಯಾರಿಕೆ, ಕೆಮ್ಮುಗಳಿದ್ದಾಗ, ತಲೆನೋವು, ಕಣ್ಣು ರೋಗಗಳಿದ್ದಾಗ ದಂತಧಾವನ ಮಾಡಬಾರದು ಎಂದು ಹೇಳಲಾಗಿದೆ. ಪ್ರತಿದಿನವೂ ಕಣ್ಣಿಗೆ ಅಂಜನವಿಡಬೇಕು. ಅಲ್ಲದೇ; (ಸೌವೀರಾಂಜನ) "ಏಳನೆಯ ದಿನದಲ್ಲಿ ರಸಾಂಜನದ ಉಪಯೋಗವು ನೇತ್ರಕ್ರಿಮಿಗಳಿಗೆ ಸಂಜೀವಿನಿಯಾಗಿರುವುದೆಂಬುದು ಬಾಹಟನ ಅಭಿಪ್ರಾಯವಾಗಿದೆ"[೫]. ಮುಂದುವರಿದು ನಸ್ಯ ಔಷಧದ ಹೊಗೆ ಮತ್ತು ತಾಂಬೂಲವನ್ನು ಅವಶ್ಯವಾಗಿ ಉಪಯೋಗಿಸಬಹುದು. ಜ್ವರ ಕಣ್ಣು ನೋವು ಮೂರ್ಛೆರೋಗ ರಕ್ತಸ್ರಾವ ಮತ್ತು ಪಿತ್ಯಾಧಿಕ್ಯಗಳಲ್ಲಿ ವೀಳ್ಯೆಯವನ್ನು ಹಾಕಿಕೊಳ್ಳಬಾರದು. ಬೆಳಗಿನ ಜಾವದಲ್ಲಿ, ಊಟದ ಅನಂತರದಲ್ಲಿ, ಸ್ನಾನಮಾಡಿದ ನಂತರ ಹಾಗೂ ವಾಂತಿಯಾಗುವಾಗ ವೀಳ್ಯೆದೆಲೆಯನ್ನು ಸುಣ್ಣ ಹಚ್ಚಿ ಕಾಚಿನೊಡನೆ ಹಾಕಿಕೊಳ್ಳಬೇಕು. ನಿತ್ಯವೂ ಸ್ನಾನ ಮಾಡಬೇಕು, ಅದರಿಂದ ವಾತ, ಪಿತ್ತ, ಆಯಾಸಗಳು ಪರಿಹಾರವಾಗುವುವು, ಪುಷ್ಟಿಬರುವುದು, ದೃಷ್ಟಿ ಚೆನ್ನಾಗುವುದು, ನಿದ್ರೆ ಬರುವುದು, ಆಯುಷ್ಯ ಹೆಚ್ಚಿ ಶರೀರ ಶುಚಿಯಾಗಿ ಕಾಂತಿ ಅಧಿಕವಾಗುತ್ತದೆ. ಕೆಮ್ಮು ಮತ್ತು ಕ್ಷಯಗಳಿದ್ದಾಗ, ಅಜೀರ್ಣವಾದಾಗ, ವಾಂತಿಯಾದಾಗ ತಲೆಗೆ ಸ್ನಾನ ಮಾಡಬಾರದು. ತಲೆ, ಕಿವಿ, ಕಾಲುಗಳಿಗೆ ತೈಲವನ್ನು ಹೆಚ್ಚಾಗಿ ಹಚ್ಚಬೇಕು. ಇದರಿಂದ ಒದಗಿ ಬಂದ ರೋಗಗಳು ಹೋಗಿ ಇಂದ್ರಿಯ ಸಮೂಹವು ಗೆಲುವಿನಿಂದ ಕೂಡತ್ತದೆ ಎಂದು ಹೇಳಲಾಗಿದೆ.

ಭಾರತೀಯರು ದೈವಾರಾಧಕರು, ದೇವರನ್ನು ಆರಾಧಿಸುವ ಮೂಲಕ ಮನಸ್ಸನ್ನು ಸುಭ್ರಗೊಳಿಸಿಕೊಳ್ಳಲು ಸಾಧ್ಯ. ಆ ಮೂಲಕ ಮನಸ್ಸು ಸುಭ್ರಗೊಂಡಾಗ ದೇಹಾರೋಗ್ಯ ಹೆಚ್ಚುವುದು. ಹಾಗೂ ಬೆಳಗಿನ ಸೂರ್ಯ ಕಿರಣಗಳು ಕೂಡ ಆರೋಗ್ಯದಾಯಕ. ಬಯಲು ಹವೆ ಮತ್ತು ಬೆಳಕಿನಲ್ಲಿರುವ ಪ್ರಾಣಿ, ಗಿಡ, ಮರಗಳು ಹೆಚ್ಚು ಆರೋಗ್ಯವಂತವಾಗಿರುತ್ತವೆ. ಈ ಕಿರಣಗಳಿಂದ ಅನೇಕ ಚರ್ಮ ರೋಗಗಳು ಶಮನವಾಗುತ್ತವೆ. ಆದ್ದರಿಂದ ನಮ್ಮ ಪೂರ್ವಜರು ಹಿಂದಿನ ಕಾಲದಿಂದಲೂ ಆರೋಗ್ಯ ಹಾಗೂ ದೀರ್ಘಾಯುಷ್ಯಗಳ ಲಾಭಕ್ಕಾಗಿ ಸೂರ್ಯನನ್ನು ಪೂಜಿಸಿ ತನ್ಮೂಲಕ ಆರೋಗ್ಯಭಾಗ್ಯವನ್ನು ಪಡೆಯುತ್ತಿದ್ದರು. ಹಾಗೂ ಇಷ್ಟ ದೇವತೆಗಳನ್ನು ಮನದಲ್ಲಿ ನೆನೆದರೆ ಮನಸ್ಸು ಸಮಾಧಾನವಾಗಿ ಇಡೀ ದಿವಸ ಹಾಗೆಯೇ ಲವಲವಿಕೆಯಿಂದ ಇರಲು ಸಾಧ್ಯ ಎಂದು ನಂಬಿದ್ದರು. ಹಲ್ಲುಗಳನ್ನು ವಿವಿಧ ಸಸ್ಯಗಳ ಕಡ್ಡಿಗಳಿಂದ ಉಜ್ಜುವುದರಿಂದ ಬಾಯಿಯಲ್ಲಿನ ಕ್ರಿಮಿಕೀಟಗಳು ನಾಶವಾಗಿ ಬಾಯಿಯ ದುರ್ವಾಸನೆ ಹೋಗಿ ಆರೋಗ್ಯದಿಂದ ಇರಲು

ಸಾಧ್ಯ. ಅಲ್ಲದೆ ತಗೆದುಕೊಂಡ ಆಹಾರ ರುಚಿಕರವಾಗಿ ಆರೋಗ್ಯ ವೃದ್ಧಿಯಾಗುತ್ತದೆ. ಇದು ನಮ್ಮ ಪೂರ್ವಜರ ಆಶಯವೂ ಆಗಿತ್ತು. ಮುಂದುವರೆದು;

ತಿರುಗಾಡಲು ದೇಹ[ವು] ಸುಸ್ಥಿರ
ದೃಢತರವಹುದು ವಾತ ಪಿತ್ತದ ರೋಗಿಯು
ತರಳನು ವೃದ್ಧರು ಜೀರ್ಣೆಯು।
ಪರಿಹರ [ವ] ಮಾಡಬೇಕು ಸಂಚರಿಸುವುದಂ (೧-೨೨)

ಜ್ವರ ಕೆಮ್ಮು ರಕ್ತ ಪಿತ್ತವು।
ಸೊರಗುವ ಶ್ರಮ ವಾಂತಿ ಬಡವು ಕ್ಷಯ ನೀರಡಿಕೆಯು
ವರಸು [ಗು] ತಿರುಗಾಡಿದಡಾ।
ವರಿಸು [ಗು] ನಿಶ್ಚಯವು ಕಾಣಬರುತಿಹವಿಳೆಯೊಳ್ (೧-೨೩)

ತಿರುಗಾಡೆ ಕಫ ಮಲಹ [ರಂ] ।
ಸೊಗಸುಂ ದೀಪನವು ಕಾಮಕಾಯಕೆ ದೃಢವುಂ
ತೆಗೆವುದು ಸೆಖೆ ನೀರಡಿಕೆಯ।
ಮಿಗುವುದು ಬಲತಿನಿಸು ಬೆವರು ಶ್ರಮವಡಗುವುದಂ (೧-೨೪)

ತಲೆಗತಿ ಬಿಸಿನೀ[ರೆ]ರೆಯಲು।
ಬಲುಹಂ ಕುಂದಿಪುದು ಕಣ್ಣು ಕೂದಲುಗಳ ತ
ಜ್ಜಲದಲಿ ಕಂಠ ಸ್ನಾನವ।
ನೊಲಿದುಂ ಮಾಡಲು ಕಾಯಕಾಂತಿ ಬಲಕರವುಂ (೧-೨೫)

ಕಣ್ಣು ಕಿವಿ [ಮೂಗಜೀರ್ಣವು] ।
ಹಣ್ಣಿದ [ಹೆಬ್ಬತಿಸಾರವು ಹೊಟ್ಟೆಯ ಉಬ್ಬರ
ದಣ್ಣ] ಗಳು ಶಿರದಿ ಜಳಕವ ।
[ತಣ್ಣೀರ್ ಬಿಸಿನೀರಂ] ಬಿಡೆ ದೃಢತರವಹ [ರುಂ] (೧-೨೬)

ಹಿತ ಮಿತವನುಣ್ಣು ಮುಪ್ಪಲಿ।
ಅತಿಹಿತ ಪಥ್ಯವನು ಪಾಯದೊಳ್ ಭೋಜಗಳ

ನತಿಶೀಘ್ರದೊಳತಿಯೆಲ್ಲನೆ।

ಜತೆಯೊಳ್ ವಿಷವಹ ವಸ್ತು [ವ ಬಿಡೆ] ಸುಖಕರವುಂ (೧-೨೭)

ಸಕಲ ಬೆಗೆಯಿಂದ ದೇಹಕೆ।

ಸುಖಕರವನು ಮಾಡಬೇಕು [ಧರ್ಮಾತ್ಮರಿಗಂ

ಸುಖವ]ಲ್ಲದಿಲ್ಲವದರಿಂ ಪ್ರಕಟಿಸಿ

ಮಾಡುವುದು ಧರ್ಮವನು ಸುಮನಸ[ದಿಂ] (೧-೨೮)"[೬]

ತಿರುಗಾಡುವುದರಿಂದ ದೇಹವು ದೃಢತೆ ಹೊಂದುತ್ತದೆ. ವಾತ ಪಿತ್ತ ರೋಗಗಳು ಬಾಲಕ ಮುದುಕ ಹಾಗೂ ಕೃಶವಾದವರು ತಿರುಗಾಡಬಾರದು. ಜ್ವರ, ಕೆಮ್ಮು, ರಕ್ತಪಿತ್ತ, ಬಳಲಿಕೆಯ ಶ್ರಮ, ವಾಂತಿ, ಕೃಶತೆ, ಕ್ಷಯ, ನೀರಡಿಕೆ ಇವುಗಳು ಅತಿಯಾಗಿ ತಿರುಗಾಡಿದರೆ ಕಾಣಬರುತ್ತವೆ. ತಿರುಗಾಡುವುದರಿಂದ ಕಫ, ಮಲಬದ್ಧತೆ ನಿವಾರಣೆಯಾಗಿ ಕಾಮೋದ್ದೀಪನೆಯಾಗುತ್ತದೆ; ಸೆಖೆ ಬಾಯಾರಿಕೆ ಪರಿಹಾರವಾಗುತ್ತದೆ. ಅತಿ ಬಿಸಿ ನೀರನ್ನು ತಲೆಗೆ ಹಾಕಿಕೊಳ್ಳುವುದರಿಂದ ಕಣ್ಣು ಮತ್ತು ಕೂದಲುಗಳ ಬಲವನ್ನು ಕುಂದಿಸುತ್ತದೆ. ಅದೇ ಬಿಸಿ ನೀರನ್ನು ಕತ್ತಿನಿಂದ ಕೆಳಭಾಗಕ್ಕೆ ಉಪಯೋಗಿಸಿದರೆ ಶರೀರಕಾಂತಿ ಹೆಚ್ಚಿ ಬಲ ಬರುತ್ತದೆ. ಕಣ್ಣು ಕಿವಿ ಮೂಗಿನ ರೋಗವಿದ್ದವರೂ, ಅಜೀರ್ಣ ಹೊಂದಿದವರೂ, ಅತಿಸಾರ ಹೊಟ್ಟೆಯುಬ್ಬರವಿದ್ದವರೂ ತಣ್ಣೀರಿನಿಂದಾಗಲಿ ಬಿಸಿನೀರಿನಿಂದಾಗಲಿ ತಲೆಗೆ ಸ್ನಾನ ಮಾಡದಿದ್ದರೆ ದೃಢಕಾಯರಾಗುವರು. ಮುಪ್ಪಿನಲ್ಲಿ ಹಿತಮಿತವಾಗಿ ಊಟ ಮಾಡಬೇಕು, ಪ್ರಾಯದಲ್ಲಿ ಹಿತವಾದ ಪಥ್ಯವನ್ನು ಆಚರಿಸಬೇಕು. ಊಟವನ್ನು ಅತಿ ಶೀಘ್ರವಾಗಲಿ, ಅತಿ ಮೆಲ್ಲನೆಯಾಗಲಿ ಮಾಡಬಾರದು. ಹಾಗೂ ನಂಜಾಗುವ ಪದಾರ್ಥಗಳನ್ನು ತಿನ್ನಬಾರದು. ಅಲ್ಲದೆ ಎಲ್ಲ ರೀತಿಯಿಂದಲೂ ದೇಹಕ್ಕೆ ಸುಖಕರವಾಗುವಂತೆ ನೋಡಿಕೊಳ್ಳಬೇಕು. ಸುಖವು ಧರ್ಮಾತ್ಮರಿಗಲ್ಲದೆ ಉಳಿದವರಿಗೆ ದೊರೆಯಲಾರದು, ಆದುದರಿಂದ ಒಳ್ಳೆಯ ಮನಸ್ಸಿಂದ ಧರ್ಮ ಮಾಡಬೇಕು ಎಂದೆಲ್ಲ ಹೇಳಲಾಗಿದೆ. ಇಲ್ಲಿ ಧರ್ಮವೆಂದರೆ ಸಹಾಯ ಸಹಾನುಭೂತಿ ಎಂದರ್ಥ.

ನಮ್ಮ ದೇಶಿ ವೈದ್ಯ ಪದ್ಧತಿಯಲ್ಲಿ ನಿಸರ್ಗವೇ ಔಷಧಾಲಯ. ಪ್ರಕೃತಿಯೇ ವರದಾನ. ಪ್ರಕೃತಿ ಮಧ್ಯೆ ಬದುಕುವ ಮನುಷ್ಯನು ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳಲು, ರೋಗದಿಂದ ಮುಕ್ತನಾಗಲು, ಮತ್ತು ಆಯುಷ್ಯವನ್ನು ವೃದ್ಧಿಮಾಡಿಕೊಳ್ಳಲು ನಿಯಮವನ್ನು ಪರಿಪಾಲಿಸಬೇಕಾಗುತ್ತದೆ. ಪುರುಷಾರ್ಥ ಸಾಧನೆಗಾಗಿ ಆರೋಗ್ಯವೇ ಮುಖ್ಯ ಎಂದು ಹೇಳುವ ನಮ್ಮ ಪ್ರಾಚೀನ ವೈದ್ಯಪದ್ಧತಿಯೂ ಧರ್ಮದಿಂದ ನಡೆಯಬೇಕು, ಧರ್ಮದಿಂದ ನಡೆದವರಿಗೆ ಮಾತ್ರ ಆರೋಗ್ಯ ಭಾಗ್ಯ ಎಂದು ಸಾರುತ್ತದೆ. ಆರೋಗ್ಯವು ಹದಗೆಡಲು ತ್ರಿದೋಷಗಳೇ ಕಾರಣವೆಂದು ಹೇಳುವ ನಮ್ಮ ದೇಶಿ ವೈದ್ಯಶಾಸ್ತ್ರ ಅದರಿಂದ ಮುಕ್ತರಾಗಲು ಅನೇಕ ಕ್ರಮಗಳನ್ನು ಪಾಲಿಸಲು ಸೂಚಿಸುತ್ತದೆ. ನಮ್ಮ ಸಾಹಿತ್ಯ ಕೃತಿಗಳಲ್ಲಿ ನೋಡಿದರೂ ಸರ್ವಜ್ಞ ಮೂರ್ತಿ ತನ್ನ ತ್ರಿಪದಿಯಲ್ಲಿ ದಿನಚರ್ಯ ನಿಯಮಗಳನ್ನು ಅಭಿವ್ಯಕ್ತಪಡಿಸಿದ್ದಾನೆ. ನಮ್ಮ ವೈದ್ಯಪದ್ಧತಿಯ ಮುಖ್ಯ ಉದ್ದೇಶ ಕೇವಲ ರೋಗವನ್ನು ಹೋಗಲಾಡಿಸುವುದಲ್ಲದೆ, ರೋಗ ಬಾರದಂತೆ ಎಚ್ಚರಿಕೆ ವಹಿಸುವುದಾಗಿದೆ.

ಆದ್ದರಿಂದ ದಿನಚರ್ಯವನ್ನು ಕರಾರುವಕ್ಕಾಗಿ ಪಾಲಿಸಿದರೆ ಆಯುಷ್ಯವೃದ್ಧಿಯಾಗಿ ಸುಖ, ಸಂತೋಷ, ನೆಮ್ಮದಿಯ, ಬದುಕನ್ನು ಸಾಗಿಸಲು ಸಾಧ್ಯವಾಗುತ್ತದೆ. ಆದ್ದರಿಂದ ಈ ದಿನಚರ್ಯ ಕ್ರಮವು ಅತ್ಯಂತ ಉಪಯುಕ್ತವಾದುದಾಗಿದೆ. ಇಂದು ಆಧುನಿಕ ವೈದ್ಯಪದ್ಧತಿಗಳೆಲ್ಲರಲ್ಲೂ ಈ ನಿಯಮಗಳನ್ನು ಹೇಳುತ್ತಾರೆ. ಮತ್ತು ಅನುಭವಿಕರು ಇದನ್ನು ಪ್ರಚಾರ ಮಾಡುತ್ತಾರೆ. ಇಂಥ ಕ್ರಮಗಳು ಮನುಕುಲಕ್ಕೆ ಅತ್ಯಂತ ಉಪಯುಕ್ತವಾದವುಗಳಾಗಿವೆ.

**ಋತುಚರ್ಯ :**

ಋತುಚರ್ಯ ಎಂದರೆ ಋತುಮಾನಕ್ಕೆ ತಕ್ಕಂತೆ ಪಾಲಿಸಬೇಕಾದ ನಿಯಮಗಳು. ಋತುಗಳನ್ನು ಎರಡು ತಿಂಗಳಿಗೆ ಒಂದು ಋತು ಎಂದು ಹೇಳಿ, ಈಗಿನ ಕ್ಯಾಲೆಂಡರಿನಂತೆ ಜನವರಿ ಫೆಬ್ರುವರಿ 'ಶಿಶಿರ ಋತು', ಮಾರ್ಚ್ ಎಪ್ರೀಲ್ 'ವಸಂಥ ಋತು', ಮೇ ಜೂನ್ 'ಗ್ರೀಷ್ಮ ಋತು'. ಜುಲೈ ಅಗಸ್ಟ್ 'ವರ್ಷ ಋತು', ಸೆಪ್ಟಂಬರ್ ಅಕ್ಟೋಬರ್ 'ಶರತ್ ಋತು', ನವೆಂಬರ್ ಡಿಸೆಂಬರ್ 'ಹೇಮಂತ ಋತು', ಎಂದು ಹೇಳಬಹುದು. ಒಟ್ಟು ಆರು ಋತುಗಳು. ಮೊದಲ ಆರು ತಿಂಗಳು ಉತ್ತರಾಯಣವೂ ಉಳಿದ ಆರು ತಿಂಗಳುಗಳು ದಕ್ಷಿಣಾಯನವೂ ಆಗುತ್ತವೆ.

ಶಿಶಿರ ವಸಂತ ಗ್ರೀಷ್ಮ ಋತುಗಳಲ್ಲಿ ಖಾರ ಒಗರು ಕಹಿ ಪದಾರ್ಥಗಳನ್ನು ಸೇವಿಸಬೇಕು. ಗಾಳಿ ಬಿಸಿಲುಗಳಲ್ಲಿ ಸ್ವಲ್ಪಹೊತ್ತು ಮಾತ್ರ ಇರಬೇಕು. ಈ ರೀತಿಯಿಂದ ಮೈಗೆ ಬಲ ಮತ್ತು ಪುಷ್ಟಿಯುಂಟಾಗುತ್ತದೆ. ವರ್ಷ ಶರತ್ ಹೇಮಂತ ಋತುಗಳಲ್ಲಿ ಕ್ರಮವಾಗಿ ಹುಳಿ ಉಪ್ಪು ಸಿಹಿ ರಸಗಳನ್ನು ಉಪಯೋಗಿಸಬೇಕು. ವಾತಹರವಾದ ತೈಲವನ್ನು ಶರೀರಕ್ಕೆ ಉಜ್ಜಿ, ನಡುವನ್ನು ಬಲವಾಗಿ ಒತ್ತಿ ಉಜ್ಜಿ ಒಗರಿನಿಂದ ಮೈ ಹೆಡಸನ್ನು ತೊಳೆದು ಬಿಸಿನೀರಿನಿಂದ ಸ್ನಾನಾದಿ ಶೌಚಕಾರ್ಯಗಳನ್ನು ಮಾಡಬೇಕು. ಕುಂಕುಮ ಕೇಸರ ಮತ್ತು ಹೂವಿನ ಗಂಧಗಳನ್ನು ಶರೀರಕ್ಕೆ ಲೇಪಿಸಿ ಅಗರುವಿನ ಧೂಪವನ್ನು ತೆಗೆದುಕೊಂಡು, ಸ್ನಿಗ್ಧವಾದ ರಸಗಳನ್ನೂ ಪುಷ್ಟಿಕೊಡುವ ಫಲ ಮದ್ಯಗಳನ್ನೂ ಸೇವಿಸಬೇಕು. ಸಾರಾಯಿ ಮೀನುಗಳನ್ನು ಉಪಯೋಗಿಸುವುದು. ಹಾಲು ಕಬ್ಬಿನ ಪದಾರ್ಥಗಳು ಎಣ್ಣೆ ಗೋದಿ ಉದ್ದಿನ ಭಕ್ಷ್ಯಗಳನ್ನು ತೆಗೆದುಕೊಳ್ಳಬೇಕು. ಬಿಸಿಯನ್ನವನ್ನು ಉಂಡು ಬೆಚ್ಚನೆಯ ಹಾಸಿಗೆ ಕಂಬಳಿಗಳನ್ನು ಹೊದ್ದು ಮಲಗಬೇಕು. ಯೋಗ್ಯ ರೀತಿಯ ಬಿಸಿಲು ಗಾಳಿ ಮತ್ತು ಬೆವರನ್ನುಂಟುಮಾಡುವ ಉಪಾಯಗಳನ್ನು ಮಾಡಬೇಕು. ಪಾದರಕ್ಷೆಯನ್ನು ಯಾವಾಗಲೂ ತೆಗೆಯದೆ ಎಚ್ಚರಿಕೆಯಿಂದಿರು ಎಂದು ಹೇಳಲಾಗಿದೆ"[೭].

ಪ್ರತಿಯೊಂದು ಋತುಕಾಲದಲ್ಲಿಯೂ ಹಗಲು ಇರುಳುಗಳ ಅವಧಿಯಲ್ಲಿ ಬಿಸಿಲು, ಹವೆ, ಶೀತ, ಉಷ್ಣಾಂಶಗಳ ಬದಲಾವಣೆ ಹೀಗೆ ಪರಿಸರದಲ್ಲಿ ನಾನಾ ವೈಚಿತ್ರ್ಯಗಳು ಜರಗುತ್ತಿರುತ್ತವೆ. ನಾವು ಆರೋಗ್ಯಕ್ಕೆ ಅನುಕೂಲವಾಗುವಂತೆ ಒಂದೇ ರೀತಿಯ ಆಹಾರ ವಿಹಾರಗಳನ್ನೂ ಎಲ್ಲ ಕಾಲದಲ್ಲೂ ಅನುಸರಿಸುತ್ತ ಹೋಗುವುದು ಸರಿ ಎನಿಸುವುದಿಲ್ಲ. ಆಯಾ ಋತುಮಾನಕ್ಕೆ ತಕ್ಕಂತೆ ಬದಲಾದ ವಾತಾವರಣಕ್ಕನುಗುಣವಾಗಿ ಮಾನವ ಪ್ರಾಣಿಯಲ್ಲೂ ಅದರ ಪ್ರತಿಕ್ರಿಯೆಗಳು ಕಾಣಲೇಬೇಕಾಗುತ್ತದೆ. ಈ ಪ್ರತಿಕ್ರಿಯಾ ಸ್ವರೂಪದ ವಿಕಾರಗಳಿಂದ ನಮ್ಮ ಆರೋಗ್ಯವು ಕೆಡದಂತೆ ನಮ್ಮ ನಿತ್ಯ ಆಹಾರ ವಿಹಾರಗಳಲ್ಲಿಯೇ ಕೆಲ ಬದಲಾವಣೆ ಮಾಡಿಕೊಂಡರೆ ಅವುಗಳನ್ನು ವಿರೋಧಿಸಬಹುದು. ಆದ್ದರಿಂದ ಈ ಋತುಮಾನಕ್ಕೆ ತಕ್ಕಂತೆ ಆಹಾರ ಪದಾರ್ಥಗಳನ್ನು

ಸೇವಿಸಲು ಸೂಚಿಸಲಾಗಿದೆ. ಅಲ್ಲದೆ ವೈದ್ಯಶಾಸ್ತ್ರದಲ್ಲಿ ಸೂಚಿಸಿದ ಆಯಾ ಕಾಲಕ್ಕೆ ತಕ್ಕಂತೆ ಲಭ್ಯವಾದ ಸಸ್ಯಮೂಲ ಮತ್ತು ಪ್ರಾಣಿ ಮೂಲಗಳನ್ನು ಸೂಚಿಸಿದ್ದಾರೆ. ಹೇಮಂತ ಋತು ಮತ್ತು ಶರೀರ ಋತುವಿನಲ್ಲಿ;

ಎಡಬದಿ ಕುಚ[ಒತಿ] ಮೋಹಿನಿ।

ಮದವತಿಯಂ ಚದುರೆಯುಷ್ಣ ಕಾಯದ ಸತಿಯಂ॥

ಗದಿ ಕುಂಕುಮವಿತ್ತಾಲಿಂ।

ಗದಿ ಚಳಿಯನು ಕಳೆಯಬೇಕು ಕೋಣೆಯ ಮನೆಯೊಳ್ (೪೭)"[೮].

ಎದೆಯ ಪಕ್ಕದಲ್ಲಿ ಪುಷ್ಟ ಕುಚಗಳಿಂದ ಶೋಭಿಸುವ ಪ್ರಿಯಳಾದ, ಮದಿಸಿದಂತಹ, ಚತುರಳಾದ, ಉಷ್ಣಕಾಯದ ಸತಿಯ ಶರೀರದಲ್ಲಿ ಕುಂಕುಮ ಕೇಸರಿಯನ್ನು ಹಚ್ಚಿ ಕೋಣೆಯಲ್ಲಿ ಆಲಿಂಗಿಸಿಕೊಂಡು ಮಲಗಿ ಚಳಿಯನ್ನು ಕಳೆಯಬೇಕು ಎಂದು ಹೇಳಲಾಗಿದೆ. ಇದು ಕೇವಲ ಪುರುಷರಿಗೆ ಮಾತ್ರ ಹೇಳಿದಂತಿದೆ. ಆದರೆ ಇದನ್ನು ಪುರುಷ, ಸ್ತ್ರೀ ಇಬ್ಬರಿಗೂ ಅನ್ವಯಿಸಿಕೊಳ್ಳುವುದು ಉತ್ತಮ. ಈ ಋತುವಿನಲ್ಲಿ ಚಳಿಯು ಅಧಿಕವಾಗಿದ್ದು ಕಫ ಹೆಚ್ಚುವುದರಿಂದ ಈ ಸಂದರ್ಭದಲ್ಲಿ ಕಫ ಕರಗಿ ಆರೋಗ್ಯಕರವಾದ ಲೈಂಗಿಕತೆಗೆ ಅನುಕೂಲ ಎನ್ನುವ ದೃಷ್ಟಿಯಿಂದ ಹೇಳಿದಂತಿದೆ. ಮುಂದುವರಿದು,

ಶಿಶಿರದಿ ಕಫ [ವುಂ] ಬೀಳ್ವುದು।
ವಸಂತದೊಳ [ಮ]ಧಿಕವಾಗಿ ಮುಚ್ಚುವುದಗ್ನಿಯ
ನಸಿವುದು ಜಠರಾನಳನಂ।
ಅಸದಳವಾಗಿರ್ದರೋಗಿಗಳ ಮ[ನೆ]ಬೆಳೆಗುಂ (೪೯)

ಕಫ ಹರಕೋಸುಗ ಬೇಗದಿ।
ಉಪಯೋಗಿಸು ವಾಂತಿ ನಸ್ಯ ಲಘು ರೂಕ್ಷವ[ನುಂಉ]
ಪಭುಂಜಿಸು ತಿರುಗುತ್ತಿ[ರು]।
ಅಪರಿಮಿತ ಶ್ಲೇಷ್ಮೆಯನ್ನು ಗೆಲು ಮದಕನೆಯಿಂ (೫೦)

ಎರಕೊ ಕರ್ಪೂರ ಚಂದನಾ।
ಗುರು ಕುಂಕುಮವಂಗಲೇಪ [ವಿ]ಡು ಹಳೆಜವೆಯೋ
ಗರಗೋದಿಯು ಜೈನಡವಿಯು।
ವರ ಮೃಗಮಾಂಸ[ವ] ಸೇವಸು ಮಾವಿನ ರಸಮಂ (೫೧)

ಪ್ರಿಯಳೊಡಗೂಡುಣು ಸರಸದಿ।
ಪ್ರಿಯ [ಳಾ] ಹಸ್ತಪದಿ ಕೊಟ್ಟಿಡು ರಸಗಳ ಕೊ[ಳುವುದು]
ಪ್ರಿಯ ಚದುರ ಮಧುರವಚನವ।
ಪ್ರಿಯದಿಂ ಕೇಳುತ್ತ [ಕೇಳಿಯೊ]ಳಗಿರುಸುಖದಿಂ (೫೨)

ಮಧುಜಲವಾಗಲಿ ಶುಂಠಿಯ।
ಕುದಿಸಿದ ನೀರಾಗಲಟ್ಟ ಗೇಕಿನ ಜಲವಂ
ಮುದದಿಂದಲಿ ಪಾನವ ಮಾ।
ಳ್ಪ [ದುಂ] ವಸಂತ ಶ್ಲೇಷ್ಮ ವುಪಶಮೆಯಹದುಂ (೫೩)

ವನದೊಳು ಕಥೆ ಕೋಗಿಲೆಗಳ।
ಧ್ವನಿಯುಂ ಕೇಳು [ತ್ತ] ಪುಷ್ಪಪರಿಮಳ [ದಾ] ವಾ ಸನೆ
ಮಲಯಾನಿಲ ಸೇವನೆ।
ಯನುಭವಿಸುತ ಬಿಸಿಲು ಹೊತ್ತು ಕಳೆ ಮಾಧವಿಯೊಳ್ (೫೪)"[೯]

ಶಿಶಿರದಲ್ಲಿ ಕೂಡಿದ ಕಫವು ವಸಂತದ ಬಿಸಿಲಿನಿಂದ ಕರಗಿ ಹೊರಬಿದ್ದು ಜೀರ್ಣಶಕ್ತಿಯನ್ನು ನಾಶಮಾಡುತ್ತದೆ. ಹೀಗೆ ಜೀರ್ಣಶಕ್ತಿ ಕಡಿಮೆಯಾಗುವುದರಿಂದ ರೋಗಿಗಳ ಮನೆಗಳು ಹೆಚ್ಚುತ್ತವೆ. ಆದ್ದರಿಂದ ಲಘು ಆಹಾರಗಳನ್ನು ತೆಗೆದುಕೊಳ್ಳಬೇಕು. ಈ ಕಾಲದಲ್ಲಿ ಸ್ನಾನಮಾಡಿ ಮೈಗೆ ಕರ್ಪೂರ ಚಂದನ ಅಗರು ಕುಂಕುಮ ಕೇಸರಿಗಳನ್ನು ಹಚ್ಚಿಕೊಳ್ಳಬೇಕು. ಹಳೆಯದಾದ ಜವೆಗೋದಿ, ಜೇನು, ಅಡವಿಯ ಮೃಗಮಾಂಸವನ್ನು ಸೇವಿಸಿ, ಮಾವಿನ ಹಣ್ಣಿನ ರಸವನ್ನು ಕುಡಿಯಬೇಕು. ಮತ್ತು ಸಿಹಿಯಾದ ರಸಗಳಾಗಲಿ, ಶುಂಠಿಯನ್ನು ಕುದಿಸಿದ ನೀರಾಗಲಿ, ಗೇಕಿನ ಗಡ್ಡೆಯನ್ನು ಬೇಯಿಸಿದ ರಸವಾಗಲಿ ಸೇವಿಸಿದರೆ ವಸಂತದ ಕಫವು ಉಪಶಮನವಾಗುವುದು. ಕೋಗಿಲೆಯ ಮಧುರ ಧ್ವನಿಯನ್ನು ಆಲಿಸುತ್ತಾ, ಪುಷ್ಪ ಪರಿಮಳ ಸುವಾಸನೆಯನ್ನು ಆಸ್ವಾದಿಸುತ್ತಾ, ಮಲಯ ಮಾರುತದ ಸೇವನೆ ಮಾಡುತ್ತಾ ವಸಂತಕಾಲದ ಬಿಸಿಲನ್ನು ಕಳೆಯಬೇಕು ಎಂದಿದೆ. ವಸಂತ (ಮಾರ್ಚ್, ಏಪ್ರಿಲ್) ಬೇಸಿಗೆ ಕಾಲವಾದದ್ದರಿಂದ ಅತಿಯಾದ ಬಿಸಿಲಿನಲ್ಲಿ ಶ್ರಮದ ಕೆಲಸವನ್ನು ಮಾಡಬಾರದು ಎಂಬ ದೃಷ್ಟಿಯಿಂದಲೇ ಆಧುನಿಕ ಸಂದರ್ಭದಲ್ಲಿಯೂ ಸರ್ಕಾರಿ ರಜೆಯನ್ನು ನೀಡಲಾಗಿರುತ್ತದೆ. ಜನಪದರು ಈ ನಿಯಮವನ್ನು ಯಾವಾಗಲು ರೂಢಿಸಿಕೊಂಡು ಬಂದಿರುತ್ತಾರೆ.

ಶಿಶಿರ ಋತುವಿನಲ್ಲಿ ಜವೆಗೋದಿ, ಜೇನು, ಅಡವಿಯ ಮೃಗ ಮಾಂಸವನ್ನು, ಮಾವಿನ ಹಣ್ಣಿನ ರಸವನ್ನು ಸೇವಿಸಲು ಸೂಚಿಸಿದ್ದಾರೆ. ಅಂದರೆ ಈ ಋತು ಬೇಸಿಗೆ ಕಾಲವಾದ್ದರಿಂದ ಆಗ ಈ ಮೇಲಿನ ಎಲ್ಲಾ ಪದಾರ್ಥಗಳು ಸಹಜವಾಗಿ ದೊರೆಯುತ್ತವೆ. ಬೇಸಿಗೆಯಲ್ಲಿ ಎಲ್ಲಾ ಗದ್ದೆಗಳು ಖಾಲಿಬಿದ್ದು ಅಡವಿ ಕುರುಚಲುಗೊಂಡಿರುತ್ತದೆ. ಈ ಸಂದರ್ಭದಲ್ಲಿ ಪ್ರಾಣಿಗಳ ಬೇಟೆಯು ಸರಳವಾಗುತ್ತದೆ. ಅದು ಮಾಂಸಹಾರಿಗಳಿಗೆ ಸುಲಭವಾಗುತ್ತದೆ. ಈಗಲೂ ಈ ಕ್ರಮ ಜನಪದರಲ್ಲಿ ರೂಢಿಗತವಾಗಿ ಮುಂದುವರಿದಿದೆ. ವಿಶ್ವಕರ್ಮರಲ್ಲಿ ಅಕ್ಷತದಗಿ ಅಮವಾಸ್ಯೆಯನ್ನು ಹಳೆಗೋದಿ ಅಮವಾಸ್ಯೆ ಎಂದೇ ಆಚರಿಸುವ ಪದ್ಧತಿಯಿದೆ. ಹಳೆಗೋದಿ ಸೇವನೆಯಿಂದ (ಹುಗ್ಗಿ, ಹೋಳಿಗಿ ಇತ್ಯಾದಿ) ಶರೀರ ಸದೃಢವಾಗುತ್ತದೆ ಎನ್ನುವ ನಂಬಿಕೆಯಿದೆ. ಇನ್ನು ಭೂಮಿ ಹಾಗೂ ಕಾಡು ಬಟ್ಟಬಯಲಾಗಿರುವ ಕಾರಣ ಬೇಸಿಗೆಯಲ್ಲಿ ಬೇಟೆಯಾಡುವುದು ಸುಲಭ. ಹೋಳಿಹುಣ್ಣಿಮೆ ಹಾಗೂ ಉಗಾದಿ ಬೇಟೆಗಳು ಈ ಅರ್ಥದಲ್ಲಿ ಇನ್ನು ಉಳಿದಿರುವುದು ವಿಶೇಷ. ಭೂಮಿಯ ಮೇಲೆ ವಾಸಿಸುವ ಸಕಲ ಜೀವಿಗಳು ಪ್ರಕೃತಿಯೊಂದಿಗೆ ಹೊಂದಿಕೊಂಡು ಜೀವಿಸುವುದರಿಂದ ಆರೋಗ್ಯದಿಂದ ಇರಲು ಸಾಧ್ಯವಾಗುತ್ತದೆ ಎಂದು ನಮ್ಮ ಪೂರ್ವಿಕರು ಸೂಚಿಸಿದ್ದಾರೆ.

ಗ್ರೀಷ್ಮ ಋತುವಿನಲ್ಲಿ ಸೂರ್ಯ ಕಿರಣದ ತೀಕ್ಷ್ಣತೆಯಿಂದ ಕಫ ಕಡಿಮೆಯಾಗುತ್ತಾ ಹೋಗುತ್ತದೆ, ಹಾಗೆಯೇ ವಾತವು ಹೆಚ್ಚುತ್ತಾ ಹೋಗುವುದು. ಆದುದರಿಂದ ಹುಳಿ ಉಪ್ಪು ಕಾರಗಳನ್ನು ತೆಗೆದುಕೊಳ್ಳಬಾರದು; ಬಿಸಿಲಲ್ಲಿ ಇರಬಾರದು. "ಗ್ರೀಷ್ಮದ ಸೆಖೆಯಲ್ಲಿ ಹಗುರ ಹಾಗೂ ಸ್ನಿಗ್ಧವಾದ ಮಧುರಾಹಾರವನ್ನು ತೆಗೆದುಕೊಳ್ಳಬೇಕು. ಹೆಚ್ಚು ತಂಪಾದ ಅನ್ನವನ್ನು ಊಟ ಮಾಡಬೇಕು. ತಣ್ಣೀರಿನಿಂದ ಸ್ನಾನ ಮಾಡು. ಅರಳಿನ ಹಿಟ್ಟನ್ನು ಸಕ್ಕರೆಯೊಡನೆ ಸೇರಿಸಿ ತೆಗೆದುಕೊಳ್ಳಬೇಕು. ಮದ್ಯವನ್ನು ಸೇವಿಸಬಾರದು; ಬೇಕೆನಿಸಿದರೆ ಹೆಚ್ಚು ನೀರು ಸೇರಿಸಿದ ಮದ್ಯವನ್ನು ಸ್ವಲ್ಪವಾಗಿ ತೆಗೆದುಕೊಳ್ಳಬಹುದು. ಇದರಿಂದ ಬಾಯಾರಿಕೆ, ಉದ್ರೇಕ, ಮೂರ್ಛೆ, ಕೃಶತೆ ಉಂಟಾಗುವುದಿಲ್ಲ. ಸಣ್ಣಕ್ಕಿಯನ್ನೂ ಕಾಡಿನ ಹಣ್ಣು ಹಂಪಲುಗಳನ್ನು ಸೇವಿಸಬೇಕು. ಪಂಚಸಾರವೆಂಬ ಪಾನಕವನ್ನು ಹೊಸ ಮಡಕೆಯಲ್ಲಿಟ್ಟು ತಣ್ಣನೆ ಮಾಡಿ ಕುಡಿಯಬೇಕು"[೧೦] ಎಂದು ಹೇಳಲಾಗಿದೆ. ಮುಂದುವರೆದು ಪಂಚಸಾರವೆಂದರೆ;

ಮಧು ಈಚಲಹಣ್ಣು ಖರ್ಜು।
ರದ ಫಲವು ದ್ರಾಕ್ಷಿ[ಯು] ಸಕ್ಕರೆಪಾನಕದೊಳ್
ಹದಗೂಡಿ ಕದಡುತಂ ಪೊಂ
ದಿರ ಬಳಿಕಂ ನೀರ ಕೊಳ್ಳೆ ಮಂಥನವೆನಿಸುಂ (೫೯)"[೧೧]

ಜೇನುತುಪ್ಪ, ಈಚಲಹಣ್ಣು, ಖರ್ಜೂರ, ದ್ರಾಕ್ಷಿಗಳನ್ನು ಸಕ್ಕರೆಪಾನಕದಲ್ಲಿ ಒಂದು ಪ್ರಮಾಣದಲ್ಲಿ ಸೇರಿಸಿ ಕದಡುತ್ತಾ ಹದಕ್ಕೆ ಬಂದ ಮೇಲೆ ಅದರ ನೀರನ್ನು ತೆಗೆದುಕೊಳ್ಳುವುದು ಮಂಥನವೆನಿಸುವುದು. ಗ್ರೀಷ್ಮ ಋತುವಿನಲ್ಲಿ ಈ ಪಂಚಸಾರಕ್ಕೆ ಸಮನಾಗಿ ತುಪ್ಪವನ್ನೂ ಹೂವಿನ ಪರಿಮಳವನ್ನೂ ಕರ್ಪೂರ ಜಲವನ್ನು ಸೇರಿಸಿ ತಣ್ಣಗಾದ ಮೇಲೆ ಸೇವಿಸಬೇಕು ಎಂದು ವೈದ್ಯ ಗ್ರಂಥದಲ್ಲಿ ಹೇಳಲಾಗಿದೆ. ಮಳೆಗಾಲದಲ್ಲಿ ಅಧಿಕ ಮಳೆ, ಚಳಿಗಾಳಿ ಮತ್ತು ಕೊಳೆನೀರನ್ನು ಸೇವಿಸುವುದರಿಂದ ಅಗ್ನಿಮಾಂದ್ಯದಿಂದ ಮೂರು (ವಾತ, ಪಿತ್ತ, ಕಫ,) ದೋಷಗಳೂ ಅಧಿಕವಾಗುತ್ತವೆ. ದೋಷಗಳು ಒಂದಕೊಂದು ಸೇರಿಕೊಂಡು ಶರೀರಕ್ಕೆ ಬಹಳ ಬಗೆಯ ರೋಗಗಳು ಬರುವ ಸಂಭವವಿರುತ್ತದೆ. ಆದ್ದರಿಂದ ಆಯಾ ಕಾಲಕ್ಕೆ ತಕ್ಕಂತೆ ಹೊಂದಿಕೊಳ್ಳುವ ಆಹಾರ ನಿಯಮಗಳನ್ನು ಪಾಲಿಸಬೇಕಾಗುತ್ತದೆ.

ಶರತ್‌ಕಾಲ (ಸೆಪ್ಟಂಬರ್, ಅಕ್ಟೊಬರ)ದಲ್ಲಿ ಮಳೆಗಾಲದಲ್ಲಿ ಉಂಟಾದ ಶೀತ ಶರೀರವು ಚಳಿಯಿಂದ ಕಂಪಿಸುತ್ತದೆ. ಮತ್ತು ಮಳೆಗಾಲದಲ್ಲಿ ಉಂಟಾದ ಪಿತ್ತ ಅಧಿಕವಾಗುತ್ತದೆ. ಆದ್ದರಿಂದ ಪಿತ್ತವನ್ನು ಹೋಗಲಾಡಿಸಲು

ಪಿತ್ತವ ಗೆಲುವಡೆ ಘೃತಗಳು
ಮತ್ತಂ ಸಾರಣೆಯು ರಕ್ತ ಮೋಕ್ಷಣ [ಮಂ]
ಗೈತ್ತಿಕ್ತವು ಸೀಯೋಗ[ರ] ಹಸಿ।
ವತ್ಯಧಿಕತೆಯಾಗಲಾಲಘುವನ್ನವುಂಬುದು (೭೨)"[೧೨]

ಎಂದಿದೆ. ಈ ಕಾಲದಲ್ಲಿ ಹೆಸರು, ಅಕ್ಕಿ, ನೆಲ್ಲಿಕಾಯಿ, ಪಡವಲಜೇನು, ಹಾಲು, ಅಡವಿಯ ಜಾಂಗಲಮಾಂಸವನ್ನು ಸೇವಿಸಬೇಕು, ಇದರಿಂದ ಶರದೃತುವಿನ ಪಿತ್ತ ಕಡಿಮೆಯಾಗುತ್ತದೆ ಎಂಬುದು ಸುಶ್ರುತಮತವಾಗಿದೆ ಎಂದು ಹೇಳಲಾಗುತ್ತದೆ.

ಋತುಮಾನಕ್ಕೆ ತಕ್ಕಂತೆ ಆಹಾರಪದ್ಧತಿ, ವಸತಿ, ಬಟ್ಟೆಗಳನ್ನು ಉಪಯೋಗಿಸುವುದು ಅನಿವಾರ್ಯ. ಏಕೆಂದರೆ ಚಳಿಗಾಲದಲ್ಲಿ ತೆಳ್ಳನೆಯ ಬಟ್ಟೆ ಧರಿಸಿದರೆ ಚಳಿಯಿಂದ ತಡೆಯಲು ಆಗುವುದಿಲ್ಲ. ಬೇಸಿಗೆಯಲ್ಲಿ ದಪ್ಪನೆ ಬಟ್ಟೆ ಧರಿಸಿದರೆ ಸೆಕೆಯಿಂದ ರಕ್ಷಣೆ ದೊರೆಯುವುದಿಲ್ಲ. ಇಷ್ಟಲ್ಲದೆ ಪ್ರಾದೇಶಿಕವಾಗಿ ಈ ಮೇಲಿನ ಕ್ರಮಗಳನ್ನು ಅನುಸರಿಸುವುದು ಅನಿವಾರ್ಯ. ಈ ತೆರನಾಗಿ ಋತುಮಾನಕ್ಕೆ ತಕ್ಕಂತೆ ನಮ್ಮ ರಕ್ಷಣೆಗಾಗಿ ಆಹಾರ ವಿಹಾರಗಳಲ್ಲಿ ಬದಲಾವಣೆ ಮಾಡಿಕೊಂಡು ಹೊಂದಿಕೊಂಡು ಮುನ್ನಡೆದರೆ ರೋಗರುಜಿನಗಳಿಂದ ದೂರವಿದ್ದು ಆರೋಗ್ಯಕರವಾದ ಜೀವನ ನಡೆಸಲು ಸಾಧ್ಯವಾಗುತ್ತದೆ. ಈ ಕ್ರಮಗಳು ನಮ್ಮ ಸಂಸ್ಕೃತಿಯ ಚಹರೆಯಲ್ಲಿ ಒಂದಾಗಿ ರೂಢಿಗತವಾಗಿ ಬೆಳೆದು ಬಂದಿವೆ. ಅವು ಜನಪದರ ಬದುಕಿನ ಭಾಗವಾಗಿ ಚಲನೆಯಲ್ಲಿವೆ.

**ನಾಡಿ ಪರೀಕ್ಷೆ :**

ನಾಡಿ ಪರೀಕ್ಷೆ ರೋಗ ಪರೀಕ್ಷಾ ವಿಧಾನದಲ್ಲಿ ತುಂಬ ಮುಖ್ಯ ಪಾತ್ರವನ್ನು ವಹಿಸುತ್ತದೆ. ಅದರ ಅಧ್ಯಯನದಿಂದ ಅನೇಕ ರೋಗಗಳನ್ನು ತಿಳಿದುಕೊಳ್ಳಬಹುದು. ಜ್ವರ, ಹೃದಯದ ಕವಾಟ ರೋಗಗಳು, ಹೃದಯಾಘಾತ, ಹೃದಯ ಸ್ಪಂದನದ ಏರುಪೇರುಗಳು, ರಕ್ತಪರಿಚಲನೆಯ ಕುಸಿಯುವಿಕೆಯನ್ನು ನಾಡಿ ಪರೀಕ್ಷೆ ಸೂಚ್ಯವಾಗಿ ತಿಳಿಸುತ್ತದೆ. ನಾಡಿಯನ್ನು ಪರೀಕ್ಷಿಸಿ ವ್ಯಾಧಿಯನ್ನು ತಿಳಿಯುವ ಕುರಿತು ವಚನಕಾರ ವೈದ್ಯ ಸಂಗಣ್ಣ ಹೇಳುವುದು ಹೀಗೆ; 'ಅಂಗಾಲ ಮೇಲಣ ದೊಡ್ಡಂಗುಷ್ಟ ಮಧ್ಯದಲ್ಲಿ ಪೃಥ್ವಿನಾಡಿ. ಎಡ ಹೃದಯದಿಂದ ಹೊರಹೊಮ್ಮುವ ಮಹಾಧಮನಿ ಬೆನ್ನ ಕಡೆಯಿಂದ ಕೆಳಕ್ಕೆ ಉದರದ ಬೆನ್ನೊಳೆ ಸಮೀಪ ಬರುವುದು. ಅದು ಅಪ್ಪುನಾಡಿ' ಎಂದಿರುವನು. ಯಾವುದೇ ರೋಗಿಯನ್ನು ಪರೀಕ್ಷಿಸುವಾಗ ವೈದ್ಯನು ಮೊದಲು ನಾಡಿಯನ್ನು ಪರೀಕ್ಷಿಸುವುದು ಸಾಮಾನ್ಯವಾದ ವಿಷಯ. ಈ ಕ್ರಮ ಇಂದಿನ ಅಲೋಪತಿ ವೈದ್ಯಪದ್ಧತಿಯಲ್ಲೂ ಇದೆ. ಈ ನಾಡಿ ಪರೀಕ್ಷೆಯನ್ನು ಕುರಿತು ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಕ್ರಮವಾಗಿ ಹೇಳಲ್ಪಟ್ಟಿದೆ. 'ಪುರುಷರಿಗೆ ಬಲದ ಕೈಯ ಹೆಬ್ಬೆರಳ ಮೂಲದಲ್ಲಿ ಮೂರು ಬೆರಳುಗಳ ತುದಿಯಿಂದ, ಸ್ತ್ರೀಯರಿಗೆ ಎಡದ ಕೈಯಲ್ಲಿ ಒತ್ತಿ ಪರೀಕ್ಷಿಸಬೇಕು' ಎಂದಿದೆ. ಹೀಗೆ ಭಿನ್ನತೆಗೆ ಕಾರಣವನ್ನು ಈ ರೀತಿ ಹೇಳಲಾಗಿದೆ. "ಲೋಕದಲ್ಲಿ ಸ್ತ್ರೀ ಪುರುಷರುಗಳು ಶಿವಶಕ್ತ್ಯಾತ್ಮಕರಾದ ಕಾರಣದಿಂದ ಬಲದ ಭಾಗ ಶಿವಾತ್ಮಕವಾಗಿಹುದು, ಎಡದ ಭಾಗ ಶಕ್ತ್ಯಾತ್ಮಕವಾಗಿಹುದಾದ ಕಾರಣದಿಂದ ಪುರುಷರುಗಳಿಗೆ ಬಲದ ಭಾಗವೇ ಪ್ರಧಾನ. ಅದರಿಂದ ಬಲದ ಕೈಯಲ್ಲಿ ನಾಡಿಯ ನೋಡುವುದು. ಸ್ತ್ರೀಯರುಗಳಿಗೆ ಎಡದ ಭಾಗ ಪ್ರಧಾನವಾದುದರಿಂದ ಎಡದ ಕೈಯಲ್ಲಿ ನಾಡಿಯ ನೋಡುವುದು"[೧೩] ಎಂದು ಹೇಳಲಾಗಿದೆ. ಮುಂದುವರಿದು 'ವೈದ್ಯನು ತನ್ನ ಎಡದ ಕೈಯಲ್ಲಿ ಮೂರು ಬೆರಳುಗಳಿಂದ ಅಂಕುಶಾಕಾರವಾಗಿ ಒತ್ತಿ ಹಿಡಿದು ನೋಡಿದಾಗ ರೋಗಭೇದವು ಕಾಣಲ್ಪಡುವುದು' ಎಂದಿದೆ. ಸಾಮಾನ್ಯವಾಗಿ ಆರೋಗ್ಯವಂತ ಮನುಷ್ಯನಿಗೆ ನಿಮಿಷಕ್ಕೆ ಎಪ್ಪತ್ತೆರಡು ಬಾರಿ ನಾಡಿ ಬಡಿದುಕೊಳ್ಳುತ್ತದೆ ಎನ್ನಲಾಗುತ್ತದೆ. ಈ ಹಿನ್ನೆಲೆಯಲ್ಲಿ ಮೆಲ್ಲನೆ ನಡೆವ ನಾಡಿಯನ್ನೂ ಅತಿವೇಗವಾಗಿ ನಡೆವ ನಾಡಿಯನ್ನೂ ತನ್ನ ಮನಸ್ಸಿನ ಭಾವಂಗಳಿಂದ ವಿಚಾರಿಸಿ ಪರೀಕ್ಷಿಸಬೇಕು ಎಂದು ಹೇಳಿದೆ. ಆಧುನಿಕ ವೈದ್ಯ ವಿಜ್ಞಾನದಂತೆ ದೇಶಿ ವೈದ್ಯಪದ್ಧತಿಯಲ್ಲಿ ಒಂದೊಂದು ರೋಗಕ್ಕೂ ಒಂದೊಂದು ಚಿಕಿತ್ಸೆ ಒದಗಿಸುವ, ಪ್ರತಿಯೊಂದು ರೋಗವನ್ನು ಪತ್ತೆ ಹಚ್ಚುವ ಬೇರೆ ಬೇರೆ ಪ್ರಯತ್ನಗಳು ನಡೆಯುವುದಿಲ್ಲ. ಆದರೂ ರೋಗದ ಬಾಹ್ಯ ಚಿಹ್ನೆ, ಗುಣ ಹೊಂದಲು ಅದು ತೆಗೆದುಕೊಳ್ಳುವ ಕಾಲ, ಅದಕ್ಕೆ ಅನುಸರಿಸುವ ಚಿಕಿತ್ಸಾ ವಿಧಾನಗಳ ಆಧಾರದ ಮೇಲೆ ರೋಗಗಳಿಗೆ ಹೆಸರಿಡುವ, ಅವುಗಳ ಸ್ವಭಾವ ಹೇಳುವ ನಿದರ್ಶನಗಳಿಲ್ಲದಿಲ್ಲ.

ನಾಡಿಯನ್ನು ಪರೀಕ್ಷಿಸುವಾಗ ತ್ರಿದೋಷಗಳಾದ ವಾತ ಪಿತ್ತ ಶ್ಲೇಷ್ಮವುಳ್ಳ ನಾಡಿಗಳನ್ನು ಹೇಳಿದ್ದು ಹೀಗೆ; "ಪಿತ್ತ ವಾತನಾಡಿ ಡೊಂಕಾಗಿ ನಡೆವದು. ನಾಡಿಚಪಲಗತಿಯಲ್ಲಿ ನಡವದೂ। ಗರಿಬಿಚ್ಚಿದ ಮಯೂರನಂತೆ ನಡೆವದು। ಆಡುವದು। ಹಿಂಗೆ ಹೇಳಿದ ಪ್ರಮಾಣದಲ್ಲಿ ನಡದರೆ ಪಿತ್ತನಾಡಿಯೆಂದರಿವುದೂ॥ ಶ್ಲೇಷ್ಮನಾಡಿ ಸ್ಥಿರವಾಗಿ ನಡವದು। ಕೋಳಿಹಾಂಗೆ ನಡವದು। ಪಾರಿವಾಳದ ಹಾಂಗೆ ನಡವದು। ನವುಲಿನ ಹಾಂಗೆ ನಡವುದು। ಶ್ಲೇಷ್ಮನಾಡಿಯೆಂದರಿವುದು"[೧೪]. ನಾಡಿ ಪರೀಕ್ಷಿಸುವಾಗ ನಾಡಿ ಬಡಿತವು ಬಿಸಿಯಾಗಿ ಅತಿವೇಗವಾಗಿ ನಡೆದರೆ ಜ್ವರ ಇವೆ ಎಂದು ತಿಳಯಬೇಕು. ಅಲ್ಪವಾಗಿ, ಶೈತ್ಯವಾಗಿ ನಡೆದರೆ ಆಹಾರ ಇನ್ನೂ ಜೀರ್ಣಿಸಿಲ್ಲವೆಂದು ತಿಳಿಯಬೇಕು. ವಿವಿಧ ಆಹಾರವನ್ನು ಸೇವಿಸಿದಾಗ ನಡೆಯಲ್ಪಡುವ ನಾಡಿ ಬಡಿತದ ಭಿನ್ನತೆಯನ್ನು ವೈದ್ಯಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ದಾರಿ ನಡೆದವರು, ಬಾಯಾರಿದವರು, ಬಿಸಿಲಲ್ಲಿ ನಡೆದು ಕೆಂಗೆಟ್ಟವರು, ಹಸಿದವರು, ಆಗಾತನೆ ಊಟ ಮಾಡಿದವರು, ಅಭ್ಯಂಗಸ್ನಾನ ಮಾಡಿದವರು, ಲೈಂಗಿಕತೆ ಮಾಡಿದವರಿಗೆ ನಾಡಿ ಪರೀಕ್ಷೆಯು ಸರಿಯಾಗಿ ತಿಳಿಯುವುದಿಲ್ಲ. ಅಂತವರಿಗೆ ಪರೀಕ್ಷಿಸಿದರೂ ನಾಡಿಯು ಸರಿಯಾಗಿ ಕಾಣಿಸದು ಎನ್ನುವ ಕ್ರಮವು ಸಹಜವಾದುದು. ಆ ಸಂದರ್ಭದಲ್ಲಿ ನಾಡಿ ಬಡಿತ ಪರೀಕ್ಷಿಸುವುದಿಲ್ಲ. ಪರೀಕ್ಷಿಸಿದರೂ ಸಹಜವಾದ ನಾಡಿಬಡಿತ ತಿಳಿಯುವುದಿಲ್ಲ. ಅಂದರೆ ಈ ಸಂದರ್ಭದಲ್ಲಿ ಮನುಷ್ಯ ಭಾವೋದ್ರೇಕಗೊಳ್ಳುವುದರಿಂದ ನಾಡಿ ಬಡಿತವು ಸಹಜತೆಗಿಂತ ವೇಗವಾಗಿ ನಡೆಯುತ್ತದೆ.

ಜ್ವರಾತಿಸಾರದ ನಾಡಿಯು ಮುಳ್ಳುಮುಳ್ಳಾಗಿ ಕಠಿಣವಾಗಿ ರಕ್ತಧಾತುವನಾಶ್ರೈಸಿಕೊಂಡು ಮಿಾನು ನೀರೊಳಗೆ ಹೊಳೆವ ಹಾಗೆ ನಡೆವದು. ಗ್ರಹಿಣಿಯ ನಾಡಿ ಮಲಗಿದ ಹಾವು ಉಸಿರು ಬಿಡುವ ಹಾಗೆ ನಡೆವದು. ವಿಷೂಚಿಯ ನಾಡಿಯು ವಿಚಿತ್ರವಾಗಿ ಹೊತ್ತಿಗೊಂದು ಬಗೆಯಾಗಿ ನಡೆವದು. ಪಾಂಡು ರೋಗದವರಿಗೆ ನರ ಬಿಗಿದು ಬೆರತುಕೊಂಡು ಆಡುವದು. ನಾಡಿ ಕೆದರಿ ಸಿಡಿದಾಡಿದರೆ ಕಾಮಿಲೆ, ಹಲ್ಲಿಯ ಹಾಗೆ ಆಡಿದರೆ ರಕ್ತಪಿತ್ತ, ನೀರೊಳಗೆ ಜಿಗು ಆಡಿದ ಹಾಗೆ ಆಡಿದರೆ ಕ್ಷಯಕಾಸವೆಂದು ತಿಳಿವದು"[೧೫]. ಹೀಗೆ ನಾಡಿ ಪರೀಕ್ಷೆಯ ಆಧಾರದ ಮೇಲೆಯೇ ಇದೇ ರೋಗವೆಂದು ಗುರುತಿಸುವುದು ನಮ್ಮ ಪ್ರಾಚೀನರು ನಾಡಿ ಪರೀಕ್ಷಿಸುವಾಗ ಅದರ ಸ್ವರೂಪವನ್ನು ಹೇಳುವುದು ಮೀನಿನ ಹಾಗೆ ಹಾವು ಉಸಿರು ಬಿಡುವ ಹಾಗೆ ಎಂದಿರುವುದು ಜನರಿಗೆ ಬೇಗ ತಿಳಿಯಲಿ ಎಂದು. ನೀರೋಳಗೆ ಮೀನು ಹೊಳೆವ ಹಾಗೆ ಅಂದರೆ ನಾಡಿ ಬಡಿತವು ಬೇಗ ತಿಳಿಯುತ್ತದೆ ಎಂದು ಅರ್ಥಮಾಡಿಕೊಳ್ಳಬೇಕಾಗುತ್ತದೆ. ವೈದ್ಯರು ಪ್ರಾಣಿಯ ವರ್ತನೆಯನ್ನು ನೋಡಿ ಅದರ ನಡಿಗೆಯನ್ನು ವೀಕ್ಷಿಸಿ ನಾಡಿ ಪರೀಕ್ಷಿಸಿದಾಗ ಅದನ್ನು ಕಲ್ಪಿಸಿಕೊಂಡು ರೋಗಗಳನ್ನು ಗುರುತಿಸುತ್ತಿದ್ದರು. ಆದರೆ ನರಸಿಂಹಶಾಸ್ತ್ರಿ ಹೇಳಿದ 'ರೋಗಿಯ ಕೈಯ ನಾಡಿಯು ಅತಿವೇಗವಾಗಿ ನಡೆಯುತ್ತಾ ಕಾಲ ಹರಡಿನ ಕೆಳಗೆ ರುದ್ರನಾಡಿ ಎನಿಸಿಕೊಂಬ ನಾಡಿಯು ಕಾಣಿಸಿಕೊಳ್ಳದೆ ಇದ್ದರೆ ಆತನಗೆ ಆ ದಿನವೇ ಮರಣವೆಂದರಿವುದು'. ಎಂದಿರುವುದು ಇಂದಿಗೂ ಜನಪದರು ಈ ಕ್ರಮವನ್ನು ಅನುಸರಿಸಿ ರೋಗಿಯನ್ನು ಪರೀಕ್ಷಿಸುವವರು.

**ಜಿಹ್ವಾಪರೀಕ್ಷೆ :**

ಜಿಹ್ವೆ ಅತ್ಯಂತ ನೀರು ಸುರಿಯುತ್ತಾ ಇದ್ದರೆ ಶ್ಲೇಷಾಧಿಕ್ಯವೆಂದರಿವುದು, ಖಾರವಾಗಿ ದ್ರವವಾಗಿ ಇದ್ದರೆ ಪಿತ್ಯಾಧಿಕ್ಯವೆಂದು ಅರಿವುದು. ಕಹಿಯಾಗಿ ದ್ರವವಾಗಿ ಇದ್ದರೆ. ಅತ್ಯಂತ ಪಿತ್ತಾಧಿಕ್ಯವೆಂದರಿವುದು. ಶುಷ್ಕವಾಗಿ

ಇದ್ದರೆ ವಾತಾಧಿಕ್ಯವೆಂದರಿವುದು. ನಾಲಗೆಯ ಮೇಲೆ ಬೊಕ್ಕೆಯೆದ್ದು ಪೀತವರ್ಣವಾಗಿ ಕಪ್ಪುಗೂಡಿ ಇದ್ದರೆ ಅಸಾಧ್ಯವೆಂದು ನಂದಿಕೇಶ್ವರಸ್ವಾಮಿ ನಿರೂಪಿಸಿದರು ಎಂದಿದೆ.

**ಮೂತ್ರ ಪರೀಕ್ಷೆ :**

ವಾತರೋಗದಲ್ಲಿ ಮೂತ್ರ ಬಿಳಿದಾಗಿಹುದು. ಶ್ಲೇಷ್ಮರೋಗದಲ್ಲಿ ನೊರೆ ಕಟ್ಟಿಕೊಂಡು ಇಹುದು, ಪಿತ್ತರೋಗದಲ್ಲಿ ಕೆಂಪಾಗಿ ಇಹುದು ದ್ವಂದ್ವಜರೋಗದಲ್ಲಿ ಮಿಶ್ರವಾಗಿಹುದು"[೧೬].

ಪ್ರಾಚೀನ ಕಾಲದ ಶಾಸ್ತ್ರಜ್ಞರು ವೈದ್ಯ ಚಿಕಿತ್ಸಾ ಕ್ರಮಗಳನ್ನು ಕ್ರಮಬದ್ಧವಾಗಿ ಅನುಸರಿಸುವ ವಿಧಾನಗಳನ್ನು ತಮ್ಮ ಗ್ರಂಥಗಳಲ್ಲಿ ನಿರೂಪಿಸಿರುವರು. ಇಂದಿಗೂ ಸಹ ವೈಜ್ಞಾನಿಕ ಉಪಕರಣಗಳ ಸಹಾಯದಿಂದ ಮೂತ್ರ ಪರೀಕ್ಷೆ, ಜಿಹ್ವೆ ಪರೀಕ್ಷೆಯನ್ನು ಮಾಡಿಯೇ ಚಿಕಿತ್ಸಾಕ್ರಮವನ್ನು ಅನುಸರಿಸುವರು. ಈ ಕ್ರಮವು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವುದು. ವೈದ್ಯಶಾಸ್ತ್ರದಲ್ಲಿ ಇದೊಂದು ದೊಡ್ಡ ಕೊಡುಗೆಯೆಂದು ಹೇಳಬಹುದು. ಇದುವರೆಗೂ ಮನುಷ್ಯ ವೈದ್ಯಕ್ಕೆ ಸಂಬಂಧಿಸಿದಂತೆ ಋತುಚರ್ಯ, ದಿನಚರ್ಯಗಳನ್ನು ಅನುಸರಿಸುವ ಕ್ರಮಗಳನ್ನು ಸ್ಪಷ್ಟಪಡಿಸಲಾಯಿತು. ಹಾಗೂ ರೋಗಿಯ ಲಕ್ಷಣ ಚಿಕಿತ್ಸಾಕ್ರಮಗಳಿಗಿಂತ ಪೂರ್ವದಲ್ಲಿ ವೈದ್ಯರು ಅನುಸರಿಸಬೇಕಾದ ನಾಡಿ ಪರೀಕ್ಷೆ, ಜಿಹ್ವೆ ಪರೀಕ್ಷೆ ಮತ್ತು ಮೂತ್ರ ಪರೀಕ್ಷೆಯ ವಿಧಾನಗಳನ್ನು ವಿಷದಪಡಿಸಲಾಯಿತು. ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಮನುಷ್ಯ ವೈದ್ಯಕ್ಕೆ ಸಂಬಂಧಿಸಿದಂತೆ ಉಕ್ತವಾದ ಸಾಮಾನ್ಯವೈದ್ಯ, ಸ್ತ್ರೀವೈದ್ಯ, ಬಾಲವೈದ್ಯ ಮತ್ತು ವಿಷವೈದ್ಯ ಎಂಬ ಪ್ರಕಾರಗಳಲ್ಲಿ ವಿಭಾಗಿಸಿ ಅವುಗಳಿಗೆ ಸಂಬಂಧಿಸಿದಂತೆ ರೋಗ–ಲಕ್ಷಣ–ಚಿಕಿತ್ಸಾ ವಿಧಿವಿಧಾನಗಳನ್ನು ಈ ಕೆಳಗಿನಂತೆ ಒಂದೊಂದೆ ಪ್ರಕಾರಗಳನ್ನು ವಿವರವಾಗಿ ವಿಷಧಪಡಿಸಲಾಗಿದೆ.

**೪.೧.೧.೧. ಸಾಮಾನ್ಯವೈದ್ಯ**

ಸಾಮಾನ್ಯವೈದ್ಯವು ಪುರುಷ, ಸ್ತ್ರೀ ಮತ್ತು ಮಕ್ಕಳಿಗೆ ಸಾಮಾನ್ಯವಾಗಿ ತಗಲುವ ರೋಗ, ಅವುಗಳ ಲಕ್ಷಣ ಮತ್ತು ಚಿಕಿತ್ಸೋಪಾಯಗಳನ್ನು ತಿಳಿಸುವ ವೈದ್ಯಪದ್ಧತಿಯಾಗಿದೆ. ಮನುಷ್ಯ ಶರೀರದಲ್ಲಿ ಪಾದದಿಂದ ನಾಭಿ, ನಾಭಿಯಿಂದ ಎದೆ, ಎದೆಯಿಂದ ತಲೆಯವರೆಗೆ ಕ್ರಮವಾಗಿ ವಾತ, ಪಿತ್ತ, ಕಫದ ತಾಣವಾಗಿರುತ್ತದೆ. ದೇಹದಲ್ಲಿ ವಾತ, ಪಿತ್ತ, ಕಫಗಳ ಉಲ್ಬಣದಿಂದಾಗಿ ಶೂಲೆ, ಉಷ್ಣ ತಿಮಿರಾದಿ ರೋಗಗಳು ಹುಟ್ಟುತ್ತವೆ. "ವಾತ ವಿಕಾರದಿಂದ ೮೦ ರೋಗಗಳು, ಪಿತ್ತ ವಿಕಾರದಿಂದ ೪೦ ರೋಗಗಳು, ಕಫ ವಿಕಾರದಿಂದ ೨೦ ರೋಗಗಳು ಹುಟ್ಟುತ್ತವೆ" ಎಂಬುದು ಚರಕನ ಅಭಿಪ್ರಾಯವಾಗಿದೆ. ಈ ಎಲ್ಲಾ ರೋಗಗಳಲ್ಲಿ ಕೆಲ ರೋಗಗಳ ಲಕ್ಷಣ ಹಾಗೂ ಚಿಕಿತ್ಸಾ ಕ್ರಮಗಳನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

**ವಾತದೋಷ** : ಸ್ತ್ರೀ ಸಂಗ, ರೂಕ್ಷ, ಹಸಿವು, ಚಿಂತೆ, ಮಲಮೂತ್ರಗಳ ತಡೆ, ಬಳಲಿಕೆ, ಅಜೀರ್ಣ ಇವುಗಳಿಂದ ವಾತವು ವಸಂತಕಾಲದಲ್ಲಿ ಹೆಚ್ಚಾಗುತ್ತದೆ. ಆಗ ಗೋದಿ, ಉದ್ದು, ಹಾಲು, ಸಕ್ಕರೆ, ನೆಲದಾಲ ಮೊದಲಾದ ಸಿಹಿ ಪದಾರ್ಥಗಳನ್ನು ಸೇವಿಸುವುದರಿಂದ ಹಾಗೂ ಉಪ್ಪು ಹುಳಿಗಳನ್ನು ಅಧಿಕವಾಗಿ ಸೇವಿಸುವುದರಿಂದ ಮತ್ತು ಅಂಗಮರ್ದನ, ಅಗ್ನಿಸೇವೆ, ಸ್ನಾನ, ಬಿಸಿಲುತಾಪ ಈ ಕ್ರಿಯೆಗಳಿಂದ ವಾತದೋಷ ಶಮನವಾಗುತ್ತದೆ.

**ಪಿತ್ತದೋಷ :** ಆಯಾಸ, ಉಪ್ಪು, ಹುಳಿ, ಖಾರ, ಉಷ್ಣ, ತೀಕ್ಷ್ಣ, ಲಘು, ಕ್ರೋದ, ಸೂರ್ಯತಾಪ, ಪ್ರವಾಸದಿಂದ ಪಿತ್ತವೂ ಶರತ್ಕಾಲದಲ್ಲಿ ಅಧಿಕಗೊಳ್ಳುತ್ತದೆ. ಇದಕ್ಕೆ ಚಿಕಿತ್ಸೆಯಾಗಿ ರಾತ್ರಿಯಲ್ಲಿ ಹಾಲು ಕುಡಿಯುವುದು, ಸ್ತ್ರೀಯರ ಆಲಿಂಗನ, ಸಿಹಿ, ಕಹಿ, ಒಗರು ಪದಾರ್ಥಗಳ ಸೇವನೆ, ಮೃದುವಿರೇಚನ, ಸೊಗಸಾದ ಶೈತೋಪಚಾರ ಕ್ರಮಗಳಿಂದ ಪಿತ್ತ ಪ್ರಕೋಪ ಗುಣವಾಗುವುದು.

**ಶ್ಲೇಷ್ಮದೋಷ :** ನೀರು, ಎಳ್ಳು, ತುಪ್ಪ, ಉಪ್ಪು, ಹುಳಿ, ಶೀತ, ಆಹಾರ ಪದಾರ್ಥಗಳ ಸೇವನೆ, ಹಗಲು, ನಿದ್ರೆ–ಇವುಗಳಿಂದ ವಸಂತಕಾಲದಲ್ಲಿ ಶ್ಲೇಷ್ಮವು ಉತ್ಕರ್ಷವಾಗುವುದು. ಇದಕ್ಕೆ ಚಿಕಿತ್ಸೆಯಾಗಿ ಉಷ್ಣದ್ರವ್ಯ ಸೇವನೆ, ಜಲಕ್ರೀಡೆ, ವಮನ, ಗಂಡೂಷ, ನಸ್ಯ, ಸ್ತ್ರೀಸಂಗ, ಲಘು ವ್ಯಾಯಾಮ ಈ ಕ್ರಮಗಳಿಂದ ಇದು ನಿವಾರಣೆಯಾಗುತ್ತದೆ. ಅಲ್ಲದೆ; ಸಕ್ಕರೆ, ತುಪ್ಪ, ಅಂಗೂರ, ಎಳ್ಳಿನ ಸೂಸಲು ಇವನ್ನು ಸಮಪ್ರಮಾಣದಲ್ಲಿ ಕಲಸಿ ಸುರ್ಯೋದಯದ ಸಮಯದಲ್ಲಿ ತಿನ್ನುವುದರಿಂದ ದೇಹ ಪುಷ್ಟಿಗೊಂಡು ಶೀತವಾತಾದಿ ದೋಷಗಳು ಪರಿಹಾರವಾಗುತ್ತವೆ"[೧೭].

ಸಕಲ ರೋಗಗಳಿಗೂ ವಾತ ಪಿತ್ತ ಕಫಗಳೇ ಮೂಲ ಕಾರಣವೆಂದು, ಶಾಸ್ತ್ರಜ್ಞರು ಅವುಗಳು ಯಾವ ಋತುಗಳಲ್ಲಿ ಉಲ್ಬಣಗೊಳ್ಳುತ್ತವೆ. ಅವುಗಳ ನಿಯಂತ್ರಣಕ್ಕಾಗಿ ಆಯಾ ಋತುಮಾನಕ್ಕೆ ತಕ್ಕಂತೆ ಅವರು ಸೂಚಿಸಿದ ಮಾರ್ಗೋಪಾಯಗಳನ್ನು ಪಾಲಿಸುವುದರಿಂದ ಅನೇಕ ವ್ಯಾದಿಗಳಿಂದ ಮುಕ್ತಿಪಡೆಯಬಹುದು. ಈ ನಿಯಮಗಳನ್ನು ಶಾಸ್ತ್ರಜ್ಞರು ಅತ್ಯಂತ ಸರಳ ಉಪಾಯಗಳಿಂದ ಸೂಚಿಸಿರುವುದರಿಂದ ಅವುಗಳನ್ನು ಎಲ್ಲರೂ ಪಾಲಿಸಲು ಉಪಯುಕ್ತವಾದ ಚಿಕಿತ್ಸಾಕ್ರಮವಾಗಿದೆ. ಅಲ್ಲದೆ 'ಅಣಿಲೆಕಾಯಿ ಚೂರ್ಣದೊಂದಿಗೆ ಸೈಂದವ ಲವಣ, ತುಪ್ಪ, ಶುಂಠಿ ಇವನ್ನು ಪ್ರತ್ಯೇಕವಾಗಿ ಬೆರಸಿ ತಿನ್ನುವುದರಿಂದ ಕ್ರಮವಾಗಿ ವಾತ, ಪಿತ್ತ, ಕಫ ದೋಷಗಳು ನಿವಾರಣೆಯಾಗುತ್ತವೆ. ಅದೇ ಅಣಿಲೆಕಾಯಿ ಪುಡಿಯೊಂದಿಗೆ ಬೆಲ್ಲವನ್ನು ಕಲಸಿ ಉಪಯೋಗಿಸುವುದರಿಂದ ಸರ್ವರೋಗಗಳು ಗುಣವಾಗುತ್ತವೆ'. ಎಂದು ಹೇಳಲಾಗಿದೆ. ಆಯುರ್ವೇದದಲ್ಲಿ ಅಣಿಲೆಕಾಯಿ ಔಷಧಕ್ಕೆ ತುಂಬ ಮಹತ್ವವಿದೆ. ಬೇರೆ ಯಾವ ಔಷಧಗಳು ಸಿಗದಿರುವಾಗ ಅಣಲೆಕಾಯಿಯೊಂದರಿಂದಲೇ ಅನೇಕ ರೋಗಗಳನ್ನು ಗುಣಪಡಿಸಬಹುದೆಂಬುದು ತಜ್ಞ ವೈದ್ಯರ ಅನುಭವದ ಮಾತಾಗಿದೆ. ಅಣಿಲೆಕಾಯಿ ಈ ದೃಷ್ಟಿಯಿಂದ ಅನೇಕ ರೋಗಗಳಿಗೆ ತುಂಬ ಪರಿಣಾಮಕಾರಿಯೆಂದು ನಂಬಬೇಕು. ದೇಶಿ ವೈದ್ಯಪದ್ಧತಿಯಲ್ಲಿ ಬೇರೆ ಬೇರೆ ರೋಗಗಳಿಗೆ ಬೇರೆ ಬೇರೆ ಚಿಕಿತ್ಸೆಗಳನ್ನು ಸೂಚಿಸಿದರೂ, ಕೆಲಸಂದರ್ಭದಲ್ಲಿ ನಿರ್ದಿಷ್ಟ ರೋಗಕ್ಕೆ ನಿರ್ದಿಷ್ಟ ಮೂಲಿಕೆ ಸಿಗದೇ ಇದ್ದಾಗ ಕೈಕಟ್ಟಿ ಕೂಡುವುದಿಲ್ಲ. ಅದಕ್ಕೆ ಪರ್ಯಾಯವಾಗಿ ತಮಗೆ ಲಭ್ಯವಿದ್ದ ಔಷಧವನ್ನೆ ರೋಗಿಗೆ ಕೊಡುವರು. ಆಗ ಅದರಿಂದಲೇ ರೋಗವು ಗುಣಮುಖವಾಗಲೂಬಹುದು. ಏಕೆಂದರೆ ರೋಗಿಯ ಮನಸ್ಸು ಮುಖ್ಯ. ಆ ರೋಗಿಗೆ ಔಷಧ ತಗೆದುಕೊಳ್ಳುವತನಕ ತನ್ನ ರೋಗ ವಾಸಿಯಾಗುವುದಿಲ್ಲ ಎಂಬ ಮನಸ್ಥಿತಿ ನಿರ್ಮಾಣವಾಗಿರುತ್ತದೆ. ಆದ್ದರಿಂದ ಯಾವುದೇ ಔಷಧವನ್ನು ಕೊಟ್ಟರೂ ಅರ್ಧಪ್ರಮಾಣದಷ್ಟಾದರೂ ರೋಗ ವಾಸಿಯಾಗುತ್ತದೆ. ಅಲ್ಲದೆ ಆಧುನಿಕ ವೈದ್ಯದಂತೆ ನಮ್ಮ ಗಿಡ ಮೂಲಿಕೆಗಳಿಂದ ಅಡ್ಡ ಪರಿಣಾಮಗಳು ಉಂಟಾಗದ ಕಾರಣ ಕೆಲ ಸಂದರ್ಭದಲ್ಲಿ ಯಾವುದೇ ಮೂಲಿಕೆ ಯಾವುದೇ ರೋಗವನ್ನು ಗುಣಪಡಿಸಬಹುದು. ಈ ಕಾರಣದಿಂದಾಗ ನಮ್ಮ ದೇಶಿ ವೈದ್ಯಪದ್ಧತಿ ಅತ್ಯಂತ ಶ್ರೇಷ್ಠವಾದುದಾಗಿದೆ.

ವಾತ, ಪಿತ್ತ, ಕಫ, ದೋಶಗಳಿಂದ ಉಂಟಾಗುವ ಕೆಲವು ನಿರ್ದಿಷ್ಟ ರೋಗಗಳ ಲಕ್ಷಣ ಚಿಕಿತ್ಸಾ ವಿಧಿವಿಧಾನಗಳನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

**ಕಾಮಾಲೆ ಪಾಂಡುರೋಗ** : ಆಡುಸೋಗೆ, ಯಷ್ಟಿಮದುಕ ಇವನ್ನರೆದು ಜೇನುತುಪ್ಪ ಸಕ್ಕರೆ ಬೆರಸಿ ಕುಡಿಸಿದರೆ ಕಾಮಾಲೆ, ಪಾಂಡುರೋಗ ವಾಸಿಯಾಗುತ್ತದೆ. ನೀಲಿಯ ಸೊಪ್ಪನ್ನು ಮಜ್ಜಿಗೆಯೊಳಗೆ ಅರೆದು ಕುಡಿಸಿದರೆ ಕಾಮಾಲೆ ಗುಣವಾಗುವುದು". (ಲೋಕೋಪಕಾರ ೯-೧೧,೧೨) ಎಂದಿದೆ. ಪಾಂಡು ಮತ್ತು ಕಾಮಾಲೆ ರೋಗಗಳನ್ನು ಕಾರಣಗಳಿಗನುಸಾರವಾಗಿ ಚಿಕಿತ್ಸೆ ಮಾಡಬೇಕು. ಅದರಲ್ಲಿಯೂ "ಬಹುರೂಕ್ಷವಾದ ಹಳೆಯದಾದ ಪಾಂಡುರೋಗವು ಗುಣವಾಗುವುದಿಲ್ಲ. ಕಣ್ಣಿಗೆಲ್ಲವೂ ಪೀತವಾಗಿ ಕಾಣಿಸುವ ರೋಗಿಯ ಮತ್ತು ಶೋಧವಿರುವ, ಮಲಬಂಧ ಅಥವಾ ಅತಿಸಾರವಿರುವ ರೋಗಿಯ ಪಾಂಡುತ್ವವು ನಿವಾರಣೆಯಾಗುವುದಿಲ್ಲ. ಅಂತೆಯೇ ಮಲಮೂತ್ರಗಳು ಕೃಷ್ಣ ಅಥವಾ ಪೀತವಾಗಿದ್ದು, ಶೋಧ ಮತ್ತು ಕಣ್ಣುಗಳು ಕೆಂಪಾಗಿರುವ ರಕ್ತವನ್ನು ವಾಂತಿ ಮಾಡುವ, ಜ್ಞಾನ ತಪ್ಪುವ ಕಾಮಾಲೆ ರೋಗಿಯು ಬದುಕುವುದಿಲ್ಲವೆಂಬ ಅಭಿಪ್ರಾಯವಿದೆ"[೧೮]. ಜನಪದ ವೈದ್ಯದಲ್ಲಿಯೂ ಕಾಮಾಲೆ ರೋಗಿಗೆ ಎಣ್ಣೆ ಪದಾರ್ಥ, ಜಿಡ್ಡುಪದಾರ್ಥ, ಮಾಂಸಾಹಾರ ಅಪಥ್ಯವಾದರೆ, ಹಾಲು ಕಬ್ಬಿನಹಾಲು ಹುರಿಗಡಲೆ, ಎಳೆನೀರು, ಹೆಸರುಕಾಳು ಸಾರು ಮತ್ತು ಪಲ್ಯ ಬಹಳ ಉತ್ತಮ ಪಥ್ಯಾಹಾರವಾಗಿವೆ. ಒಂದು ವೇಳೆ ಈ ಪಥ್ಯ ನಿಯಮವನ್ನು ರೋಗಾವಸ್ಥೆಯ ಹಾಗೂ ಚಿಕಿತ್ಸೆಯ ಸಂದರ್ಭದಲ್ಲಿ ರೋಗಿಯು ಉಲ್ಲಂಘಿಸಿದರೆ ರೋಗ ಉಲ್ಬಣಗೊಂಡು ಮರಣಾಂತಿಕವಾಗಿ ಪರಿಣಮಿಸಲೂಬಹುದು ಎನ್ನಲಾಗುತ್ತದೆ. ಆದ್ದರಿಂದ ಇಲ್ಲಿ ಪಥ್ಯವು ಮುಖ್ಯವಾದುದಾಗಿದೆ.

**ವಿಷಮಜ್ವರಕ್ಕೆ** : ಕಟುಕ ರೋಹಿಣಿ ೨ಹಣ ತೂಕ। ವಡವಿನಬೇರಂ ಇವಂ ಬಿಸಿ ನೀರಲ್ಲಿ ಅರದು ಕೊಡಲು ವಿಷಮಜ್ವರ ಮಾಣ್ಣು ಅಥವಾ ವಿಷಪಡುವಲಕಾಯಿ-ಮೊಹಾಟಪೂಲ-ಹಿಪ್ಲಿಹೂವು-ಬಾಲಹರಡ, ಕಟುಕರೋಹಿಣಿ-ಜೇಕಿನಬೇರು ಯಿದರ ಕೂಡ ಪೂಡಿಮಾಡಿ ಕೊಟ್ಟರೆ ವಿಷಮಜ್ವರ ಶಾಂತವಾಗುವದು. ಹಾಗೂ ಅಡಸರದ ಎಲೆ। ಜೇಕಿನಬೇರು ಅಮರದ ಬಳ್ಳಿ ಬಲಹರಡ। ಸೊಂಠಿ। ಕಾಡು ಜೇನುತುಪ್ಪ ಹಿಪ್ಪಲಿ ಹಾಕಿ ಕೊಡಬೇಕು. ಅಂದರೆ ವಿಷಮಜ್ವರ ಹೋಗುವುದು"[೧೯] ಎಂದಿದೆ. ಆದರೆ ಆಯುರ್ವೇದದ ಅಭಿಮತದಂತೆ "ದೋಷವು ಸಂಪೂರ್ಣವಾಗಿ ಪಾಕವಾಗದಿರುವಾಗ ಅಥವಾ ಜ್ವರವಿರುವಾಗಲೇ ಅಪಥ್ಯವಾದ ಆಹಾರ ಮತ್ತು ಚರ್ಯೆಗಳನ್ನು ಸೇವಿಸಿದರೆ ರಸಗತವಾದ ಆಮಮ ರಸವೇ ಮೊದಲಾದ ಯಾವುದಾದರೊಂದು ಧಾತುವಿನಲ್ಲಿ ಸೇರಿಕೊಂಡು ನಿಯತಕಾಲದಲ್ಲಿ ಜ್ವರವನ್ನುಂಟುಮಾಡುತ್ತದೆ. ಈ ಜ್ವರಕ್ಕೆ ವಿಷಮ ಜ್ವರವೆಂದು ಹೆಸರು"[೨೦]. ಈ ವಿಷಮಜ್ವರದಲ್ಲಿ ಹನ್ನೆರಡು ವಿವಿಧ ಪ್ರಭೇದಗಳನ್ನು ಆ ಶಾಸ್ತ್ರ ಗುರುತಿಸಿದೆ. ಆಧುನಿಕ ಪಾಶ್ಚಾತ್ಯ ವೈದ್ಯಪದ್ಧತಿಯಲ್ಲಿ ವಿಷಮಜ್ವರಕ್ಕೆ ಟೈಫಾಯಿಡ್ ಎನ್ನುವರು. ಈ ಜ್ವರ ಸಾಮಾನ್ಯವಾಗಿ ಇಪ್ಪತ್ತೈದು ದಿವಸ ಇರುತ್ತದೆ. ಅಷ್ಟು ದಿವಸ ಪಥ್ಯದ ಜೊತೆ ಸದಾ ಚಿಕಿತ್ಸೆಯು ಮುಂದುವರಿಯಬೇಕಾಗುತ್ತದೆ. ಆದರೆ ಹಸ್ತಪ್ರತಿಯಲ್ಲಿ ಹೇಳಿದ ಕ್ರಮವು ಈ ವಿಷಮಜ್ವರಕ್ಕೆ ಉಪಶವನವಾಗುತ್ತದೆ ಎಂದಿರುವುದು ತಾತ್ಕಾಲಿಕ ಶಮನವಾಗಬಹುದು. ಆದರೆ ಇದನ್ನು ತಜ್ಞವೈದ್ಯರು ಪರೀಕ್ಷಿಸಿ ನೋಡಬೇಕು.

ಮಾನವರನ್ನು ಕಾಡುತ್ತಿರುವ ತೀವ್ರಸ್ವರೂಪದ ಹಲವು ರೋಗಗಳಲ್ಲಿ ಮೂಲವ್ಯಾದಿಯು ಒಂದು. ಅತಿ ಪುರಾತನ ಕಾಲದಿಂದಲೂ ಮೂಲವ್ಯಾದಿ ರೋಗವಿತ್ತೆಂದು ಆಯುರ್ವೇದ ಗ್ರಂಥಗಳಿಂದ ತಿಳಿದು ಬರುತ್ತದೆ.

ಇದನ್ನು ಮೂಲರೋಗ ಅಥವಾ ಮೊಳೆರೋಗ ಎಂದು ಕರೆಯುತ್ತಿದ್ದರು. ಇದರ ಚಿಕಿತ್ಸೆ ಕುರಿತು ಬೊಮ್ಮಯ್ಯನ ವೈದ್ಯಕಂದದಲ್ಲಿ "ಧೂಪ ಹಾಕುವುದರಿಂದ, ಲೇಪನದಿಂದ, ಅಭ್ಯಂಜನದಿಂದ ಹಾಗೂ ರಕ್ತವನ್ನು ಹೊರತೆಗೆಯುವುದರಿಂದ ಮೂಲರೋಗ ನಿವಾರಣೆಯಾಗುತ್ತದೆ ಎಂಬುದು ಬಾಹಟನ ಮತವಾಗದೆ ಎನ್ನುತ್ತಾನೆ. ಹಾಗೂ ಮೂಲವ್ಯಾಧಿಗೆ ಜಿಗುಳೆಯನ್ನು ಓಲಾಯದಿಂದ ಹಿಡಿಸಿ ರಕ್ತವನ್ನು ತೆಗೆದು ಔಷಧ ಲೇಪನ ಮತ್ತು ಹೊಗೆಯನ್ನು ಕೊಡಲು ಬಹುಬೇಗ ವಾಸಿಯಾಗುವುದು"[೨೧] ಎಂದು ಹೇಳಲಾಗಿದೆ. ಅಲ್ಲದೆ 'ವೈದ್ಯಶಾಸ್ತ್ರ' ಎಂಬ ಹಸ್ತಪ್ರತಿಯೊಂದರಲ್ಲಿ ಚಿಕಿತ್ಸೆಯನ್ನು ಹೇಳಿದ್ದು ಹೀಗೆ;

ಪಲಮೆಣಸು ಶುಂಠಿಯೆರಡಂ। ಪಲ ಚಿತ್ರಕ ನಾಲ್ಕು ಸೂರಣವು ತಾನೆಂಟುಂ ಪಲ ಸರ್ವಕೆ ಸಮಬೆಲ್ಲವ। ನೆಲಗೊಳಿಸುಣು ಶೂಲೆ ಮೂಲರೋಗಕೆ ಓತಮಂ. ತಿಲಕೆರಡಣಿಲೆಯು ಗುಡವಂ । ಮೆಲುವುದು ಸಮಭಾಗಗೂಡಿ ತೊಲೆಮಾತ್ರವನುಂ ಗೆಲುವುದು ಮೂಲವ್ಯಾಧಿಯ। ಕೊಲುವುದು ಶ್ವಾಸವನು ಕಾಸ ಹರಮುಂ–೬೫೦ ಒಂದು ಫಲ ಮೆಣಸು, ಎರಡು ಫಲ ಶುಂಠಿ, ನಾಲ್ಕು ಫಲ ಚಿತ್ರಕ ಮತ್ತು ಎಂಟು ಪಲ ಸೂರಣಕ್ಕೆ ಸಮ ಬೆಲ್ಲವನ್ನು ಸೇರಿಸಿ ತೆಗೆದುಕೊಂಡರೆ ಶೂಲೆ ಮತ್ತು ಮೂಲರೋಗ ನಿವಾರಣೆಯಾಗುತ್ತದೆ. ಇಲ್ಲವೆ ಒಂದು ಉಳ್ಳಿಗೆ ಎರಡು ಭಾಗ ಅಣಿಲೆಯನ್ನು ಹಾಕಿ, ಸಮಭಾಗ ಬೆಲ್ಲವನ್ನು ಸೇರಿಸಿ ತೊಲ ಮಾತ್ರವನ್ನು ಸೇವಿಸುತ್ತಿರಲು ಶೂಲೆ ಮೂಲರೋಗ ನಿವಾರಣೆಯಾಗುವುದು. ಅದೇ ರೀತಿ ವೈದ್ಯಶಾಸ್ತ್ರ ಗ್ರಂಥದಲ್ಲಿ "ಮನುಷ್ಯನ ಕೂದಲು। ಹಾವಿನಪರಿ। ವಾಯುವಿಳಂಗ। ಯಕ್ಕಿಗಿಡದ ಬೇರು। ಬನ್ನಿಎಲಿ। ಕೋತಿನಪುಳಿಕೆ। ಹಿಂಗು। ಮಿವುಗಳ ಹೊಗೆ ಕೊಟ್ಟರೆ ಮೂಲವ್ಯಾದಿಯು ತ್ವರಿತದಿಂದ ಭಗ್ನವಾಗುತ್ತದೆ"[೨೨] ಎನ್ನಲಾಗಿದೆ. ಈ ಕುರಿತು ಚಾವುಂಡರಾಯನ ಲೋಕೋಪಕಾರದಲ್ಲಿ "ಹಿಪ್ಪಲಿಮೂಲದ ಚೂರ್ಣ ಮತ್ತು ಗೇರಗೊಟ್ಟೆಯ ಜೇನುತುಪ್ಪ ಸೇರಿಸಿಕೊಂಡು ಕಷಾಯ ಅಟ್ಟು ಕುಡಿಯಬೇಕು. ಎಳ್ಳು ಗೇರಗೊಟ್ಟಿ ಅಥವಾ ಚಿತ್ರಮೂಲದ ಬೇರನ್ನು ಗೋಗಂಜಲದಲ್ಲಿ ತೇಯ್ದು ಕುಡಿಯಬೇಕು. ಈ ಕ್ರಮದಿಂದ ಮೂಲವ್ಯಾದಿರೋಗ ಗುಣವಾಗುವುದು. ದೇವದಾರು ಬೀಜದ ತಿಗುಡು, ಸೋರೆಬೀಜದ ತಿಗುಡು, ಹಾವುಮೆಕ್ಕೆ ಬೇರು, ಬೆಲ್ಲ ಇವನ್ನು ಒಂದಾಗಿ ಅರೆದು ಮಿದಿದು ಮಾಡಿ ಬತ್ತಿಯ ನಿರಿಸುಗೆ ಗುದದೊಳಗೆ ಕಳಿಗುಮರಿಸೆಯ ಮೊಳೆಗಳ್" (೯–೧೪೪) ಎಂದು ಲೇಪನವನ್ನು ಹೇಳಲಾಗಿದೆ. ಈ ಶಾಸ್ತ್ರಜ್ಞರು ಹೇಳಿದ ಕ್ರಮಗಳು ಆಧುನಿಕ ವೈದ್ಯಕ್ಕೆ ಹೋಲಿಸಿದರೆ ಪಾನ ಮತ್ತು ಲೇಪನ ಔಷಧಿಗಳು ಮೂಲವ್ಯಾದಿಯನ್ನು ಹೋಗಲಾಡಿಸುವುದಕ್ಕೆ ಬಹು ಸಹಕಾರಿ ಚಿಕಿತ್ಸಾ ವಿಧಾನವೆನಿಸುತ್ತದೆ. ಆಧುನಿಕ ವೈದ್ಯಪದ್ಧತಿಯಲ್ಲಿ ಶಸ್ತ್ರ ಚಿಕಿತ್ಸೆಯಿಂದ ಮಾತ್ರ ಸಾಧ್ಯ ಎಂದು ಹೇಳಲಾಗುತ್ತದೆ. ಆದರೆ ಇದು ಸರಿಯಾದ ಕ್ರಮವಲ್ಲ. ಈ ರೋಗವು ಮಲಬದ್ದತೆ ಕಾರಣದಿಂದ ಹುಟ್ಟಿರುತ್ತದೆ. ಆದ್ದರಿಂದ ಮಲಬದ್ಧತೆ ಸರಿಯಾಗಿ ಆಗುವಂತೆ ನೋಡಿಕೊಂಡರೆ ಅದು ಸಹಜವಾಗಿ ವಾಸಿಯಾಗುತ್ತದೆ. ಎಂಬುದು ತಜ್ಞವೈದ್ಯರ ಅಭಿಪ್ರಾಯವೂ ಆಗಿದೆ.

ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಕಣ್ಣು, ಕಿವಿ, ಮೂಗು, ಗಂಟಲು ರೋಗಗಳಿಗೂ ವೈದ್ಯೋಪಚಾರವನ್ನು ಹೇಳಲಾಗಿದೆ. ಅವುಗಳನ್ನೀಗ ಪರಿಶೀಲಿಸಬಹುದಾಗಿದೆ. "ಉತ್ತರಣೆಯ ಬೇರು ಮತ್ತು ಸೈಂಧವಲವಣಗಳನ್ನು ಹಣ್ಣಿನ ರಸದಲ್ಲರೆದು ತಾಮ್ರದ ಬಟ್ಟಲಿನಲ್ಲಿ ಮರ್ದಿಸಿ ಕಣ್ಣಿಗೆ ಹಚ್ಚಿದರೆ ನೇತ್ರರೋಗ ಗುಣವಾಗುವುದು. ಮದೆಹುಲ್ಲಿನ ಬೂದಿಯನ್ನು ಮೊಲೆಹಾಲಿನಲ್ಲಿ ಕಲಸಿ ಅದನ್ನು ಕಂಚಿನ

ಪಾತ್ರೆಯ ಹೊರಭಾಗದಿಂದ ಮರ್ದಿಸಿ ಕಣ್ಣಿಗೆ ಹಚ್ಚುವುದರಿಂದ ಕಣ್ಣಿನ ಬೇನೆಗೆ ಫಲಕಾರ. ಎರಂಡಮೂಲ ಮತ್ತು ಎಲೆಯನ್ನು ನುಣ್ಣಗೆ ಮಾಡಿ ಕರಿ ಆಡಿನ ಹಾಲಿನಲ್ಲಿ ಕುದಿಸಿ ಅದರಿಂದ ಹದವರಿತು ಶಾಖ ಕೊಟ್ಟುಕೊಳ್ಳುವುದು ಕಣ್ಣಿನ ಶೂಲಿಗೆ ಹಿತಕರ. ಸಮುದ್ರಫಲ, ಸಕ್ಕರೆ ಇವೆರಡನ್ನು ಸರಿಯಾಗಿ ನೀರಿನಲ್ಲಿ ಅರದು ಕಂಣಿಗೆ ಹಚ್ಚಲು ಅರ್ಬುದವೆಂಬ ಕಂಣರೋಗವು ಹೋಗುವದು. ಅದು ಹಿಪ್ಪಲಿ, ಗೋಮೂತ್ರದಲ್ಲಿ ತೇದು ಹಚ್ಚಲು ಯಿರಳು ಕಂಣು ಕಾಣುವವು. ಅರಗು, ರಸಾಂಚನ, ಸುಂಠಿ, ಹಿಪ್ಪಲಿ, ಮೆಣಸು ಇವುಗಳನ್ನು ಸರಿಯಾಗಿ ತೆಗೆದುಕೊಂಡು ಅಂಜನವ ಮಾಡಿ ನೀರಲ್ಲಿ ತೈದು ಹಚ್ಚಲು ಪಿಚ್ಚ ಕಂಣು ಮಾಣ್ಣುಂ"[೩೩]. ಇಲ್ಲಿ ಸೂಚಿಸಿದ ವೈದ್ಯೋಪಚಾರಗಳನ್ನು ಇಂದಿನ ಅಲೋಪಥಿ ವೈದ್ಯ ವಿಜ್ಞಾನಕ್ಕೆ ತುಲನೆಮಾಡಿ ನೋಡಲಾಗಿ ಆಧುನಿಕ ವೈದ್ಯ ವಿಜ್ಞಾನದಲ್ಲಿ ಸಮೀಪ ಅಥವಾ ದೂರ ದೃಷ್ಟಿಯುಳ್ಳ ರೋಗಿಗಳಿಗೆ ಪೊರೆ ಬಂದಾಗ ಆರಂಭದಲ್ಲಿಯೇ ವಿಶ್ರಾಂತಿಯ ವ್ಯಾಯಾಮಗಳು ಅಂದರೆ ಒಂದು ಕಣ್ಣನ್ನು ಮುಚ್ಚಿಕೊಂಡು ಇನ್ನೊಂದರಿಂದ ನೋಡುವುದು, ಅಂಗೈಯನ್ನು ತಿಕ್ಕಿಕೊಂಡು ಕಣ್ಣಿಗೆ ಹಚ್ಚಿಕೊಳ್ಳುವುದು, ಮೂಲ ಅಕ್ಷರಗಳನ್ನು ಓದುವುದು–ಇವುಗಳು ಸ್ವಲ್ಪ ನೆರವಾಗುವುವು ಎನ್ನಲಾಗುತ್ತದೆ. ಆದರೆ ಇವೆಲ್ಲ ತಾತ್ಪೂರ್ತಿಕ ಉಪಾಯಗಳು ಮಾತ್ರ. ಪೊರೆಯು ಬಲಿಯಲು ಬಿಡದೆ ಶಸ್ತ್ರ ಚಿಕಿತ್ಸೆ ಮಾಡಿಸಿ ತೆಗೆಯಿಸಿ ಬಿಡಬೇಕು. ಇಲ್ಲದಿದ್ದರೆ ಸಂಪೂರ್ಣವಾಗಿ ದೃಷ್ಟಿ ಕಳೆದು ಹೋಗುವ ಭಯ ಇರುತ್ತದೆ ಎಂದೂ ನೆನಪು ಮಾಡಿಕೊಡುತ್ತದೆ.

ಅದೇ ರೀತಿ ದೇಶಿ ವೈದ್ಯಪದ್ಧತಿಯಲ್ಲಿ; ಸಮಸ್ತವಾಗಿ ಇರುವ ನೇತ್ರರೋಗಗಳಲ್ಲಿಯೂ ಆದಿಯಲ್ಲಿ ಅಶ್ಚೋತನವ ಮಾಡುವುದು. ಆಶ್ಚೋತನವೆಂದರೆ ಹಿತವಾದ ಔಷಧಗಳ ಹಾಕಿ ಕಾಯಿಸಿದ ಕಷಾಯವನ್ನು ಕಣ್ಣ ಒಳಯಕ್ಕೆ ಹೊತ್ತು ಹೊತ್ತಿಗೆ ಧಾರೆಯಾಗಿ ಬಿಡುವುದೇ ಅಶ್ಚೋತನವೆನಿಸಿಕೊಂಬುದು. ಈ ಆಶ್ಚೋತನವೆಂಬ ಚಿಕಿತ್ಸೆಯಿಂದ ಕಣ್ಣುನೋವು, ಮಿಡಿವುದು, ಇರಿತವೂ, ತಿಮಿರವೂ, ಗಾರೂ, ನೀರು ಸುರಿವುದೂ, ಉರಿತವೂ, ಕೆಂಪೂ ಇಷ್ಟೂ ಪರಿಹರಮಕ್ಕುಂ" ಎಂದು ಹೇಳಲಾಗುತ್ತದೆ. ಮತ್ತು ಬಾಹಟಾಚಾರ್ಯರ ಮತದಂತೆ; ಹೊಸತಾಗಿ ಕಣ್ಣು ರೋಗವಾದವರು ತಾಂಬೂಲ ಚರ್ವಣವನೂ ಇತ್ತಲತ್ತ ಸಂಚಾರವನೂ ಬದನೆಕಾಯಿ ಮೊದಲಾದ ಶಾಖೆಗಳನೂ ನೀರ ಸ್ನಾನವನೂ, ಜಲಪಾನವನೂ, ಸ್ತ್ರೀಸಂಗವನೂ, ಧೂಳು ಮೊದಲಾದ ಸೇವನೆಯನೂ ಮೊಳವಾದ ಪ್ರಳಾಪವನೂ ಬಿಸಿಲು ಸೂರ್ಯ ದೀಪ ಧೂಪ ಗಾಳಿ ಸಹ ವರ್ಜಿತಂ"[೩೪]. ಎಂದು ಹೇಳಿ ಚಿಕಿತ್ಸೆಯಾಗಿ ಸಂಹಿತೆ, ಪೊಟ್ಟಣ, ಆಶ್ಚೋತನ, ಲೇಪ, ತೈಲ, ಅಂಜನ, ಕಪ್ಪು ಇತ್ಯಾದಿ ಔಷಧಗಳನ್ನು ಹೇಳಲಾಗಿದೆ.

**ಕಿವಿಯ ಶೂಲೆ :** ಸಬ್ಬಸಿಗೆ ಸೈಂದವಲವಣ, ದೇವದಾರು, ಬಜೆ, ಇಂಗು, ಭದ್ರಮುಸ್ತೆ, ಶುಂಠಿ ಈ ಮೂಲೆಕೆಗಳನ್ನು ಸಮಪ್ರಮಾಣದಲ್ಲಿ ಗೋಮೂತ್ರದಲ್ಲಿ ಅರೆದು ಎಳ್ಳೆಣ್ಣೆಯಲ್ಲಿ ಬೇಯಿಸಿ ಬಳಿಕ ಕಿವಿಗೆ ಹಿಂಡಬೇಕು. ಅಂತೆಯೇ ಕೊಗ್ಗೆ, ಉಪ್ಪು ಈ ಎರಡನ್ನು ತೈಲದಲ್ಲಿ ಅಟ್ಟು ಕಿವಿಗೆ ಹನಿಸಬೇಕು. ಎಕ್ಕೆ, ಅವುಡಲ, ಮರಬಸಳೆ ಈ ಸಸ್ಯಗಳ ಬೇರ ರಸವನ್ನು ಬೇರೆ ಬೇರೆಯಾಗಿ ತೆಗೆದು ಕಿವಿಗೆ ಬಿಡಬೇಕು. ಈ ಕ್ರಮೋಪಚಾರದಿಂದ ಕಿವಿಯ ಶೂಲೆ ದೂರವಾಗುವುದು. ಕಿವಿಯೊಳಗೆ ಬೊರೆಂಬ ಶಬ್ದ ಬಂದರೆ ಸಾಸಿವೆ ತೈಲವನ್ನು ಹಾಕಬೇಕು. ಹಾಗೂ ಸರಾಯಿ ತುಂಬಬೇಕು. ಉಳ್ಳಿಯರಸ ತೈಲವ ಬೆರಸಿ ಬೀಡುವುದು

ಇವುಗಳಿಂದ ಗುಣವಾಗುವುದು"[೨೫]. ಈ ಕ್ರಮಗಳು ಇಂದಿಗೂ ಜನಪದರಲ್ಲಿ ಮುಂದುವರಿದುಕೊಂಡು ಬಂದಿವೆ. ಇದು ಜನಪದ ವೈದ್ಯದ ಹಿನ್ನೆಲೆಯಿಂದಲೇ ಬಂದುದಾಗಿದೆ. ಜನಪದ ವೈದ್ಯದಲ್ಲಿಯೂ ಕಿವಿಹುಣ್ಣಿಗೆ "ನಾಲ್ಕು ಹನಿ ಉಪ್ಪುನೀರನ್ನು ದಿನಕ್ಕೆ ಎರಡು ಸಾರಿಯಂತೆ ಕಿವಿಗೆ ಹಾಕಬೇಕು. ಹತ್ತು 'ಎಲೆಲಕ್ಕೆ' ಸೊಪ್ಪಿನ ಎಲೆಗಳು, ಎರಡು ನಿಂಬೆ ಎಲೆ ಮತ್ತು ಸಾಸಿವೆ ಕಾಳುಗಳನ್ನು ಒಟ್ಟಿಗೆ ಅರೆದು, ಅದನ್ನು ಎಳ್ಳು ಎಣ್ಣೆಯಲ್ಲಿ ಕುದಿಸಿ ತಂಪಾದ ಮೇಲೆ ಕಿವಿಯಲ್ಲಿ ದಿನಕ್ಕೆ ಎರಡು ಹನಿಗಳಂತೆ ನಾಲ್ಕು ದಿನಗಳು ಬಿಡಬೇಕ"[೨೬]. ಇದನ್ನು ಗಮನಿಸಿದಾಗ ಮೇಲಿನ ಮಾತಿಗೆ ಮತ್ತಷ್ಟು ಪುಷ್ಟಿ ಸಿಗುತ್ತದೆ.

**ನಾಸಿಕ ರೋಗಕ್ಕೆ :** ದಾಳಿಂಬದ ಹೂವನ್ನು ಕರಕುಮಾಡಿ ರಸವನ್ನು ಸೇರಿಸಿ ಅರೆದು ನಸ್ಯಮಾಡಲು ಮೂಗಿನಲ್ಲಿ ರಕ್ತ ಬೀಳುವ ಪೀಡನೆಯು ಏಳು ದಿನಗಳಲ್ಲಿ ನಿಲ್ಲುವುದು. ಕರಿಯ ಜೀರಿಗೆಯನ್ನು ಅರೆದು ಬಟ್ಟೆಯಲ್ಲಿ ಗಂಟು ಕಟ್ಟಿ ಮೂಸುವುದು ಮತ್ತು ಅರಿಸಿನದ ಹೊಗೆಯನ್ನು ತೆಗೆದುಕೊಳ್ಳುವುದರಿಂದ ಪೀನಸೆ ಪರಿಹರ. ಇಂಗು, ಮಣಿಶಿಲೆ, ವಾಯುವಿಳಂಗ, ಗುಗ್ಗಳ, ತ್ರಿಕಟುಕ, ಬಜೆ ಇವುಗಳನ್ನು ಸಮಭಾಗವಾಗಿ ಕೂಡಿಸಿ ಚೂರ್ಣಮಾಡಿ ನಸ್ಯಮಾಡಲು ಪೀನಸೆ ಪರಿಹರ"[೨೭].

**ಹಲ್ಲು ನೋವಿಗೆ :** ಎಲವು ಗಂಕನಬೇರು, ಆಗಲ, ಗುಲಗಂಜಿಬೇರು ಹಲ್ಲುಸಂದಿಗೆ ವರಸಲು ಹುಳ ಉಚ್ಚಿ ಬೀಳುವುದು. ಹಾಗೆಯೇ ಕಿರುಕುಸಾಲೆ ಬೇರಿನ ರಸ ಅಥವಾ ಗುರುಗಂಜಿ ಬೇರು ಇಂಗು ಸೇರಿಸಿದ ರಸವನ್ನು ಕಿವಿಗೆ ಬಿಡುವುದರಿಂದಲೂ ಹಲ್ಲು ನೋವು ಪರಿಹರ"[೨೮]. ಹಲ್ಲು ಹುಳುಕಾಗುವುದರಿಂದ ಒಸಡು ಮತ್ತು ದವಡೆ ಊದಿಕೊಳ್ಳುವುದು ಅದರಿಂದಾಗಿ ನೋವಾಗುವುದು ಸಾಮಾನ್ಯ. ಹಲ್ಲುಗಳು ಚೆನ್ನಾಗಿ ಶುಭ್ರವಾಗಿದ್ದು ಸ್ವಚ್ಚವಾಗಿದ್ದರೆ ಮುಖಕ್ಕೆ ಒಳ್ಳೆಯ ಕಾಂತಿಯನ್ನು ಕೊಡುತ್ತವೆ. ಒಳ್ಳೆಯ ಹಲ್ಲುಗಳು ಒಳ್ಳೆಯ ಆರೋಗ್ಯದ ಲಕ್ಷಣ. ನಾವು ಸೇವಿಸಿದ ಆಹಾರವನ್ನು ಅತಿ ಸಣ್ಣಗೆ ಮಾಡಿ ಜೀರ್ಣಕ್ಕೆ ಅವಕಾಶ ಮಾಡಿಕೊಡುವ ಕೆಲಸವನ್ನು ಹಲ್ಲುಗಳು ಮಾಡುತ್ತವೆ. ಹಲ್ಲುಗಳು ಇದ್ದರೇನೇ ಸ್ಪಷ್ಟವಾಗಿ ಮಾತನಾಡಲು ಸಾಧ್ಯ. ಆದ್ದರಿಂದ ಇದಕ್ಕೆ ಶಾಸ್ತ್ರಜ್ಞರು ಹೇಳಿದ ಕ್ರಮವನ್ನು ಅನುಸರಿಸಿದರೆ ಹುಳುಗಳು ನಾಶವಾಗಿ ಹಲ್ಲುನೋವು ಕಡಿಮೆಯಾಗುತ್ತದೆನ್ನುವುದು ಒಪ್ಪತಕ್ಕ ಮಾತು.

ದೇಶಿ ವೈದ್ಯಪದ್ಧತಿಯಲ್ಲಿ ತೊನ್ನು, ಕಜ್ಜಿ, ತುರಿಕೆ, ಮೊದಲಾದ ಚರ್ಮರೋಗಗಳನ್ನು 'ಕುಷ್ಠ' ಎಂದು ಕರೆಯುವರು. ಇವುಗಳಲ್ಲಿ ಭೀಕರ ಲಕ್ಷಣಗಳಿದ್ದು ಶರೀರ ಧಾತುಗಳನ್ನು ನಾಶಮಾಡುವವುಗಳಿಗೆ 'ಮಹಾಕುಷ್ಠಗಳು' ಎಂದೂ, ಪ್ರಚುರವಾದ ಸಾಮಾನ್ಯ ಚರ್ಮರೋಗಗಳಿಗೆ 'ಕ್ಷುದ್ರಕುಷ್ಠಗಳು' ಎಂದೂ ಕರೆಯಲಾಗಿದೆ. ಆ ಪ್ರಕಾರ ಒಟ್ಟು ಹದಿನೆಂಟು ಕುಷ್ಠರೋಗಗಳನ್ನು ಆಯುರ್ವೇದ ಪರಿಚಯಿಸುತ್ತದೆ. ಅದರಲ್ಲಿ ಮಹಾಕುಷ್ಠಗಳು ಏಳು ಬಗೆಯೆಂದೂ ಕ್ಷುದ್ರಕುಷ್ಠಗಳು ಹನ್ನೊಂದು ಬಗೆಯೆಂದೂ ತಿಳಿಯಲಾಗಿದೆ. ಇವುಗಳಿಗೆ ಚಿಕಿತ್ಸೆ ಹೇಳಿದ್ದು ಹೀಗೆ;

ಕಾರ್ತಿಕ ಮಾಸದಲ್ಲಿ ಪುಷ್ಯ ನಕ್ಷತ್ರದಲ್ಲಿ ಬೇವಿನ ಚಿಗುರಂ ತಂದು ಗಾಣದ ಮೇಲಣ ಎಣ್ಣೆಯಲ್ಲಿ ೨೧ ದಿನ ಪ್ರಾತಃಕಾಲದಲ್ಲಿ ಸೇವಿಸೆ ಕುಷ್ಠ, ದದ್ರು, ತಿಮಿರ ಸಹಮಾಣ್ಗುಂ. ಹಳೆ ಇಪ್ಪೆಮರದ ಬೇರನ್ನು ಕತ್ತರಿಸಿ ಒಣಗಿಸಿ ಹರವಿಯ ತುಂಬಿ ಗುಂಡಿಯೊಳಗೆ ಒಂದು ಮೊಗೆಯನಿಟ್ಟು ಅದರ ಮೇಲೆ ಶ್ರವೆಯನಿರಿಸಿ ಹರವಿಯ ಬೋರಲಾಗಿ ಕವಚಿ ಸೀರಮಣ್ಣ ಮೆತ್ತಿ ಮೇಲೆ ಬೆರಣಿಯನೊಟ್ಟಿ ಪುಟವ ಹಾಕಿ ಸಾಂಗಶೀತಲವಾದ

ಮೇಲೆ ತೆಗೆದು ಆ ತೈಲವಂ ಧಾನ್ಯ ಪುಟದಲ್ಲಿ ೧೨ ದಿನವಿರಿಸಿ ತೆಗೆದು ದುಡ್ಡು ತೂಕ ಆ ತೈಲದಲ್ಲಿ ಹುರಿಹಿಟ್ಟನು ಕಲಸಿ ಮೆಲ್ಲುವುದು. ತೈಲವಂ ಮೈಗೆ ಲೇಪಿಸುವುದು ಈ ಪ್ರಕಾರ ೧ ಮಂಡಲ ಸೇವಿಸೆ ಅಷ್ಟಾದಶ ಕುಷ್ಠಗಳುಂ ಗುಣಮಕ್ಕುಂ. ಅಳಲೆಕಾಯಿ, ತಾರೆಕಾಯಿ, ನೆಲ್ಲಿಕಾಯಿ ಈ ಮೂರನೂ ಒಳಗಣ ಬೀಜವ ತೆಗೆದು ಪುಡಿಮಾಡಿ ಶುದ್ಧಿಮಾಡಿದ ಗಂಧಕ, ಸಾಂಬ್ರಾಣಿಧೂಪ ಸಹ ಪುಡಿಮಾಡಿ ಪ್ರತ್ಯೇಕವಾಗಿಸಿಕೊಂಡು ಲೊಕ್ಕಿಸೊಪ್ಪು, ನೆಲಗುಳ್ಳದ ಸೊಪ್ಪು, ಬೇವಿನಸೊಪ್ಪು, ಆಡುಸೋಗೆಸೊಪ್ಪು ಇವಂ ಸಮಾನವಾಗಿ ಒಂದು ಮಡಿಕೆಯಲ್ಲಿ ಹಾಕಿ ಒಲೆಯ ಮೇಲಿಕ್ಕಿ ೪ ಮೊಗೆ ನೀರ ಹುಯಿದು ೧ ಬಗೆ ನೀರು ನಿಲ್ಲುವ ಹಾಗೆ ಕಾಸಿ ಬಸಿದು ಶೋಧಿಸಿ ಅದರಲ್ಲಿ ಅರಪಡಿ ಕೈಯೆಣ್ಣೆಯ ಹನಿಸಿ ಪುನಃ ಒಲೆಯ ಮೇಲಿಟ್ಟು ಪಾಕವ ಮಾಡಿ ಆ ಚೂರ್ಣಂಗಳಂ ಈ ಕಷಾಯದಲ್ಲಿ ಹಾಕಿ ತೊಳಸಿ ಗಟ್ಟಿಯಾದುದನಿಳುಹಿಕೊಂಡು ದಿನ ೧ಕ್ಕೆ ಅಡಿಕೆ ಗಾತ್ರವನ್ನು ಊಟದ ಮೊದಲಿನಲ್ಲಿ ಅನ್ನಕ್ಕೆ ಹಾಕಿ ಕಲಸಿಕೊಂಡು ಉಣ್ಣುವದು. ಹುಳಿ ಶಲದಿ ವರ್ಜ್ಯವಾಗಿ ಪತ್ಯವನುಂಬುದು. ಈ ಪ್ರಕಾರ ೧ ಮಂಡಲ ಸೇವಿಸಲು ಬಿಳಿತೊನ್ನು ಮಾಣುವುದು"[೨೯]. ಎನ್ನಲಾಗಿದೆ.

ಈ ಕುರಿತು ಚಾವುಂಡರಾಯ ಲೋಕೋಪಕಾರದಲ್ಲಿ ಹದಿನೆಂಟು ಬಗೆಯ ಕುಷ್ಠರೋಗಳಿಗೂ ಪ್ರತ್ಯೌಷಧವನ್ನು ತಿಳಿಯಪಡಿಸಿದ್ದಾನೆ. ಆ ವಿಚಾರವನ್ನು ತಿಳಿಯಪಡಿಸಿದ್ದು ಹೀಗಿದೆ;

ನಿಂಬದಳಂ ಧಾತ್ರೀಫಳ
ಮೆಂಬಿವನೊಡನರೆದು ಕುಡಿವುದಣಿಲೆಗಳಂ ಮೇಣ್
ತಿಂಬುದನುಕ್ರಮದಿಮ ಸೆರೆ
ಯುಂ ಬಿಡುವುದು ಕುಷ್ಠರೋಮಿವಱಂ ಕಿಡುಗಂ (೯-೧೧೦)

ಕರಿಯೆಳ್ಳು ಬಾವುಜಿಗೆಯರು
ಷ್ಕರ ಬೀಜಮಿವಱ ಸಮಾನಮಾಗಿರೆ ತಿಂಗಳ್
ವರೆಗಂ ಸೇವಿಸುತಿರೆ ಸಂ
ಹರಿಕುಂ ಪದಿನೆಂಟು ತೆರದ ಕುಷ್ಠಂಗಳುಮಂ (೯-೧೧೦)"[೩೦]

"ಬೇವಿನ ಸೋಪ್ಪು, ನೆಲ್ಲಿನ ಸೆಟ್ಟು, ಈ ಎರಡುಮನುದಕದಲ್ಲರೆದು ಕುಡಿಯುವುದು. ಅಲ್ಲಾ ಅಣಿಲೆಯ ಕಾಯನನುಕ್ರಮದಿಂ ಸೇವಿಸುವ ಕಟ್ಟಳೆ ಮೂರುದಿನಪರ್ಯಂತಂ ದಿನಕ್ಕೆ ವೊಂದೊಂದು ಕಾಯಂ ಸೇವಿಸುವುದು. ಏಳನೆಯ ದಿನ ತೊಡಗಿ ಮೂರುದಿನ ಪರ್ಯಂತಂ ಮೂರು ಕಾಯಂ ಸೇವಿಸುವುದು. ಈ ಮರ್ಯಾದೆಯಲ್ಲಿ ಮೂರು ದಿನಕ್ಕೆ ಒಂದೊಂದು ಕಾಯಂ ಅಧಿಕಮಾಗಿ ಸೇವಿಸುವುದು. ಅರ್ಧ ಮಂಡಲಕ್ಕೆ (ಇಪ್ಪತ್ತು ನಾಲ್ಕು ದಿವಸ) ಎಂಟು ಕಾಯಂ ಸೇವಿಸುವುದು. ಅಲ್ಲಿಂದ ಮೇಲೆ ಅರ್ಧಮಂಡಲ ಪರಿಯಂತಂ ದಿನಂಪ್ರತಿ ಎಂಟೆಂಟು ಕಾಯಂ ಸೇವಿಸುವುದು. ಸೆರೆಬಿಡುವ ಠಾವನಱುತು ಸೆರೆಯಂ ಬಿಡುವುದು. ಇದರಿಂದೆ ಬಿಳಿಯ ತೊನ್ನು ಮಾಣ್ಬುದು. ಕರಿಯೆಳ್ಳು, ವಾಕಚಿಯ ಬೀಜಂ, ಅರುಷ್ಕರ ಬೀಜಂ (ಗೇರಕೊಟ್ಟೆ) ಇವಂ ಸಮಭಾಗೆಯಾಗೆ ಕೊಂಡು ಒಂದು ಮಂಡಲ ಪರ್ಯಂತಂ ಸೇವಿಸಲ್ "ಪದಿನೆಂಟು ತೆರದ ತೊನ್ನಗಳುಂ ಮಾಣ್ಬುವು" ಇದು ಈ ಪದ್ಯಗಳಿಗಿರುವ ಟೀಕಾರ್ಥ. ಇಲ್ಲಿ 'ಅಣಿಲೆಗಳಂ ತಿಂಬುದನುಕ್ರಮದಿಂ ಸೆರೆಯಂ ಬಿಡುವುದು' ಎಂಬ ಮಾತು

ಗಮನಾರ್ಹ. ಮೊದಲೇ ಗಮನಿಸಿದಂತೆ ಅಣಿಲೆಕಾಯಿ ಸರ್ವರೋಗ ನಿವಾರಕ. ಇದು ಈ ಗುಣವನ್ನು ಹೊಂದಿದೆ. ಚಾವುಂಡರಾಯ ಮತ್ತು ವೀರರಾಜೇಂದ್ರರು ಹೇಳಿರುವ ಬಿಳಿತೊನ್ನು ಚಿಕಿತ್ಸಾಕ್ರಮವು ಅತ್ಯುಪಯುಕ್ತವಾದದ್ದು. ಇಂದಿಗೂ ಆಧುನಿಕ ವೈದ್ಯವಿಜ್ಞಾನ ಅಲೋಪಥಿಯಲ್ಲಿ ಈ ಬಿಳಿ ತೊನ್ನಿಗೆ ಚಿಕಿತ್ಸೆಯನ್ನು ಸಮರ್ಥವಾಗಿ ನಿರೂಪಿಸಿರುವುದಿಲ್ಲ. ಆದ್ದರಿಂದ ನಮ್ಮ ಪ್ರಾಚೀನರು ಅಂಥ ಮಹಾ ಕುಷ್ಠಕ್ಕೆ ಚಿಕಿತ್ಸೆ ಹೇಳಿರುವುದು, ಗಮನಾರ್ಹವಾದದ್ದು. ಅದನ್ನು ಪ್ರಯೋಗಿಸಿ ಬಳಕೆಗೆ ತರುವುದು ಸೂಕ್ತವಾದದು. ಹಾಗೂ ವಿವಿಧ ಔಷಧಿ ಪದಾರ್ಥಗಳ ಜೊತೆ ಬೇವಿನ ಸೊಪ್ಪನ್ನು ಕ್ರಮವಾಗಿ ಹೇಳಿದೆ. ಬೇವಿನ ಸೊಪ್ಪು ಅತ್ಯಂತ ವಿಷವಾಗಿದ್ದು ಇದು ದೇಹದೊಳಗಿನ ಕ್ರಿಮಿಕೀಟಗಳನ್ನು ಮತ್ತು ಚರ್ಮಕ್ಕೆ ಕಾರಣವಾದ ಬಾಹ್ಯ ಕ್ರಿಮಿಗಳನ್ನು ಹೋಗಲಾಡಿಸುವಲ್ಲಿ ಅತ್ಯಂತ ಉಪಯುಕ್ತ ಔಷಧ. ನಮ್ಮ ಸಂಸ್ಕೃತಿಯಲ್ಲಿ ಬೇವಿನ ಸೊಪ್ಪನ್ನು ಔಷಧವಾಗಿ ಅತ್ಯುಪಕಾರಿ ಎಂದು ತಿಳಿದ ಹಿನ್ನೆಲೆಯಲ್ಲಿಯೇ ಅದನ್ನು ವಿವಿಧ ಹಬ್ಬಗಳಲ್ಲಿ ಸೇವನೆಗಾಗಿ ಮತ್ತು ಬಾಹ್ಯ ಬಳಕೆಯಾಗಿ ಉಪಯೋಗಿಸುವುದು ಸಾಮಾನ್ಯವಾಗಿದೆ. ಬೇವು ವಿಷವಾದರೂ ಯುಗಾದಿಯ ಸಂದರ್ಭದಲ್ಲಿ ಅದನ್ನು ಬೆಲ್ಲದ ಜೊತೆಯಾದರೂ ತಿನ್ನಬೇಕು ಎಂದು ರೂಡಿಸಿಕೊಂಡು ಬಂದಿರುದು ಅದರ ಔಷಧಿಗುಣಕ್ಕೆ ಸಾಕ್ಷಿಯಾಗಿದೆ. ಅದರ ಸೇವನೆಯಿಂದ ಮನುಷ್ಯನ ದೇಹದಲ್ಲಿರುವ ರೋಗ ಪ್ರತಿಬಂಧಕ ಶಕ್ತಿ ಹೆಚ್ಚಳವಾಗುತ್ತದೆ.

ಪ್ರಚಲಿತ ಸಂದರ್ಭದಲ್ಲಿ ಚರ್ಮರೋಗಗಳನ್ನು ಮತ್ತು ಇತರ ಪ್ರಮುಖ ಲಕ್ಷಣಗಳನ್ನು ಅವಲಂಬಿಸಿ ವಿವಿಧವಾಗಿ ವಿಭಜನೆ ಮಾಡಿಕೊಂಡು ರೋಗ ನಿದಾನಾನುಸಾರವಾಗಿ ಚಿಕಿತ್ಸೆ ನಡೆಸಲಾಗುತ್ತದೆ. ಪ್ರತಿಯೊಂದು ರೋಗವೂ ರೋಗಾಣುವಿನಿಂದಲೇ ಹುಟ್ಟುತ್ತವೆ. ಆದರೆ ಇದು ಪ್ರಾಚೀನ ವೈದ್ಯಕ್ಕೆ ಹೊಂದಿಕೆಯಾಗದ ಮಾತು. ಆಗಲೇ ಗಮನಿಸಿದಂತೆ ಪ್ರತಿಯೊಂದು ರೋಗಕ್ಕೆ ತ್ರಿದೋಷವೇ ಕಾರಣವೆಂಬುದು ಈ ವೈದ್ಯದ ಪ್ರಧಾನ ಸಿದ್ಧಾಂತ. ಈ ಹಿನ್ನೆಲೆಯಲ್ಲಿ ಶಾಸ್ತ್ರಜ್ಞರು ರೋಗಚಿಕಿತ್ಸೆ ನಿರೂಪಿಸಿದ್ದಾರೆ. ಈ ಕ್ರಮವು ಈ ಕುಷ್ಠರೋಗ ಚಿಕಿತ್ಸೆಯಲ್ಲಿ ಸ್ಪಷ್ಟವಾಗಿಯೇ ಬಿಂಬಿತವಾಗಿದೆ.

ಶಾಸ್ತ್ರಜ್ಞರು ತದ್ದು ಯಿಸಬಿ ಮತ್ತು ತಿಂಡಿಗಳಿಗೂ ಚಿಕಿತ್ಸಾಕ್ರಮಗಳನ್ನು ಹೇಳಿದ್ದಾರೆ. ಇದರಲ್ಲಿ ತದ್ದು ಯಿಸಬಿ, ಕಜ್ಜಿಗಳಿಗೆ "ಖರಿಹೀರಿಯಬೀಜ, ಹುಲಗಲಿಬೀಜಾ, ಗಜಗನಬೀಜಾ, ಪುಂಡಿಬೀಜಾ, ಮತ್ತಲಬೀಜಾ, ವಾವಂಜಿಬೀಜಾ, ಹೇಮುಷ್ಟಬೀಜಾ, ಬೇವಿನ ಬೀಜಾ, ಜೋಳದ ಬೀಜಾ, ಸಜ್ಜಿಬೀಜಾ, ಸಾಸಿವಿಬೀಜಾ, ಈ ಹನ್ನೊಂದು ಆಕಳಮೂತ್ರದಲ್ಲಿ ತೈಲವ ತಗೆದು ಪೂಸಲು ಸರ್ವತದ್ದು, ತುರಿ, ಯಿಸಬಿ, ಖಜ್ಜಿ ತಿಮರು ಮಾಣ್ಣು"[೩೧] ಎಂದಿದೆ. ಹಾಗೂ "ಅರಗು, ನೆಲ್ಲಿಸಟ್ಟು, ಕಕ್ಕೆಕುಡಿ, ಚೊಗಚೆಬೀಜ, ಎಕ್ಕದ ಎಲೆ ಇವನ್ನು ಒಟ್ಟಿಗೆ ಅರೆದು ಹಚ್ಚಿದರೆ ತರ್ದು, ದುಂದುರು ಮಾಣ್ಣು ಅಕ್ಕಿಹೆಡೆಯ ಹಾಲು ಅಥವಾ ಅರಿಸಿನ ಸುಟ್ಟು ಮಾಡಿದ ಬೂದಿಯನ್ನು ಸುಣ್ಣದಲ್ಲಿ ಕಲಸಿ ತೊಡೆಯುವುದು ತರ್ದುರೋಗಕ್ಕೆ ಫಲಕಾರಿ. ಕದಳೀ ಪತ್ರದ ಬೂದಿಯನ್ನಾಗಲಿ, ಉತ್ತರಣೆ ಬೇರಿನ ಬೂದಿಯನ್ನಾಗಲಿ ತೆಗೆದುಕೊಂಡು ಟಂಕಣಖಾರ ಅಥವಾ ಎಳ್ಳೆಣ್ಣೆಯಲ್ಲಿ ಕಲಸಿ ಮೂರು ದಿನ ಇಟ್ಟು ಬಳಿಕ ಅದನ್ನು ಬಳಿದರೆ ಚಿಬ್ಬುವ್ಯಾದಿ ಗುಣಕಾರಿ. ಚೊಗಚೆಬೀಜ, ವಾಕುಜಿಬೀಜ, ಅರಿಸಿನ, ಗಂಧಕ ಇವನ್ನು ಹಸುವಿನ ಮಜ್ಜಿಗೆಯಲ್ಲಿ ಒಂದಾಗಿ ಅರೆದು ಸವರವುದು. ಇದರಿಂದ ಚಿಬ್ಬುರೋಗ ಶಮನ"[೩೨]. ಸಹಜವಾಗಿಯೇ ಮಜ್ಜಿಗೆ ಹಲವು ಬಗೆಯ ರೋಗನಿರೋಧಕ ಶಕ್ತಿಯನ್ನು ಹೊಂದಿರುತ್ತದೆ. ಅನೇಕ ಚರ್ಮರೋಗಗಳಿಗೆ ಮಜ್ಜಿಗೆಯನ್ನು ಉಪಯೋಗಿಸುವುದರಿಂದ ಮೊಗದ ಮೇಲಾಗುವ ಮಡಿಬೊಕ್ಕೆಗಳು

ಹೋಗುತ್ತವೆ ಎಂಬುದನ್ನು ಜನಪದ ವೈದ್ಯವು ಹೇಳುತ್ತದೆ. ಆದ್ದರಿಂದ ಮಜ್ಜಿಗೆಯಿಂದ ಇತರೆ ಮೂಲಿಕೆಗಳನ್ನು ಲೇಪಿಸುವುದು ಪ್ರಯೋಜನಕಾರಿಯಾಗಿದೆ.

**ಬಂಗಿಗೆ :** ಜೀರಿಗೆ, ಬಿಳಿಸಾಸಿವೆ, ಕಾಡ್ಜೀರಿಗೆ, ಕಪ್ಪುಎಳ್ಳು–ಇವುಗಳನ್ನು ಕೂಡಿಸಿ ಆಡಿನ ಹಾಲಿನಲ್ಲಿ ಅರೆದು ಲೇಪಿಸಲು ಮುಖದ ಬಂಗು ಇಂಗುವುದು.

**ಹುಂಣಿಗೆ :** ರಸ ಕರ್ಪೂರ ದುಡ್ಡು ೨ ತೂಕ । ಸೈಂದವ ಲವಣ ದು೨ ತೂಕ, ಬೆಂಣಿಬಾಳಹ ದು೨ ತೂಕ, ಸೊಂನೆಕಾಯಿ ದು೧ ತೂಕ ಇವಂ ಕರೆಮದ್ದುಗುಣಕಿ ರಸದಲ್ಲಿ ೩ ತಾಸು ಅರದು ಬಿಲ್ಲೆಯ ಮಾಡಿ, ವುತ್ರಾಣಿ ಬೂದಿಯಾಗಲಿ, ಉಪ್ಪಾಗಲಿ ಅರದು ಹಾಕಿ, ವಂದು ಸಂಣ ಕುಡಿಕೆಯೊಳಗೆ ಹಾಕಿ, ಮತ್ತು ಯಿದರ ಮೇಲೆ ಪಾವು ವುಪ್ಪು ಹಾಕಿ ಅದರಪ್ಪು ಕುಡಿಕೆಬಾಯಿಗೆ ಬಾಯಿವಂದಿಸಿ ದಬ್ಬಹಾಕಿ, ಮೇಗಣ ಸೋರೆವಳ ಮೈಗೆ ಬಾಳವುತಿಕ್ಕಿ ವುರುಹಲು ರಸಾ ಮೇಲಕ್ಕೆ ತಪಂಗಿಸಿ ಲೇಪಮಾಡಿ ಅರಿವೆಸುತ್ತಿ ಒಲೆ ಮೇಲೆ ಯಿಟ್ಟು ಮೇಗಳ ಗಡಿಗೆಯೊಳಗೆ ದೀಪದಂತೆ ಸಂಣನಾಗಿ ಮೂರು ತಾಸು ವುರಿನೊಂದಗೊಡದೆ ವುರುಹಲು ಆಮೇಲೆ ನಗದಾಗಿ ತಳದ ಮೇಲೆ ವದ್ದೆ ಅರಿವೆಗಳಿಗೆ ಹಾಕಿಕೊಂಡು ದಿನ ಎರಡು ಗುಂಜಿ ತೂಕ ಹಿಪ್ಪಲಿ ಸಮನಾಗಿ ತಿಕ್ಕಿ ಜೇನತುಪ್ಪದ ಸಂಗಾತ ೨೧ ದಿನ ತಿನ್ನಲು ಗುಣವಾದಿತು ಪತ್ಯ॥ ಆಕಳ ಹಾಲ, ತುಪ್ಪ, ಸಕ್ಕರೆ, ಗೋದಿ, ಜೋಳದ ಮುದ್ದೆ ಕಡಬು ೭ ದಿನವಾದ ಮೇಲೆ ವುಪ್ಪುಕಾರ ಹುಳಿವುಂಬೋದು"[೩೩].

ಜೇನಿನಲ್ಲಿ ರೋಗೋತ್ಪಾದಕ ಅಣುಜೀವಿಗಳನ್ನು ನಾಶಗೊಳಿಸುವ ಶಕ್ತಿಯಿದೆಯೆಂದು ಕಂಡುಬಂದಿದೆ. ಜೇನಿನಲ್ಲಿ ರೋಗಾಣುಗಳು ಪ್ರವೇಶಿಸಿದರೆ ಹೆಚ್ಚು ಹೊತ್ತು ಬದುಕಲಾರವೆಂದು ಅವಲೋಕನಗಳಿಂದ ಸಿದ್ಧವಾಗಿದೆ. ಜೇನಿನಲ್ಲಿ ಹಾಕಲ್ಪಟ್ಟ ಟೈಫಾಯ್ಡ್ ಕ್ರಿಮಿಗಳು ೪೮ ಗಂಟೆಗಳಲ್ಲಿ ಮತ್ತು ಪ್ಯಾರಾ ಟೈಫಾಯ್ಡ್ ಕ್ರಿಮಿಗಳು ೨೪ ಗಂಟೆಗಳಲ್ಲಿಯೇ ಸಾಯುವುವೆಂದು ಕಂಡುಬಂದಿದೆ. ಅತಿಸಾರ ಭೇದಿ ರೋಗದ ಕ್ರಿಮಿಗಳು ಜೇನಿನಲ್ಲಿ ೧೦ ಗಂಟೆಗಿಂತ ಹೆಚ್ಚು ಕಾಲ ಬದುಕಲಾರವು. ಗಾಯಗಳು ಬೇಗ ಮಾಯದಿರುವುದಕ್ಕೆ ಅದರಲ್ಲಿ ಇರಬಹುದಾದ ಸೂಕ್ಷ್ಮಕ್ರಿಮಿಗಳು ಕಾರಣವಾಗಿರುವುದುಂಟು. ಅಂತಹ ಗಾಯಗಳಿಗೆ ಜೇನಿನ ಪಟ್ಟಿಹಾಕುವುದು ಆಯುರ್ವೇದ ವೈದ್ಯರಲ್ಲಿ ವಾಡಿಕೆಯಿದೆ. ಇಂದಿಗೂ ಜರ್ಮನಿಯಲ್ಲಿ ವ್ರಣಪಟ್ಟಿಗಳಲ್ಲಿ (ಡ್ರೆಸಿಂಗ್) ಜೇನನ್ನು ಲೇಪಿಸುವರು"[೩೪]. ಆದ್ದರಿಂದ ಮೇಲೆ ಹೇಳಿದ ಎಲ್ಲ ತೆರನಾದ ಕ್ರಿಮಿಕೀಟಗಳಿಂದ ಬರುವ ಚರ್ಮರೋಗಗಳಿಗೆ ವಿವಿಧ ಗಿಡಮೂಲಿಕೆಗಳನ್ನು ಜೇನಿನೊಂದಿಗೆ ಲೇಪಿಸಲು ಸೂಚಿಸಲಾಗಿದೆ. ಜೇನುತುಪ್ಪ ಸೇವಿಸಲು ಮತ್ತು ಲೇಪಿಸಲು ಸಕಲರೋಗ ನಿರೋಧಕ ಶಕ್ತಿಯನ್ನು ಪಡೆದಿದೆ ಎಂದು ಹೇಳಬಹುದು.

ಇನ್ನೂ ಸರ್ವರೋಗಕ್ಕೆ ಒಂದೇ ತೆರನಾದ ಗಿಡಮೂಲಿಕೆ ಔಷಧವನ್ನು ಸೂಚಿಸಿದ್ದು ಕಂಡು ಬರುತ್ತದೆ. ಅದನ್ನು ಈ ಕೆಳಗಿನಂತೆ ಗಮನಿಸಬಹುದು.

**ಸರ್ವರೋಗಕ್ಕೆ :** ಗ೧ ನಿಂಬೆರಸ–ಗ೧ ಭದ್ರಮುಷ್ಟಿ–ಗ೧ ಚಿತ್ರಮೂಲ–ಗ೧ ರೇಣುಕ–ಗ೧ ನಾಗಕೇಸರಿ–ಗ೧ ಯಾಲಕ್ಕಿ–ಗ೧ ಹಿಪ್ಲಿ–ಗ೧ ಅಡವಿಜಾಜಿಕಾಯಿ–ಗ೧ ನೆಲ್ಲೀಚೆಟ್ಟು–ಗ೧ ತಾರೀಕಾಯಿ–ಗ೧ ಸೊಂಠಿ–ಗ೧ ಹಿಪ್ಲಿಬೇರು–ಗ೧ ಮೆಣಸು–ಗ೧ ತಾಮಬ್ರಭಸ್ತೆ ಯಿಷ್ಟನ್ನು ಚೂರ್ಣವಮಾಡಿ ಅದರಲ್ಲಿ ಬೆಲ್ಲವ ಹಾಕಿ ವಂದುದಿವ್ಸ ಅರಿಬೇಕು। ಕಡ್ಲಿಕಾಳ ಪ್ರಮಾಣ ಗುಳಿಗೆ ಮಾಡಿ ಮಜ್ಜಿಗೆಯಲ್ಲಿ ಕೊಳ್ಳಲು ಸಣ್ಣಾಣಿಜಲಗಾರ ಸರ್ಪಕಡದಕ್ಕೆ ಮಾಣ್ಣು। ಮೊಸರಲ್ಲಿ ಕೊಳ್ಳಲು ವಾಯುಗುನ್ನಿಕಷ್ಟಶೂಲಿ ಮಾಣ್ಣು। ಹಾಲಲ್ಲಿ ಕೊಳ್ಳಲು ಕುಷ್ಟರೋಗ ಮಾಣ್ಣು।

ಯಮ್ಮಿ ತುಪ್ಪದಲ್ಲಿ ಕೊಳ್ಳಲು ಸರ್ಪಕಡದಕ್ಕೆ ಮಾಣ್ಣು ಆಕಳ ತುಪ್ಪದಲ್ಲಿ ಅರದು ತಂಣಿರು ಬೆರಸಿ ಕುಡಿಯೆ ವಿಷಮ ಜ್ವರ ಸಂಗ್ರಾಣಿ–ಹೊಟ್ಟೆಶೂಲಿ–ಪಾಂಡುರೋಗ–ಕ್ಷಯಕಷ್ಟ–ಅಪಸ್ಮಾರ–ಸನ್ನಿಪಾತ–ಔರಷ್ಟಿಕ–ದಂಷ್ಟ್ರ–ಹಸ್ತಪಾದರೋಗ ಮಾಣ್ಣು ಬಿಸಿನೀರಲ್ಲಿ ಕೊಳ್ಳಲು ಪಿತ್ತಮಾಣ್ಣು–ಯಂಬಿಲದಲ್ಲಿ ಕೊಳ್ಳಲು ವಾತಮಾಣ್ಣು ಮಜ್ಜಿಗಿಯಲ್ಲಿ ಕೊಳ್ಳಲು ಪುತ್ರಕ್ಕು ಆವಿಷ್ಯ ಹೆಚ್ಚುವದು. ಯಿಗುಳಿಗೆಯಲ್ಲಿ ರೋಗಗಳಿಗೆ ರಾಳಸಿಯಂತೆ ಸರ್ಪಗೆ ಗರುಡನಂತೆ"[೩೫]. ಇಲ್ಲಿ ಹೇಳಿದ ಔಷಧಕ್ಕೆ ಬಳಸಿದ ಮೂಲಿಕೆಗಳು ಒಂದೆಯಾಗಿದ್ದು ಹಾಲು, ಯಮ್ಮಿತುಪ್ಪ, ಮಜ್ಜಿಗೆ, ಈ ವಿವಿಧ ವಸ್ತುಗಳನ್ನು ಮಾತ್ರ ಬಳಸುವುದರಿಂದ ಬೇರೆ ಬೇರೆ ವ್ಯಾದಿಗಳಿಗೆ ಔಷಧವಾಗುತ್ತದೆ. ಕುಷ್ಟರೋಗದಂತ ಬಯಾನಕ ರೋಗಕ್ಕೆ ಸಾಮಾನ್ಯ ಔಷಧವೇ ಬರುತ್ತದೆ ಎಂಬುದು ಈ ನಮ್ಮ ದೇಶಿ ವೈದ್ಯಪದ್ಧತಿಯಲ್ಲಿ ವಿವಿಧ ಗಿಡಮೂಲಿಕೆ ಬಳಸುವುದುರಿಂದ ಯಾವುದಾದರೊಂದು ಮೂಲಿಕೆ ವಿವಿಧ ರೋಗಗಳನ್ನು ಗುಣಪಡಿಸುವ ಔಷಧಿ ಅಂಶಗಳನ್ನು ಹೊಂದಿರುತ್ತವೆ. ಆದ್ದರಿಂದ ಈ ಕ್ರಮಗಳನ್ನು ಕೆಲ ಸಂದರ್ಭದಲ್ಲಿ ನಿರ್ದಿಷ್ಟವಾಗಿ ಬಳಸದೆ ವಿವಿಧ ರೋಗಗಳಿಗೂ ಒಂದೇ ಔಷಧಿ ಬಳಸುವ ಕ್ರಮ ಕಂಡು ಬರುತ್ತದೆ. ಶಾಸ್ತ್ರಜ್ಞರು ಇಲ್ಲಿ ಔಷಧಗಳ ಪ್ರಮಾಣ ಹೇಳಿದ್ದು ಧನಾತ್ಮಕ ಅಂಶ. ಆದರೆ ದಿನಕ್ಕೆ ಎಷ್ಟು ಸಾರೆ ತಗೆದುಕೊಳ್ಳಬೇಕೆಂಬುದನ್ನು ಹೇಳಿರುವುದಿಲ್ಲ.

ಇದುವರೆಗೂ ವಿಷದಪಡಿದ ವಿವಿಧ ಸಾಮಾನ್ಯ ರೋಗಗಳ ಲಕ್ಷಣ ಮತ್ತು ಚಿಕಿತ್ಸಾ ಕ್ರಮಗಳಲ್ಲದೆ, ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಮೇಹರೋಗ, ಗುಲ್ಮರೋಗ, ಪಾಂಡುರೋಗ, ಶೋಭೆರೋಗ, ಶೀತಪಿತ್ತ, ಆಮ್ಲರೋಗ, ಕ್ರಿಮಿರೋಗ, ಉನ್ಮಾದ, ಭೂತರೋಗ, ಕೃಶರೋಗ, ಕಂಠರೋಗ, ಗಂಡಮಾಲೆ, ಮೂತ್ರರೋಗ, ತಲೆರೋಗ, ಕಾಮಾಲೆರೋಗ ಇತ್ಯಾದಿ ನೂರಾರು ರೋಗಗಳ ಕಾರಣ, ಲಕ್ಷಣ, ಚಿಕಿತ್ಸಾ ವಿಧಿವಿಧಾನಗಳನ್ನು ವಿವಿಧ ಗ್ರಂಥಗಳ ಹಸ್ತಪ್ರತಿಗಳಲ್ಲಿ ಅಭಿವ್ಯಕ್ತಗೊಂಡಿವೆ. ಈ ಮೇಲೆ ಉದಾಹರಿಸಿದ ರೋಗಗಳು ಸಾಮಾನ್ಯವಾಗಿ ಪುರುಷರು, ಸ್ತ್ರೀಯರು, ಮಕ್ಕಳು, ವಯಸ್ಕರು, ಮುದುಕರಿಗೆ ಬರುವ ರೋಗಗಳಾಗಿವೆ. ಇವುಗಳಿಗೆ ಆಯಾ ಮಯಸ್ಸು ಮತ್ತು ದೈಹಿಕ ಸಾಮರ್ಥ್ಯಕ್ಕೆ ತಕ್ಕಂತೆ ಚಿಕಿತ್ಸೆಯಾಗಿ ಔಷಧಗಳನ್ನು ನೀಡುವ ಕ್ರಮವಿರುತ್ತದೆ.

ಹೀಗೆ ಮನುಷ್ಯರಿಗೆ ತಗಲುವ ಸಾಮಾನ್ಯ ರೋಗಗಳಿಗೆ ಗಿಡಮೂಲಿಕೆಗಳಿಂದ ಔಷಧಗಳನ್ನು ತಯಾರಿಸಿ ಕ್ರಮಾನುಗತವಾಗಿ ಬಳಸುತ್ತಿದ್ದರೆಂಬುದಕ್ಕೆ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ನೂರಾರು ಪ್ರಯೋಗಗಳಿವೆ. ಈ ಪ್ರಯೋಗಗಳನ್ನು ಇಂದಿನ ಆಧುನಿಕ ವೈದ್ಯಪದ್ಧತಿಯೊಡನೆ ತುಲನೆ ಮಾಡಿ ನೋಡಿದಾಗ ಪರಿಣಾಮವೇನಾಗುತ್ತದೆಂಬುದನ್ನು ಕಂಡುಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಎಲ್ಲ ವೈದ್ಯಶಾಸ್ತ್ರ ಹಸ್ತಪ್ರತಿಗಳನ್ನು ಪ್ರಯೋಗಾತ್ಮಕವಾಗಿ ಇನ್ನೂ ಹೆಚ್ಚು ಅಧ್ಯಯನಕ್ಕೊಳಪಡಿಸಬೇಕಾಗಿದೆ.

### ೪.೧.೧.೨. ಪುರುಷವೈದ್ಯ

ಹೆಸರೇ ಸೂಚಿಸುವಂತೆ ಪುರುಷರಿಗೆ ಬರುವ ಕೆಲವು ನಿರ್ದಿಷ್ಟ ಕಾಯಲೆಗಳು ಕಂಡುಬರುತ್ತವೆ. ಅವುಗಳನ್ನು ಪ್ರತ್ಯೇಕವಾಗಿ ವಿವರಿಸಿದ ಗ್ರಂಥಗಳು ರಚನೆಯಾಗಿಲ್ಲದಿದ್ದರೂ ಕನ್ನಡದ ಎಲ್ಲಾ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಉಕ್ತವಾಗಿರುವುದು ಕಂಡು ಬರುತ್ತವೆ. ಅವುಗಳಿಗೆ ಚಿಕಿತ್ಸೋಪಾಯಗಳನ್ನು ಶಾಸ್ತ್ರಜ್ಞರು ಈ ಕೆಳಗಿನಂತೆ ಸೂಚಿಸಿದ್ದಾರೆ, ಅವುಗಳೆಂದರೆ;

**ಗಂಡಸ್ತನ ಇಲ್ಲದವರಿಗೆ** : ಮೇಲದಿಕ್ಕಿಯಗಡ್ಡಿ ಗದ್ಯಾಣ, ಬಿಳಿಗುಲಗಂಜಿ ಬೇರು ಗದ್ಯಾಣ, ಸುಂಠಿಯಬೇರು ಗದ್ಯಾಣ, ಇವನ್ನು ಗಡಿಗೆಯಲ್ಲಿ ಕರಿ ಹಾಡಿನ ಹಾಲು ಸೇರಿಸಿ ಹಾಕಿ ನೆನೆಯಿಕ್ಕಿ ಉದಯದಲ್ಲಿ ಕುಡಿಯೇ ಗಂಡಸ್ತನ ಬರುವುದು. ಇಲ್ಲವೆ ಬಿಳೆ ಉಳ್ಳಾಗಡ್ಡಿರಸ ಪಾವು, ಹಿಪ್ಪಲಿ ಚೂರ್ಣ ಗ೧, ಆಕಳ ತುಪ್ಪ ಗ೨, ಮಧು ಗ೪, ಇವಂ ಕೂಡಿ ೨೧ ದಿನ ಕೊಂಡರೆ ಗಂಡಸುತನ ಕೆಟ್ಟುದಕ್ಕೆ ವೊಳ್ಳಿತ್ತಾಹುದು"[೩೬].

**ಧಾತುಪುಷ್ಟಿಗೆ** : ಹಿರೇಮದ್ದಿನಗಡ್ಡಿ ೧ಕೆಜಿ. ಜೇನುತುಪ್ಪ ೫ಸೇರು, ಖಾರೀಕ ೩ಸೇರು, ಜಾಯಿಫಳ ಶೇ, ಪತ್ರಿ ಪಾವು, ಯಾಲಕ್ಕಿ ೯ಪೈಸೆ ತೂಕ, ಹಿಪ್ಪಲಿ ೯ಪೈಸೆ ತೂಕ, ಪೋಡಿ ೯ಪೈಸೆ ತೂಕ, ಬಡೇಸೊಪ್ಪು ೩ಪೈಸೆ ತೂಕ ತೊಂದಲ ಚಿನ್ನಿ ೯ಪೈಸೆ ತೂಕ, ಅಜಿವಾನ ೩ಪೈಸೆ ತೂಕ, ಅಂಟು ೯ಪೈಸೆ ತೂಕ, ತೊಂದಾಲಚಿನ್ನಿ ೯ಪೈಸೆ ತೂಕ, ಯಿಷ್ಟನ್ನು ಕೂಡಿಸಿ ಗುಳಿಗೆ ಅಥವಾ ಚೂರ್ಣವ ಮಾಡಿ ನಿತ್ಯ ತುಪ್ಪದ ಸಂಗಡ ಸೇರಿಸಲು ಧಾತುಪುಷ್ಟಿ ಆಗುವದು ॥ಪಥ್ಯ॥ ಮಧುರಾನ್ನ ಎಂಬುವದು, ನಂಜಿನ ಪದಾರ್ಥ ಬಿಡುವುದು.

**ಪುರುಷತ್ವ ಹೋದುದಕ್ಕೆ** : ಕುರಟಗಿಬೇರಿನ ಪುಡಿ ೧ಸೇರಿಗೆ ಹಾಕುವ ಜಿನಸು ಜಾಯಿಕಾಯಿ ೩ಪೈಸೆ ತೂಕ, ಪತ್ರಿ ೩ಪೈಸೆ ತೂಕ, ಗೋಟ ಅಡಿಕೆ ೩ಪೈಸೆ ತೂಕ ಸಮಾನ ವಂದೊಂದು ತೊಲಿ ಪುಡಿ ಮಾಡಿ ಹಾಕಿ ಹಳೆ ಬೆಲ್ಲದಲ್ಲಿ ಕಲಸಿ ಗುಳಿಗೆಯ ಮಾಡಿ ಮೂರುದಿನ ಅಹೋರಾತ್ರಿ ತಕ್ಕೊಬೇಕು ಪುರುಷತ್ವ ಬಂದೀತು. ಹುಳಿವರ್ಜ"[೩೭].

ಇಲ್ಲಿ ಪುರುಷರಿಗೆ ಮಾತ್ರ ಕೊರತೆ ಇರುವ ಗಂಡಸುತನ ಅಥವಾ ಪುರುಷತ್ವ ಇದು ದಂಪತಿಗಳಲ್ಲಿ ಮಕ್ಕಳ ಸಂತಾನಪ್ರಾಪ್ತಿ ಆಗದಿದ್ದ ಸಂದರ್ಭದಲ್ಲಿ ಅದು ಹೆಣ್ಣಿನ ದೋಷವೆಂದು ಹೇಳುವ ನಂಬಿಕೆಗಳು ಹೆಚ್ಚು. ಆದರೆ ಆಧುನಿಕ ಸಂದರ್ಭದಲ್ಲಿ ಕೃತಕ ಅಂಡಾಣುಗಳನ್ನು ಸ್ತ್ರೀಯರ ಗರ್ಭಕ್ಕೆ ಹಾಕಿ ಸಂತಾನ ಬೆಳೆಸಲಾಗುತ್ತದೆ. ಅಂದರೆ ಇಲ್ಲಿ ತಿಳಿಯುವದೇನೆಂದರೆ ಮಕ್ಕಳಾಗದಿರುವುದಕ್ಕೆ ಪುರುಷನೂ ಕಾರಣನಾಗುತ್ತಾನೆ ಎಂಬುದು. ಪ್ರಾಚೀನ ಕಾಲದಲ್ಲೆ ಈ ದೋಷವನ್ನು ಗುರುತಿಸಿ ಹೋಗಲಾಡಿಸಲು ಚಿಕಿತ್ಸಾ ಕ್ರಮಗಳನ್ನು ಗುರುತಿಸಿ ಮಕ್ಕಳನ್ನು ಪಡೆಯಲು ಮಾರ್ಗಗಳನ್ನು ಕಂಡುಕೊಂಡಿದ್ದು. ಅತ್ಯುಪಯುಕ್ತವಾದ ಸಂಗತಿ. ಇಂದು ಮಾಡುವ ಕೃತಕ ಗರ್ಭಧಾರಣೆಗಿಂತ ಸರಿಯಾದ ದೋಷವನ್ನು ಗುರುತಿಸಿ ಆ ದೋಷವು ಪುರುಷನಲ್ಲಿದ್ದರೆ ನಮ್ಮ ದೇಶಿ ವೈದ್ಯದಲ್ಲಿ ಹೇಳಿದ ಮೇಲಿನ ಔಷಧೋಪಚಾರಗಳನ್ನು ಪ್ರಯೋಗಕ್ಕೆ ಒಳಪಡಿಸಿ ಅಭಿವೃದ್ಧಿಪಡಿಸುವುದು ಅತ್ಯವಶ್ಯ.

**೪.೧.೧.೩. ಸ್ತ್ರೀವೈದ್ಯ**

ಆಧುನಿಕ ವೈದ್ಯಪದ್ಧತಿಯಲ್ಲಿ ಸ್ತ್ರೀಯರಿಗಾಗಿಯೇ ಪ್ರತ್ಯೇಕ ಆಸ್ಪತ್ರೆಗಳಿರುವುದನ್ನು ಕಾಣುತ್ತೇವೆ. ಅಂದರೆ ಸ್ತ್ರೀಯರಿಗೆ ಬರುವಂತ ಕೆಲವು ವಿಶಿಷ್ಟ ಕಾಯಿಲೆ ತೊಂದರೆಗಳಿವೆ. ಅಂಥವುಗಳಿಗೆ ಚಿಕಿತ್ಸೋಪಾಯ ನೀಡಲು ಪ್ರಾಚೀನ ಕಾಲದಲ್ಲೇ ಪ್ರತ್ಯೇಕವಾದ ವೈದ್ಯರು ಇರುತ್ತಿದ್ದರು ಎಂಬುದು ತಿಳಿಯುತ್ತದೆ. ಸ್ತ್ರೀಯರಿಗೆ ಸಂಬಂಧಿಸಿದಂಥ ಸ್ತ್ರೀವೈದ್ಯ ಗ್ರಂಥವನ್ನು ತಿಮ್ಮಣ್ಣನೆಂಬ ಶಾಸ್ತ್ರಜ್ಞ ಬರೆದಿದ್ದಾನೆ. ಆದರೆ ಈ ಕುರಿತ ಹಸ್ತಪ್ರತಿಗಳು ಲಭ್ಯವಿರುವುದಿಲ್ಲ. ಆದರೆ ಚಾವುಂಡರಾಯನ ಲೋಕೋಪಕಾರ ವೀರರಾಜೇಂದ್ರನ ಸಕಲವೈದ್ಯಸಂಹಿತ ಸಾರಾರ್ಣವ, ಕಲ್ಯಾಣಕಾರಕ ಹಾಗೂ ಇನ್ನಿತರ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಗರ್ಭಿಣಿಗೆ ಸಂಬಂಧಿಸಿದ, ಮುಟ್ಟಿನ ತೊಂದರೆ, ಕೆಂಪು

ಸೆರಗು, ಬಿಳಿಸೆರಗು, ಸ್ತನರೋಗ, ಬಂಜೆರೋಗ, ಗರ್ಭಪಾತ ಎದೆಹಾಲು ವೃದ್ಧಿ ಇತ್ಯಾದಿ ತೊಂದರೆಗಳಿಗೆ ಪ್ರತ್ಯೇಕವಾದ ಚಿಕಿತ್ಸಾ ಕ್ರಮಗಳು ಹಸ್ತಪ್ರತಿಗಳಲ್ಲಿ ಕಂಡುಬರುತ್ತವೆ. ಸ್ತ್ರೀಯರಿಗೆ ಬರುವ ಕೆಲವು ರೋಗಗಳ ಲಕ್ಷಣ ಚಿಕಿತ್ಸಾ ವಿಧಾನಗಳನ್ನು ಈ ಕೆಳಗಿನಂತೆ ವಿಷದಪಡಿಸಲಾಗಿದೆ;

**ಗರ್ಭಶೂಲೆ** : ಹುರಳಿ, ಇಂಗು, ಕ್ಷಾರದ್ರವ್ಯ, ಅತಿಖಾರ, ಅತಿಹುಳಿ ಮುಂತಾದ ದುಷ್ಟಾಹಾರ ಸೇವನೆಯಿಂದ ಗರ್ಭಿಣಿಯರಿಗೆ ಅಕಾಲದಲ್ಲಿ ವೇದನೆಯುಂಟಾಗುವುದು. ಪಲ್ಲಕ್ಕಿ, ಕುದುರೆ, ವಾಹನ, ಬಂಡಿಗಳಲ್ಲಿ ಬರುವಾಗ ಮೈಕುಲಿಕಿಸಿಯಾದರೂ ಆ ಕಾಲದಲ್ಲಿ ಗರ್ಭಿಣಿಯರಿಗೆ ಶೂಲೆ ಉಂಟಾಗುವುದು. ಆಗ ಗರ್ಭಿಣಿಯರಿಗೆ ತಿಂಗಳು ತಿಂಗಳು ತಪ್ಪದೆ ರಕ್ತ ಕಂಡರೆ ಅಥವಾ ಒಂದೇ ವೇಳೆ ರಕ್ತ ಕಂಡರು ವೇದನೆ ಉಂಟಾಗುತ್ತದೆ. ಅದಕ್ಕೆ ಚಿಕಿತ್ಸೆ ಪಡೆಯುವುದು ಅತ್ಯವಶ್ಯ. ಶಾಸ್ತ್ರಜ್ಞರು ಕನ್ನಡ ಹಸ್ತಪ್ರತಿಗಳಲ್ಲಿ ಗರ್ಭಶೂಲಿಗೆ ಸಂಬಂಧಿಸಿದಂತೆ ಮೊದಲ ತಿಂಗಳಿಂದ ಪತ್ತನೇ ತಿಂಗಳವರೆಗೆ ಉಂಟಾಗುವ ಶೂಲೆಗೆ ಚಿಕಿತ್ಸೋಪಾಗಳನ್ನು ಕ್ರಮವಾಗಿ ವಿವರಿಸಿದ್ದಾರೆ.

ಅವರು ಹೇಳಿದ ಚಿಕಿತ್ಸಾ ಕ್ರಮಗಳು ಅತ್ಯಂತ ಸರಳವಾಗಿ ದೊರಕುವ ಮೂಲಿಕೆಗಳು. ಇವುಗಳನ್ನು ಪ್ರತಿಯೊಬ್ಬ ಗರ್ಭಿಣಿ ಸ್ತ್ರೀಯರು ಸೇವಿಸಿದರೆ ಒದಗುವ ತೊಂದರೆಗಳು ಹೋಗಿ ಸಹಜವಾದ ಗರ್ಭಧಾರಣೆಯಾಗುತ್ತದೆ. ಈ ತೆರನಾದ ಚಿಕಿತ್ಸಾ ಕ್ರಮಗಳನ್ನು ಇಂದು ಯಾವ ಚಿಕಿತ್ಸಾ ವಿಧಾನದಲ್ಲಿಯೂ ಹೇಳುವುದಿಲ್ಲ. ಇಂಥ ಕ್ರಮಬದ್ಧ ನಿಯಮಗಳನ್ನು ನಮ್ಮ ಪ್ರಾಚೀನರು ಹೇಳಿರುವುದು ಅತ್ಯಂತ ಮಹತ್ವದ ಅಂಶವೆಂದು ಹೇಳಬಹುದು. ಅದನ್ನು ಇಂದು ಸಹ ಪರಿಪಾಲಿಸಬಹುದಾಗಿದೆ.

**ಮಾಸು ಬೀಳುವುದಕ್ಕೆ** : ಕಳ್ಳನ ಚಾರಿಯ ಬೇರು ಸೊಪ್ಪುಗಳ ಕಹಿ ಎಣ್ಣೆಯಲ್ಲಿ ಅರದು ಕುಡಿಯ ಕೊಡಲು ಹೊಟ್ಟೆಯೊಳಗೆ ಹೊಕ್ಕ ತತ್‌ಕ್ಷಣವೇ ಮಾಸು ಬೀಳುವುದು. ಮೆಣಸಿನ ಬೇರನಾದರೂ, ಹಾವುಮೆಕ್ಕೆಯ ಬೇರನಾದರೂ ನಿರಲ್ಲಿ ಅರೆದು ಕುಡಿಯ ಕೊಡಲು ಆ ಕ್ಷಣದಲ್ಲಿಯೇ ಮಾಸು ಬೀಳುವುದು.

**ಗರ್ಭಿಣಿಯರ ಯೋನಿ ಶೂಲೆಗೆ** : ಎಳ್ಳಿನ ಕಷಾಯವನು ಕುಡಿಯ ಕೊಡಿಸಲು ಗರ್ಭಿಣಿಯರ ಯೋನಿ ಶೂಲೆ ನಾಶವಾಹುದು. ಈ ಕಷಾಯದಿಂದ ಗರ್ಭಿಣಿಯರ ರಕ್ತಶೂಲೆ, ರಕ್ತಗುಲ್ಮ, ಮೂತ್ರಕೃಛ, ಪ್ರಮೇಹ ಇವಿಷ್ಟು ಪರಿಹಾರವಹವು.

**ಭಗದುರ್ಗಂಧಹರಣಕ್ಕೆ** : ಪಸುವಿನ ಪೊಸತುಪ್ಪಂ, ಜಾಜಿಯ ಪೂ, ಅತ್ತಿ, ಆಲ. ಅರಳಿ, ಬಸಿರಿ, ಗೋಣಿ ಈ ಮರಂಗಳ ಎಳೆಯ ತಳಿರ್, ಯಷ್ಟಿಮಧುಕಂ ಇವಂ ಬಿಸುನೀರಲ್ಲಿ ಅರೆದು ಪೂಸಲ್ ಸ್ತ್ರೀಯರ ಯೋನಿಯ ದುರ್ಗಂಧಂ ಮಾಣ್ಬುದು.

ಶಾಸ್ತ್ರಜ್ಞರು ಹೇಳಿದ ಮೇಲಿನ ಚಿಕಿತ್ಸಾ ಕ್ರಮಗಳು ಅತ್ಯುಪಯುಕ್ತವಾದವು. ಸ್ತ್ರೀರೋಗಗಳಲ್ಲಿ ಈ ಮೇಲಿನ ರೋಗಗಳಿಗೆ ಆಯುರ್ವೇದ ಗ್ರಂಥಗಳಲ್ಲಿ ಈ ಬಗೆಯ ಔಷಧೋಪಚಾರಕ್ರಮ ಗಮನಾರ್ಹವಾಗಿ ಉಕ್ತವಾಗಿರುವುದರಿಂದ ಈ ಅಂಶಗಳನ್ನು ಸಂಶಯ ದೃಷ್ಟಿಯಿಂದ ನೋಡಬಾರದು. ಇಲ್ಲಿ ಹೆಳಿದ ಚಿಕಿತ್ಸಾ ಔಷಧಗಳು ಅತ್ಯಂತ ಪರಿಣಾಮಕಾರಿಯಾದವುಗಳಾಗಿವೆ.

**ಗರ್ಭಿಣಿಯರ ನಂಜುದೋಷಕ್ಕೆ** : ಸೊಗದೆಬೇರು, ಶ್ವೇತಕುಂಡಲಿಮುಲ, ಕೆಂಪು ಮಲ್ಲಿಗೆಬೇರು, ಉತ್ತರಣಿಬೇರು, ಟೀಎಲೆಯಬೇರು, ದೊಡ್ಡಕೊಡಶೆಬೇರು, ಲೋಳಿಸರದಬೇರು, ತಂಡುಲಬೇರು,

ಅಂಟುಗೊಬ್ಬಳಿಬೇರು ಇವೆಲ್ಲಾ ಸಮಭಾಗ ಚೂರ್ಣಮಾಡಿ ಬಿಸಿನೀರಿನಲ್ಲಿ ಸೇವಿಸಲು ನಂಜುದೋಷ ಮಾಣ್ಣುಂ"[೩೮]. ಸ್ತ್ರೀಯರಿಗೆ ಪ್ರತಿತಿಂಗಳ ಆಗುವ ಮುಟ್ಟುದೋಷ ಹೆರಿಗೆ ಸಂದರ್ಭದಲ್ಲಿ ನಂಜು ಸಂಭವಿಸುವುದು ಸಾಮಾನ್ಯ. ಅದಕ್ಕಾಗಿ ಇಂದು ಆಧುನಿಕ ವೈದ್ಯಪದ್ಧತಿಯಲ್ಲಿ ಪೂರ್ವಭಾವಿಯಾಗಿಯೇ ಟಿ.ಟಿ.ಚುಚ್ಚುಮದ್ದನ್ನು ಹಾಕುತ್ತಾರೆ. ಅದರಂತೆ ಪ್ರಾಚೀನ ಕಾಲದಲ್ಲೆ ನಮ್ಮ ಶಾಸ್ತ್ರಜ್ಞರು ಈ ಭಯಾನಕ ರೋಗಕ್ಕೆ ಚಿಕಿತ್ಸಾ ಕ್ರಮಗಳನ್ನು ಹೇಳಿರುವುದು ಅತ್ಯುಪಯುಕ್ತವಾದುದು.

**ಸ್ತನವೃದ್ಧಿಗೆ** : ಅರಿಸಿನ, ಮುಟ್ಟಿದರೆ ಮುನಿಸೊಪ್ಪು, ಕಳವಿಗೆ ಬೇರು, ಬಜೆ, ಗಂಧಕ, ಸುಗಂಧಿ ಈ ಮೂಲಿಕೆಗಳಿಗೆ ಎಳ್ಳೆಣ್ಣೆ, ತುಪ್ಪ, ನೀರು ಸೇರಿಸಿಕೊಂಡು ಬೇಯಿಸಿ ಅದರಿಂದ ನಸ್ಯ ಮಾಡಿದರೆ ಸ್ತ್ರೀಯರಿಗೆ ಸ್ತನವೃದ್ಧಿ ಆಗುವವು". ಎಂದು ಚಾವುಂಡರಾಯ ಹೇಳಿರುವನು. ಆದರೆ ಹೆಣ್ಣುಮಕ್ಕಳು ಯೌವ್ವನಕ್ಕೆ ಬಂದಾಗ ಅವರಲ್ಲಿ ದೈಹಿಕ ಬದಲಾವಣೆಗಳಾಗುವುದು ಪ್ರಕೃತಿ ನಿಯಮ. ಆ ಸಂದರ್ಭದಲ್ಲಿ ಕೆಲವರಲ್ಲಿ ಕುಚಗಳು ಸಹಜವಾಗಿ ವೃದ್ಧಿಯಾಗದೇ ಇರಬಹುದು ಇದಕ್ಕೆ ಅನುವಂಶಿಕ ದೋಷವಿರುವಂತೆಯೇ ಅವರವರ ದೇಹ ಪ್ರಕೃತಿ ಲಕ್ಷಣಗಳೂ ಕಾರಣವಾಗಿದ್ದಿರಲೂಬಹುದು. ಆದ್ದರಿಂದ ಚಾವುಂಡರಾಯ ಹೇಳಿದ ಸ್ತನವೃದ್ಧಿ ಔಷಧ ಕ್ರಮದ ಸತ್ಯಾಸತ್ಯತೆಯನ್ನು ವೈದ್ಯಕೀಯ ಸಂಶೋಧನೆ ನೀರ್ಧರಿಸಿ ಹೇಳಬೇಕು.

**ಮೈಯ್ನೆರೆವುದಕ್ಕೆ** : "ದತ್ತುರದ ಕಾಯಿ, ಸೊರೆಬೀಜ, ಕಬ್ಬತ್ತಿ, ಆನೆ ದಂತ, ಹಿಪ್ಪಲಿ ಇವನ್ನು ಒಂದಾಗಿ ಅರೆದು ಹಾಲಿನಲ್ಲಿ ಕುದಿಸಿ, ತಂಪಾದ ಬಳಿಕ ಅದನ್ನು ಯೋನಿಯಲ್ಲಿಟ್ಟರೆ ಕನ್ಯೆ ಮೈಯ್ನೆರೆವಳು. ಇಲ್ಲವೆ ಗುರಗಂಜಿ ಸೊಪ್ಪು, ಎಳ್ಳು, ಬೆಲ್ಲ ಇವನ್ನರೆದು ಮೆಲ್ಲುವುದು. ಇಲ್ಲವೆ ಜಾಜಿಮೊಗ್ಗು, ಎಳ್ಳು, ಬೆಲ್ಲ ಇವನ್ನರೆದು ತಿನ್ನುವುದರಿಂದಲೂ ವರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಕುಂ"[೩೯] ಎಂದು ಹೇಳಿದೆ. ಕನ್ಯೆ ಋತುಮತಿಯಾಗುವುದು ಸಾಮಾನ್ಯವಾಗಿ ೧೨-೧೬ ವರ್ಷದ ಒಳಗೆ. ಈ ಹಂತದಲ್ಲಿ ಪುಷ್ಪವತಿಯಾಗದಿದ್ದರೆ, ಇಂದಿನ ವೈದ್ಯರು ಪೌಷ್ಟಿಕ ಆಹಾರದ ಕೊರತೆ ಮತ್ತು ಯೋನಿ ಸಮಸ್ಯೆ ಎಂದು ಚಿಕಿತ್ಸೆ ನೀಡುತ್ತಾರೆ. ಈ ಕ್ರಮವನ್ನು ಚಾವುಂಡರಾಯ ಅಂದೇ ಹೇಳಿರುವುದು ಅತ್ಯಂತ ಮಹತ್ವದ ಸಂಗತಿ. ಏಕೆಂದರೆ ಕನ್ಯೆ ಯಾವುದೇ ಸಮಸ್ಯೆಯಿಂದ ಆ ಹಂತದಲ್ಲಿ ಪುಷ್ಪವತಿಯಾಗದಿದ್ದರೆ ಸಾಮಾಜಿಕ ನಿಂದನೆಗೆ ಒಳಗಾಗಿ ಅನಾಹುತಗಳು ಸಂಭವಿಸುವ ಸಂದರ್ಭಗಳುಂಟು.

ಚಾವುಂಡರಾಯ ಸ್ತ್ರೀಯರು ಬಸುರಿಯರಾಗದಿರುವುದಕ್ಕೆ ಹೇಳಿದ ಔಷಧ ತುಂಬ ಸ್ವಾರಸ್ಯಕರವಾಗಿದೆ. ಈ ಪದ್ಯಗಳು ಹೀಗೆ ಕಟ್ಟಿಕೊಡುತ್ತವೆ.

ಫಲಮನಪೇಕ್ಷಿಸದಿರ್ದೊಡೆ।
ಫಲಾಶತರಬೀಜಚೂರ್ಣದೊಳ್ ಮಧುಘೃತಮಂ॥
ಕಲಸಿ ಬಟುಕ್ಕದನೆ ರಜ।
ಸ್ವಲೆಯಾದವಳ ಭಗದೊಳಿಟ್ಟೊಡಾಗದು ಗರ್ಭಂ (೯-೧೭೯)

ಸಮನಿಸೆ ಪುಷ್ಯಾರ್ಕಂ ಕನ।
ಕಮೂಲಮಂ ಕೊಂಡು ಕಟ್ಟಿಕಟಿಯೊಳ್ ಪುರುಷಂ॥
ರಮಿಯಿಸಿದಂದಾಕೆಗೆ ಗ।
ರ್ಭಮಾಗದೇನೆಂದು ಪೇಟ್ವೆನಿದ ಋನ್ನತಿಯಂ (೯-೧೮೦)"[೪೦]

ಮುತ್ತದ ಬೀಜದ ಚೂರ್ಣಮಂ ತುಪ್ಪದಲ್ಲಿ ಕೂಡಿ ಕಲಸಿ ಅದಂ ರಜಸ್ವಲೆಯಾದಾಗಳ್ ಅವಳ ಯೋನಿಯೊಳಗಿರಿಸಿದೊಡೆ ಗರ್ಭವಾಗದು. ಆದಿತ್ಯವಾರಂ ಪುಷ್ಯ ನಕ್ಷತ್ರಂ ಕೂಡಿದಲ್ಲಿ ಪುರುಷಂ ಮದ್ದುಗುಣಿಕೆಯ ಬೇರಂ ತಂದು ಉಡಿಯಲ್ಲಿ ಕಟ್ಟಿಕೊಂಡು ಸ್ತ್ರೀಯರಂ [ರಮಿಸೆ] ಸಂಯೋಗಂ ಮಾಡಲು ಗರ್ಭಮಾಗದು". ಇದು ಈ ಪದ್ಯಗಳ ಟೀಕಾರ್ಥ. ಇಲ್ಲಿ 'ಫಲಮನಪೇಕ್ಷಿಸದಿರ್ದೊಡೆ' ಎಂಬ ಮಾತು ಗಮನಾರ್ಹ. ಇಂದು ಸಂತಾನ ನಿಯಂತ್ರಣಕ್ಕೆ ಹಲವು ಬಗೆಯ ಸಾಧನಗಳನ್ನು ಬಳಸುತ್ತಾರೆ. ಆದರೂ ಅವುಗಳ ಬಳಕೆ ವಿಷಯದಲ್ಲಿ ದಂಪತಿಗಳ ಸ್ವಯಂ ನಿರ್ಧಾರವೇ ಮುಖ್ಯವಾದದ್ದು. ಸಂತಾನಾಪೇಕ್ಷೆ ಇಲ್ಲದವರು ತಮ್ಮ ಸಂಸಾರವನ್ನು ಚಿಕ್ಕ ಕುಟುಂಬ ಯೋಜನೆಗೆ ಒಳಪಡಿಸಿಕೊಳ್ಳಬಹುದು. ಅಂದರೆ ಅತಿಹೆಚ್ಚು ಮಕ್ಕಳು ಇಲ್ಲವೇ ಮಕ್ಕಳು ಬೇಡವೇ ಬೇಡ ಎಂಬ ನಿರ್ಧಾರವೇ ಕುಟುಂಬ ಯೋಜನೆಯ ಯಶಸ್ಸಿಗೆ ಸಹಕಾರಿ. ಈ ದಿಶೆಯಲ್ಲಿ ಚಾವುಂಡರಾಯನ ಉಕ್ತಿ ತುಂಬ ಅರ್ಥಪೂರ್ಣವಾಗಿದೆ. ಮಕ್ಕಳು ಬೇಡವೆನ್ನುವವರು ಗರ್ಭನಿರೋಧಕಗಳನ್ನು ಅಳವಡಿಸಿಕೊಂಡು ಸಂಭೋಗಭಿಲಾಷೆ ಹೊಂದುವುದು ಅತ್ಯಗತ್ಯ. ಅದಕ್ಕೆ ಚಾವುಂಡರಾಯ ಸೂಚಿಸುವ ವಿಧಾನ-ಮುತ್ತುಗದ ಪುಡಿಯನ್ನು ಜೇನುತುಪ್ಪದೊಡನೆ ಕಲಸಿ ಯೋನಿಯೊಳಗೆ ಇಟ್ಟರೆ ಗರ್ಭೋತ್ಪತ್ತಿಯಾಗುವುದಿಲ್ಲ ಎನ್ನುವುದು. ಬಾಹ್ಯವಾಗಿ ಮಕ್ಕಳಾಗದಂತೆ ಉಪಯೋಗಿಸುವ ಈ ಬಗೆಯ ಅನೇಕ ಸಾಧನಗಳ ಉಲ್ಲೇಖ ದೇಶಿ ವೈದ್ಯಶಾಸ್ತ್ರ ಗ್ರಂಥಗಳಲ್ಲಿ ಕಾಣದೊರೆಯುತ್ತವೆ.

ಆಧುನಿಕ ಪುಸ್ತಕವೊಂದರಲ್ಲಿ ದಾಖಲಾಗಿರುವ ಆ ಬಗೆಯ ಸಂಗತಿಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು. "ರತಿರಹಸ್ಯದಲ್ಲಿ ಸಂಭೋಗ ಮಾಡುವ ಕಾಲದಲ್ಲಿ ಶುಕ್ರವು ಹೊರಬರುವುದಕ್ಕಿಂತ ಮುಂಚೆ ಗಂಡನ ಜನನೇಂದ್ರಿಯದ ಆ ಮೂಲಭಾಗವನ್ನದುಮಬೇಕು. ಬೇವಿನ ಬೇರಿನ ಕಷಾಯವನ್ನು ತಯಾರಿಸಿ ಅದರ ಧೂಮವನ್ನು ಸ್ತ್ರೀಯ ಗರ್ಭಾಶಯದ ಮುಖಕ್ಕೆ ಹಿಡಿಯಬೇಕು. ದತ್ತೂರ ಬೀಜದ ಪುಡಿಯನ್ನು ಗರ್ಭಾಶಯ ಮುಖಕ್ಕೆ ಇಡುವುದು. ಸಂಭೋಗ ಮಾಡುವುದಕ್ಕಿಂತ ಮುಂಚೆ ಸೈಂದವಲವಣವನ್ನು ಪುಡಿಮಾಡಿ ಎಳ್ಳೆಣ್ಣೆಯಲ್ಲಿ ಮಿಶ್ರಮಾಡಿ ಸ್ತ್ರೀಯ ಜನನೇಂದ್ರಿಯದ ಮುಖಕ್ಕೆ ಲೇಪಿಸುವುದು. ಮುತ್ತುಗದ ಬೀಜದ ಪುಡಿಯನ್ನು ಜೇನುತುಪ್ಪದೊಡನೆ ಸೇರಿಸಿ ಏಳು ದಿನಗಳವರೆಗೆ ಲೇಪಿಸಬಹುದಾಗಿದೆ"[೧೧]. ಈ ಕೊನೆಯ ವಿಧಾನ ಚಾವುಂಡರಾಯನು ಹೇಳುವ ವಿಧಾನಕ್ಕೆ ಹೆಚ್ಚು ಹತ್ತಿರವಾದ ಸಂಗತಿ. ಆದರೆ ಚಾವುಂಡರಾಯನಲ್ಲಿ ಏಳು ದಿನಗಳ ಕಾಲ ಲೇಪಿಸಬೇಕು ಎಂಬ ಮಾತು ಬಂದಿಲ್ಲ. ಇನ್ನು ಆಧುನಿಕ ವೈದ್ಯ ದೃಷ್ಟಿಯಿಂದ ವಿಚಾರ ಮಾಡಿದಾಗ ಇಂದು ಮೈಥುನ ಪೂರ್ವದಲ್ಲಿ ಸ್ತ್ರೀ ಜನನೇಂದ್ರಿಯಕ್ಕೆ ಹಾಕಲು ಲಭ್ಯವಿರುವ ಮಾತ್ರೆಗಳ ವಿಧಾನಕ್ಕೆ ಈ ಸಂಗತಿ ನಿಕಟವಾಗಿ ಕಂಡುಬರುತ್ತದೆ. ಈ ಬಗೆಯ ಗರ್ಭ ನಿರೋಧಕಗಳಲ್ಲಿ ವೀರ್ಯಾಣುವನ್ನು ನಾಶಮಾಡುವ ಶಕ್ತಿಯಿರುತ್ತದೆ. ಚಾವುಂಡರಾಯ ಹೇಳುವ ಔಷಧಿಯಲ್ಲಿಯೂ ಆ ಬಗೆಯ ಶುಕ್ರಾಣುನಾಶಕ ಗುಣವಿದೆಯೇ ಎಂಬ ಸಂದೇಹ ಬರುವುದು ಸಹಜ. ಈಗಾಗಲೇ ಗಮನಿಸಿದಂತೆ ಜೇನುತುಪ್ಪ ಪ್ರಭಾವಿಯಾದ ಕ್ರಿಮಿನಾಶಕ ಗುಣ ಹೊಂದಿರುವುದರಿಂದ ಅದು ವೀರ್ಯಾಣುನಾಶಕವಾಗಿಯೂ ವರ್ತಿಸಬಹುದು. ಮುತ್ತುಗದ ಬೀಜದಲ್ಲಿಯೂ ಇದೇ ಗುಣವಿದ್ದಿರಬಹುದು. ಚಾವುಂಡರಾಯನ ಪೂರ್ವೋಕ್ತ ವಿಷಯದಲ್ಲಿ ವೈಜ್ಞಾನಿಕ ಸಮರ್ಥನೆ ಕೊಡಬಹುದಾದರೂ ಅವನ ಮತ್ತೊಂದು ಸಂಗತಿಯನ್ನು ಯಾವ ಕಾರಣಕ್ಕೂ ಹಾಗೆ

ಒಪ್ಪಿಕೊಳ್ಳಲು ಬರುವುದಿಲ್ಲ. ಪುಷ್ಯನಕ್ಷತ್ರಯೋಗವಿರುವ ಭಾನುವಾರದಲ್ಲಿ ಮದ್ದುಗುಣಿಕೆಯ ಬೇರನ್ನು ತಂದು ಟೊಂಕಕ್ಕೆ ಕಟ್ಟಿಕೊಂಡು ಪುರುಷ ಸ್ತ್ರೀಯನ್ನು ರಮಿಸುವುದರಿಂದ ಅವಳಿಗೆ ಮಕ್ಕಳು ಆಗುವುದಿಲ್ಲ ಎಂದು ಹೇಳಿರುವರು. ಮದ್ದುಗುಣಿಕೆ ಅತ್ಯಂತ ವಿಷ ಮೂಲಿಕೆಯಾಗಿದ್ದರಿಂದ ಅದನ್ನು ಧರಿಸುವುದರಿಂದ ಅದರ ವಾಸನೆಯಿಂದ ಅಂಡಾಣು ನಾಶವಾಗುತ್ತವೆ. ಎಂಬ ನಂಬಿಕೆ ನಮ್ಮ ಪ್ರಾಚೀನರಲ್ಲಿ ಇರಬಹುದು.

ಮಗುವಿಗೆ ತಾಯಿಯ ಹಾಲೇ ಉತ್ತಮ ಆಹಾರ. ಅದಕ್ಕಾಗಿ ತಾಯಿಯಾದವಳು ತನ್ನ ಮಗುವಿಗೆ ಸಾಕಷ್ಟು ಎದೆಹಾಲು ದೊರೆಯುವಂತೆ ಜಾಗ್ರತೆವಹಿಸಬೇಕು. ಸ್ತನ್ಯವೃದ್ಧಿಗೆ ಸಹಾಯಕವಾದ ಆಹಾರ ಪಾನೀಯಗಳನ್ನು ಹೆಚ್ಚಾಗಿ ಸೇವಿಸಬೇಕಾದದ್ದು ಅತ್ಯಗತ್ಯ. ಕೆಲವರಲ್ಲಿ ಏನು ಮಾಡಿದರೂ ಮಗುವಿಗೆ ಸಾಕಷ್ಟು ಹಾಲು ದೊರೆಯದು. ಇದರಿಂದ ಮಗುವಿನ ಬೆಳವಣಿಗೆಯ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆ ಹೆಚ್ಚು. ಇದನ್ನರಿತೋ ಏನೋ ಚಾವುಂಡರಾಯ ಸ್ತನವೃದ್ಧಿಗೆ ಮಾತ್ರವಲ್ಲ. ಸ್ತನ್ಯವೃದ್ಧಿಗೂ ಚಿಕಿತ್ಸೋಪಾಯ ತಿಳಿಸಿದ್ದಾನೆ. ಅದು ಈ ಕೆಳಗಿನಂತಿದೆ;

ಅರಿಸಿನಮಂ ಲೋಳಿಸರದ
ತಿರುಳುಮುಮಂ ಮೊಲೆಯ ತುದಿಗೆ ತೊಡೆಗೊಡೆ ಮೇಣು॥
ತ್ತರಣೆಯನಣಲೊಳ್ ತಾಳ್ದೊಡ।
ಮಿರಲೀಗುಮೆ ಕೆತ್ತ ಮೊಲೆಯ ಧಾರಾರ್ಗಳಮಂ॥೧೮೧॥

ಕಳಮಾಕ್ಷತ ಚೂರ್ಣ ಮೇಣ್।
ನೆಲಗುಂಬಳಮಿವಱೊಳೊಂದನೆರ್ಮ್ಮೆಯ ಪಾಲಿಂ॥
ಕಲಸಿ ಕುಡಿಯಿಸುಗೆ ತೊರೆ (ಱೆ)ಗುಂ।
ಮೊಲೆಗಳ್ ಬಾಣ (ಳ)ಂತಿ ಗೆಚ್ಚುಪಾಲ್ ಪಾಯ್ವಿನೆಗಂ॥೧೮೨॥"[೮೨]

"ಅರಿಸಿನಂ, ಲೋಳಿಸರದ ತಿರುಳ್ ಇವೆರಡುಮಂ ಕೂಡಿ ಅರೆದು ಮೊಲೆಯ ತೊಟ್ಟಿಗೆ ತೊಡೆವುದು. ಇಲ್ಲಾ ಉತ್ತರಣೆಯ ಬೇರಂ ಅಣಲಲ್ಲಡಸಿಕೊಳ್ವುದು ಇವಱಿಂದೆ ಮೊಲೆ ಕೆತ್ತು ಧಾರೆಗಳ್ ಬಿಡುವುವು. ಕಳವೆಯಕ್ಕಿಯ ಪಿಟ್ಟಂ ಎಮ್ಮೆಯ ಪಾಲಲ್ಲಿ ಕದಡಿ ಕುಡಿಯಿಸುವುದು. ಅಲ್ಲಾ ನೆಲಗುಂಬಳದ ಸಮುಲಮಂ ಎಮ್ಮೆಯ ಪಾಲಲ್ಲರೆದು ಕದಡಿ ಕುಡಿಯಿಸುವುದು. ಇದರಿಂದೆ ಬಾಣಂತಿಯರ್ಗೆ[ಗಳ್ಗೆ] ಮೊಲೆಗಳ್ ತೊರೆದು ಪಾಲ್ ಬರ್ಪುದು". ಇದು ಈ ಪದ್ಯಗಳ ಟೀಕಾರ್ಥ. ಈ ಔಷಧವನ್ನು ಎಷ್ಟು ದಿನಗಳವರೆಗೆ ಸೇವಿಸಬೇಕು ಎನ್ನುವುದನ್ನು ಚಾವುಂಡರಾಯ ತಿಳಿಸಿಲ್ಲ. ಆದರೆ ಬಾಣಂತಿಯರು ಪ್ರತಿನಿತ್ಯ ಹೆಚ್ಚು ಹಾಲು ಕುಡಿಯುವುದು ಎಲ್ಲ ದೃಷ್ಟಿಯಿಂದಲೂ ಒಳ್ಳೆಯದು. ಆದರೆ ಅವನು ಹೇಳುವ ಬೇರುಗಳಲ್ಲಿ ಸ್ತನ್ಯವೃದ್ಧಿಗೆ ಸಹಾಯಕವಾದ ಅಂಶಗಳು ಏನಿದೆ ಎಂಬುದನ್ನು ವೈಜ್ಞಾನಿಕ ವಿಶ್ಲೇಷಣೆಗೊಳಪಡಿಸಿಯೇ ತಿಳಿಯಬೇಕಾಗುತ್ತದೆ.

ಇದುವರೆಗೂ ಚರ್ಚಿಸಿದ ವಿಷಯಗಳಲ್ಲದೆ ಸ್ತ್ರೀಯರಿಗೆ ಸಂಬಂಧಿಸಿದ ಇನ್ನೂ ಅನೇಕ ರೋಗಗಳಾದ ಬಾನಂತಿ ಸನ್ನಿರೋಗ, ಸರಿಯಾಗಿ ಮುಟ್ಟಾಗದಿರುವುದಕ್ಕೆ, ಗರ್ಭಪಾತ, ಹೆರಿಗೆ ಕಷ್ಟವಾದಾಗ, ಮೂಗು ಕಿವಿ ಚುಚ್ಚಿದಾಗ ಇತ್ಯಾದಿ ಸಂದರ್ಭದಲ್ಲಿ ಮಾಡಬೇಕಾದ ಚಿಕಿತ್ಸಾ ಕ್ರಮಗಳು ವೈದ್ಯಶಾಸ್ತ್ರದ ಹಸ್ತಪ್ರತಿಗಳಲ್ಲಿ ಉಕ್ತವಾಗಿವೆ.

ಅವೆಲ್ಲವುಗಳಲ್ಲಿ ಕೆಲವು ನಂಬಿಕೆಯಿಂದ ಕೂಡಿದಂತೆ ಕಂಡರೂ ಅವುಗಳೆಲ್ಲವನ್ನು ವೈದ್ಯರು ಪ್ರಯೋಗಕ್ಕೆ ಒಳಪಡಿಸಿ ಅಭಿವೃದ್ಧಿಪಡಿಸುವುದು ಅತ್ಯಪಯುಕ್ತವಾದದ್ದು.

**೪.೧.೧.೪. ಬಾಲವೈದ್ಯ**

ನಮ್ಮ ಪ್ರಾಚೀನ ವೈದ್ಯಪದ್ಧತಿಯಲ್ಲಿ ವಿವಿಧ ವೈದ್ಯಕೀಯ ವಿಭಾಗಗಳಂತೆ ಬಾಲವೈದ್ಯ ಪ್ರಕಾರವು ಒಂದು. ಇದು ಹೆಸರೆ ಸೂಚಿಸುವಂತೆ ಬಾಲಕರ\ಬಾಲಕಿಯರ ಅಂದರೆ ಹುಟ್ಟಿನಿಂದ ಹದಿನಾರು ವರ್ಷಗಳವರೆಗಿನ ಮಕ್ಕಳಿಗೆ ತಗಲುವ ವ್ಯಾದಿಗಳಿಗೆ ಚಿಕಿತ್ಸೆಯನ್ನು ನೀಡುವ ವೈದ್ಯಪ್ರಕಾರ. ಈ ಬಾಲವೈದ್ಯ ಅಥವಾ ಬಾಲಗೃಹ ಚಿಕಿತ್ಸೆಯನ್ನು ಹೆಚ್ಚಾಗಿ ಯಂತ್ರ ಮಂತ್ರ ಮತ್ತು ದೈವೀ ನೆಲೆಯಲ್ಲಿ ರೂಢಿಸಿಕೊಂಡು ಬರಲಾಗಿದೆ. ಈ ಕುರಿತು ನಮ್ಮ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಪ್ರತ್ಯೇಕವಾದ ದೇವೇಂದ್ರಮುನಿಯ ಬಾಲಗ್ರಹ ಚಿಕಿತ್ಸೆ ರಚನೆಯಾಗಿದೆ. ಅಲ್ಲದೆ ನರಸಿಂಹಶಾಸ್ತ್ರೀಗಳ ವೈದ್ಯಸಾರ ಸಂಗ್ರಹ, ಚಾವುಂಡರಾಯನ ಲೋಕೋಪಕಾರದಲ್ಲಿ ಮತ್ತು ಕರ್ನಾಟಕ ಕಲ್ಯಾಣಕಾರಕದಲ್ಲಿ ಕೆಲವು ವಿಷಯಗಳು ಉಕ್ತವಾಗಿವೆ. ದೊಡ್ಡವರಿಗಿಂತ ಚಿಕ್ಕಮಕ್ಕಳು ಬಹುಬೇಗ ಕಾಯಿಲೆಗಳಿಗೆ ಒಳಗಾಗುತ್ತಾರೆ. ಇವುಗಳಲ್ಲಿ ಕೆಲವು ಹುಟ್ಟುವಾಗಲೇ ಬಂದಿರುವ ರೋಗಗಳಾದರೆ ಮತ್ತೆ ಕೆಲವು ಅನಂತರ ಬರುವ ರೋಗಗಳು. ತಾಯಿಯರು ತಿನ್ನುವ ಆಹಾರದ ದೋಷದಿಂದ ವಾತಾವರಣದ ಏರಿಳಿತಗಳ ಕಾರಣದಿಂದ ಎಳೆಯ ಮಕ್ಕಳಿಗೆ ರೋಗಗಳು ಬರುವುದುಂಟು. ಈ ರೋಗಗಳಿಗೆ ನಮ್ಮ ಪ್ರಾಚೀನ ಶಾಸ್ತ್ರಜ್ಞರು ಚಿಕಿತ್ಸಾ ವಿಧಿವಿಧಾನಗಳನ್ನು ಈ ಕೆಳಗಿನಂತೆ ವಿಷದಪಡಿಸಿದ್ದಾರೆ.

ದೇವೇಂದ್ರಮುನಿಯು ಹುಟ್ಟಿನಿಂದ ಹದಿನಾರು ವರ್ಷದವರೆಗೆ ಮಕ್ಕಳಿಗೆ ತಗಲುವ ವ್ಯಾದಿ ಕುರಿತು ಹೇಳಿದ್ದು ಹೀಗಿದೆ; "ಹುಟ್ಟಿದದಿವಸಂ ಮೊದಲಾದ ಹತ್ತು ದಿವಸ ಹನ್ನೆರಡು ಮಾಸಮಂ। ಹದಿನಾರು ವರ್ಷಪರಿಯಂತರ ಪಿಡಿದ ದೇವತೆಗಳ ಪೆಸರುಂ ರೂಪಿನ ಕ್ರಮಮುಂ। ವಿಕಾರಮಂ। ಅದಕ್ಕೆ ಮಂತ್ರಮಂ ಯಂತ್ರೌಷಧಮುಂ ಬಲಿಯಂ ಧೂಪಮುಂ ತಿಲಕಮುಂ ಇಡಿಸುವ ಕ್ರಮಮಂ ದಿಕ್ಕುಂ ಬಲಿಯಕೊಡುವ ಸಂಖ್ಯೆಯಂ ಪಂಚಪಲ್ಲವದಸ್ತಾನಮಂ ಕಂಬಳಿಯ ದಂಡೆಯ ಮಂತ್ರಮಂ। ವಿಭೂತಿ ಮಂತ್ರಮಂ। ಕಪ್ಪ ಮಂತ್ರಿಸಿ ಯೆಚ್ಚುವದುತ್ತಮಂ...."[೪೩] ಎಂದು ಯಂತ್ರ ಮಂತ್ರ ಧೂಪ ಬಲಿಯ ಮೂಲಕ ರೋಗ ನಿವಾರಣ ಕ್ರಮವನ್ನು ಸೂಚಿಸಿರುವನು.

ಶಿಶು ಹುಟ್ಟಿದ ಮೊದಲ ದಿವಸ ಮೊದಲ ಮಾಸ ಮೊದಲ ವರ್ಷದಲ್ಲಿ ಹಿಡಿದ ದೇವತೆ ನಂದಿನಿಯನಿಸಿಕೊಂಬುದು. ಆ ದೇವತೆ ಹಿಡಿದ ಮಾತ್ರದಲ್ಲಿ ಶಿಶುವಿಗೆ ಜ್ವರ ತಾಗುವುದು, ಮೈ ಬಾವದು, ಬೆಚ್ಚಿ ಬೀಳುವದು, ಮೊಲೆಯನೊಲ್ಲದು, ಕಂಣುಗಳು ಮುಚ್ಚಿಹದು, ಅಳುವದು, ಅದಕ್ಕೆ ನದಿಯ ದಡದ ಎರಡು ತಡಿಯ ಮಂಣುಂತಂದು ಪುತ್ಥಳಿಯಂಮಾಡಿ, ಬಿಳಿಯ ಕೂಳು, ಬಿಳಿಯ ಗಂದಾನುಲೇಪ, ಬಿಳಿಯ ಹೂವು, ಬಿಳಿಯ ವಸ್ತುಗಳಿಂದ ಅರ್ಚನೆಯ ಮಾಡಿ ೧ ಬಳ್ಳ ಅಕ್ಕಿಯ ಅನ್ನದಲ್ಲಿ ೫ತೆಕ್ಕೆ ೫ಸ್ವಸ್ತಿಕ, ೫ ದೀವಿಗೆಗಳನು ಅಂನ್ನದ ಮೇಲೆ ತೆಕ್ಕೆಯ ಸ್ವಸ್ತಿಕ ಆ ದೀವಿಗೆಗಳನು ಇರಿಸಿ ಆ ಪ್ರಧುಮೆಯ ಮುಂದೆಯಿರಿಸಿ, 'ಓಂ ನಮೊ ಭಗವತೆ ನಂದಿನಿ ಬಲಿಂಗ್ರಹೋ ಬಾಲಕಂ ಮುಂಬಮುಂಬಸ್ವಾಂಹಂ' ಎಂಬ ಮಂತ್ರದಿಂದ ಬಲಿಯ ಪ್ರಧುಮೆಗೆ ಕೊಟ್ಟು ಕಾಣಿಕೆಯನಿರಿಸಿ ಪೂರ್ವಾಂಗಹೋದಲ್ಲಿ ಮೂಡಲ ದಿಕ್ಕಿನಲ್ಲಿ ೩ ದಿನ ಬಲಿಯ ಹಾಕಿಸುವದು. ಬಿಳಿಯ ಸಾಸುವೆ, ಲಾಮಂಚ, ಶಿವನಿರ್ಮಾಲಿ, ಬೆಕ್ಕಿನರೋಮ, ಮಂಡೆಯ ಕೂದಲು,

ಬೇವಿನಸೊಪ್ಪು, ಹಸುವಿನ ತುಪ್ಪ, ಬಜೆ, ಯಳ್ಳು ಹಾವಿನ ಪೊರೆ ಯಿಷ್ಟನೂ ಕೂಡಿ ೩ ದಿನ ಸಾಯಂಕಾಲದಲ್ಲಿ ಧೂಪವ ಹಾಕಿಸುವ ಧೂಪ ಯಿ ಕ್ರಮವ ನಡಸಲು ಬಾಲಕನಿಗೆ ಸ್ವಸ್ತವಹುದು"[೪೪].

ಮಕ್ಕಳಿಗೆ ಬರುವ ಬಾಲಗ್ರಹಗಳನ್ನು ದೇವೇಂದ್ರಮುನಿ ಹುಟ್ಟಿನಿಂದ ಹತ್ತು ದಿನಗಳವರೆಗೆ, ಒಂದು ತಿಂಗಳಿಂದ ಹನ್ನೊಂದು ತಿಂಗಳವರಗೆ ಮತ್ತು ಒಂದು ವರ್ಷದಿಂದ ಹದಿನಾರು ವರ್ಷಗಳವರೆಗೆ ವಿವಿಧ ದೇವತೆಗಳಿಂದ ತಗಲುವ ವ್ಯಾದಿಗಳಿಗೆ ಧೂಪ ದೀಪ ಬಲಿ ಮಂತ್ರದ ಮೂಲಕ ಚಿಕಿತ್ಸಾ ಕ್ರಮಗಳನ್ನು ವಿಷದಪಡಿಸಿದ್ದಾನೆ. ಈ ಕ್ರಮಗಳು ನಮ್ಮ ಜನಪದರಲ್ಲಿ ಅತ್ಯಂತ ಪ್ರಾಚೀನ ಕಾಲದಿಂದಲೂ ದೈವಮೂಲ ಮಂತ್ರ–ಯಂತ್ರ ಮೂಲ ಎಂಬ ನಂಬಿಕೆಯಿಂದ ಬೆಳೆದು ಬಂದಿವೆ. ಇದು ಜನಪದ ವೈದ್ಯದ ಮೂಲದಿಂದ ಬಂದುದಾಗಿದೆ. ಜನಪದ ವೈದ್ಯದಲ್ಲಿ ಹಳ್ಳಿಗಳಲ್ಲಿ ಆಯಾ ಹಳ್ಳಿಯ ಸಂರಕ್ಷಣೆಗಾಗಿಯೇ ಕೆಲವು ಗ್ರಾಮದೇವತೆಗಳಿರುತ್ತವೆ. ಇವಕ್ಕೆ ಪ್ರತಿವರ್ಷ ಹಬ್ಬ ನಡೆಸುತ್ತಾರೆ. ಏನೋ ಕಾರಣದಿಂದಾಗಿ ಒಂದು ವರ್ಷ ಹಬ್ಬ ಮಾಡದಿದ್ದಾಗ ಆ ದೇವತೆಯ ಕೋಪದಿಂದಾಗಿ ಊರಿನ ಜನ ಮತ್ತು ದನಗಳಿಗೆ ರೋಗಗಳು ಕಾಣಿಸಿಕೊಳ್ಳುತ್ತವೆ ಎಂಬ ನಂಬಿಕೆಯಿದೆ. ಅಮ್ಮನ ಕೋಪವೇ ರೋಗಕ್ಕೆ ಕಾರಣವೆಂದು ಕೆಲವು ರೋಗಕ್ಕೆ ಅಮ್ಮ ಎಂದೇ ಕರೆಯುತ್ತಾರೆ. ಆಯಾ ದೇವರುಗಳಿಗೆ ಪೂಜೆ ಮಾಡಿಸುತ್ತಾರೆ.

ಹದಿನಾರು ವರ್ಷದ ಕೂಸಿಗೆ ತಗಲುವ ವ್ಯಾದಿ ಕುರಿತು ಹೇಳಿದ್ದು ಹೀಗಿದೆ; "೧೬ ವರ್ಷದ ಕೂಸಂ ಮಾದವಿನಿಯೆಂಬ ದೇವತೆ ಪಿಡಿಗುಂ ಪಿಡಿದೊಡೆ ಕೂಸು ಹಾಡೂಡು। ಜ್ವರಪಿಡಿದಕ್ಕುಂ, ಅಡಿಗಡಿಗೆ ಮೂತ್ರಬಿಡುಗುಂ, ಆಗಳಿಸುಗುಂ, ನೆಲನಕೆರಡದುಂ, ಆಹಾರ ಪಿರಿದಾಗಿ ಕೊಂಬುದು, ನಿರಂಕೊಂಬುದುಂ। ಹೊದ್ದೆಹರಿಹದು, ಮೂರ್ಚೆಯಕ್ಕುಂ, ಅದಕ್ಕೆ ಬಲಿ; ಮೊಗರು ಮದ್ದಿನ ಹುಗ್ಗೆ, ಪಾಯಸ, ಹಚ್ಚಂಬಲಿ, ಸೂಸಲುಗದುಬುಂ, ಓಗು, ಪಂಚಪಕ್ಷ, ಪಾಯಸ, ಇವಂ ನೂತನ ಹಂಬಿನಲ್ಲಿ ಇಡಿಸಿ ಜಲಗಂದಾಕ್ಷತೆ ಕೆಂಪನ ಪುಷ್ಪ, ಕೆಂಪನ ಬಟ್ಟೆ, ದೀಪ ಧೂಪ ಫಲವಸ್ತ್ರ ಕಾಣಿಕೆ, ಹಾಲು, ಬೆಲ್ಲ, ತುಪ್ಪ, ಅಲಸಂದಿ ಗುಗ್ಗರಿ ಇಕ್ಷುರಸ, ಜೇನುತುಪ್ಪ ಪಿಂನ್ಯಾಕ ಇರಿಸಿ ಆಗ್ರಹಪಡಿಸಿದ ವನಮೂಡ ಮುಖವಾಗಿ ಕುಳ್ಳಿರಿಸಿ ಮೂರು ಸಲ ನಿವಾಳಿಸಿ ಮೂಡಲ ದಿಕ್ಕಿನಲ್ಲಿರಿಸುವದು. ೩ದಿನ ಮಂತ್ರ ಸಹಿತಂ ಜನಮೊದನಿವಹಿ=ಬಲಿಂಗ್ರಹಣ=ಬಾಲಕಂ, ಮುಂಚ=ಸ್ವಾಹಾ॥ ಬಳಿಕ ಪಂಚ ಪಲ್ಲವದ ನಿರಿಂದಯ್ಯಲೆರಡು। ಧೂಪ, ಹಾವಿನ ಪೊರೆ, ಹಸುವಿನ ಹಾಲು, ಗುಗ್ಗಳ ಕಂಬಳಿಯ ಕೂದಲು, ಆನೆಯ ದಂತ, ತಗರಕೋಡು, ಸಾರಂಗದಕೋಡು, ಕೈಕಾಲುಗುರು, ಇವಂ ಧೂಪವನ್ನಿಕ್ಕುದು ಬಸ್ತಿಬ್ರಹ್ಮಂಗೆ, ಜಕ್ಕಳೆವ ಪದ್ಮಾವತಿ ದೇವತೆಗೆ ಹಿಂದೆ ಪೇಳ್ದ ಕ್ರಮದಿಂ ನೈವೇದ್ಯಮಂ ಮಾಡುವದು"[೪೫].

ಹದಿನಾರನೇ ವರ್ಷದಲ್ಲಿ ಬಾಲಕ ಬಾಲಕಿಯರು ತಾರುಣ್ಯಾವಸ್ಥೆಯಲ್ಲಿದ್ದು ಅವರಲ್ಲಿ ವಿರುದ್ಧಲಿಂಗದ ವರಲ್ಲಿ ಆಕರ್ಷಣೆ ಬೆಳೆಯುತ್ತದೆ. ಮತ್ತು ದೈಹಿಕ ಬೆಳವಣಿಗೆ ಶೀಘ್ರಗತಿಯಲ್ಲಿದ್ದು ಜೀರ್ಣಶಕ್ತಿ ಹೆಚ್ಚಿರುತ್ತದೆ. ಆ ವಯಸ್ಸಿನವರಲ್ಲಿ ಪ್ರೇಮಾಂಕುರ ಬೆಳೆದು ಮಾನಸಿಕ ತೊಳಲಾಟದಲ್ಲಿ ಬೀಳುತ್ತಾರೆ. ಈ ವಯಸ್ಸಿನವರಿಗೆ ಪೌಷ್ಠಿಕಾಂಶ ಬರಿತವಾದ ಆಹಾರ ಮತ್ತು ಮಾನಸಿಕ ನೆಮ್ಮದಿ ಸಿಗುವ ಹಾಗೆ ನೋಡಿಕೊಳ್ಳಬೇಕಾಗುತ್ತದೆ. ಆದ್ದರಿಂದ ವೈದ್ಯಶಾಸ್ತ್ರದಲ್ಲಿ ಅವರು ಊಟ ಮಾಡುವ ಆಹಾರವನ್ನು ದೇವತೆಗೆ ಅರ್ಪಿಸಿ ಅವರ ಮನಸ್ಸಿಗೆ ನೆಮ್ಮದಿ ದೊರೆಯುವ ಹಾಗೆ ಧೂಪ ದೀಪ ಬಲಿಕೊಡುವ ಕ್ರಮಗಳನ್ನು ಹೇಳಿರುವರು.

ಬಾಲಚಿಕಿತ್ಸೆ ಕುರಿತು ನರಸಿಂಹಶಾಸ್ತ್ರಿಗಳು ವೈದ್ಯಸಾರ ಸಂಗ್ರಹದಲ್ಲಿ ಹೇಳಿದ್ದು ಹೀಗೆ; "ಆಗ ತಾನೇ ಹುಟ್ಟಿದ ಶಿಶುವಿಗೆ ಸೈಂಧವ, ಹಿಪ್ಪಲಿ, ಕೊಷ್ಠ, ಬಜೆ, ಒಂದೆಲಗನ ಸೊಪ್ಪು, ಕೆನ್ನೆದಿಲಗೆಡ್ಡೆ, ಇವಿಷ್ಟನೂ ಪ್ರತ್ಯೇಕ ನಾಲ್ಕು ವರಹ ತೂಕವನು ಕಲ್ಕವ ಮಾಡಿ ಒಂದು ಕೊಳಗ ಬ್ರಾಹ್ಮೀರಸದಲ್ಲಿ ಒಂದು ಬಳ್ಳ ತುಪ್ಪವ ಹನಿಸಿ ಆ ಕಲ್ಕವ ಕದಡಿ ಕಾಸಿ ಹದದಲ್ಲಿ ಇಳುಹಿ ಆ ತುಪ್ಪವ ಊಡಿಸಲು ಶಿಶುಗಳಿಗೆ ರಕ್ಷೆ, ಮೇಥೆ, ಧೈರ್ಯ, ಐಶ್ವರ್ಯ, ನೆನಹು, ಕಾಂತಿ , ಇವಿಷ್ಟು ಉಂಟಾಗುವವು. ಹಾಗೂ ಶಿಶುಗಳಿಗೆ ತಾಯಿಯ ಮೊಲೆಹಾಲು ಕುಡಿಸುವುದರಿಂದ ದೇಹಕ್ಕೆ ಮಹಾಪುಷ್ಟಿಕರ ತಾಯಿಂ ಮೊಲೆಹಾಲು ಇಲ್ಲದಿದ್ದರೆ ಆಡಿನ ಹಾಲನಾದರೂ, ಹಸುವಿನ ಹಾಲನಾದರೂ ಕುಡಿಸುವುದು. ಅದರಿಂದ ತಾಯಿಯ ಮೊಲೆಯ ಹಾಲು ಕುಡಿಸಿದಷ್ಟು ಗುಣವುಂಟು"೪೬. ಶಿಶುಗಳು ಔಷಧವನ್ನು ತೆಗೆದುಕೊಳ್ಳುವುದಿಲ್ಲವಾದ್ದರಿಂದ ಔಷಧವನ್ನು ಮೈಗೆ ಹಚ್ಚುವುದು ಹೆಚ್ಚಾಗಿ ಕಂಡುಬರುತ್ತದೆ. ಅಲ್ಲದೆ 'ಶಿಶುಗಳಿಗೆ ಆವ ರೋಗ ಉಂಟಾಗಿ ಇದ್ದಿತು ಆ ರೋಗಕ್ಕೆ ತಕ್ಕ ಔಷಧಿಗಳನ್ನು ತಾಯಿಯ ಸ್ತನಗಳಿಗೆ ಬಿಸಿನೀರಿಂದ ಅರೆದು ಲೇಪನ ಮಾಡಿ ಒಂದು ಮೂಹೂರ್ತ ಅಂದರೆ ಎರಡೂವರೆ ಘಳಿಗೆ ಇರಿಸಿ ಬಳಿಕ ಬಿಸಿನೀರಿಂದ ಸ್ತನಗಳ ತೊಳೆಯಿಸಿ ಆ ಶಿಶುಗಳಿಗೆ ಆ ಸ್ತನ್ಯವನು ಉಣ್ಣಿಸಲು ಆ ರೋಗಂಗಳು ಶಮನವಹವು' ಎಂದು ನರಸಿಂಹಶಾಸ್ತ್ರೀ ಹೇಳಿರುವನು. ಆಧುನಿಕ ಸಂದರ್ಭದಲ್ಲಿ ತಾಯಂದಿರು ತಮ್ಮ ಎದೆಯ ಹಾಲನ್ನು ಮಕ್ಕಳಿಗೆ ಕುಡಿಸದೆ ಬಾಟಲಿಯ ಹಾಲು ಕುಡಿಸುತ್ತಾರೆ. ತಾಯಿ ಹಾಲೇ ಶ್ರೇಷ್ಠವೆಂದು ಎಲ್ಲಾ ವೈದ್ಯ ಪ್ರಕಾರಗಳು ಹೇಳುತ್ತವೆ. ಆದ್ದರಿಂದ ಶಿಶುಗಳಿಗೆ ಔಷಧ ಕೊಡುವಾಗ ನರಸಿಂಹಶಾಸ್ತ್ರಿಗಳು ಹೇಳಿದ ಕ್ರಮವು ಅತ್ಯುಪಯುಕ್ತವಾದುದಾಗಿದೆ. ಗ್ರಾಮೀಣ ಪ್ರದೇಶದ ಸ್ತ್ರೀಯರು ಮಕ್ಕಳಿಗೆ ಎದೆಹಾಲು ಕುಡಿಸುವುದರಿಂದ ಮಕ್ಕಳು ದಷ್ಟಪುಷ್ಟವಾಗಿ ಬೆಳೆಯುತ್ತಾರೆ.

ಶಾಸ್ತ್ರಜ್ಞರು ಸೂಚಿಸಿದ ಜ್ವರ, ಕಾಸಜ್ವರಗಳಿಗೆ ಹೆಚ್ಚಾಗಿ ಶುಂಠಿ ಬಜೆ, ಹಿಪ್ಪಲಿ ಜೇನು ಇವುಗಳನ್ನು ಮೊಲೆಹಾಲಿನಲ್ಲಿ ಚೂರ್ಣವ ಮಾಡಿ ಕೂಡಿಸಲು ಸೂಚಿಸಿರುವರು. ಶಿಶುಗಳ ದೇಹವು ಸೂಕ್ಷ್ಮವಾಗಿರುವುದರಿಂದ ಶುಂಠಿ ಬಜೆ ಮತ್ತು ಜೇನು ಸರ್ವರೋಗಗಳಿಗೂ ಹಿತಕರ ಹಾಗೂ ಅವುಗಳು ಕ್ರಿಮಿಕೀಟಗಳನ್ನು ನಾಶಮಾಡುವ ಶಕ್ತಿ ಹೊಂದಿರುತ್ತವೆ ಎಂಬದು ತಜ್ಞರ ಮಾತು. ಅಂತೆಯೇ ಇವುಗಳನ್ನು ಹೆಚ್ಚಾಗಿ ಬಳಸುವುದರಿಂದ ಮಕ್ಕಳಿಗೆ ತಗಲಬಹುದಾದ ವ್ಯಾದಿಯನ್ನು ತಡೆಯಬಹುದು. ಬಜೆಯನ್ನು ಸಾಮಾನ್ಯವಾಗಿ ಈಗಲೂ ಬಾಣಂತಿಯರಿಗೆ ಮತ್ತು ಮಕ್ಕಳಿಗೆ ಕೈಗೆ ಕಟ್ಟುತ್ತಾರೆ. ಇದು ಒಂದು ಸಂಪ್ರದಾಯವಾಗಿಯೇ ಮುಂದುವರಿದುಕೊಂಡು ಬಂದಿದೆ. ಕೆಲವು ಬಗೆಯ ಮೂಲಿಕೆಗಳನ್ನು ಮಕ್ಕಳ ಕೊರಳಿಗೆ ಕಟ್ಟುವುದರಿಂದ ಅನ್ಯ ರೋಗಗಳು ತಾಗದಿರಲೆಂಬುದು ನಮ್ಮ ಪೂರ್ವಜರು ರೂಢಿಸಿಕೊಂಡಿದ್ದರು. ಅದು ಈಗಲೂ ಜನಪದರಲ್ಲಿ ಬೆಳೆದು ಬಂದಿದೆ.

ಮಕ್ಕಳಿಗೆ ಅತಿಯಾಗಿ ಕಾಡುವ ಛರ್ದಿ ಅತಿಸಾರ ರೋಗೋಪಶಮನ ವಿಚಾರ ಗಮನಾರ್ಹ. ಬೆಲ್ಲವತ್ತದ ಬೇರನೂ ಕಳ್ಳಂಗಡಲೆಯ ಬೇರನೂ ಹಾಕಿ ಕಷಾಯವ ಕಾಸಿ ಆ ಕಷಾಯದಲ್ಲಿ ನೆಲ್ಲ ಅರಳ ಚೂರ್ಣವನೂ ಹಾಲನೂ ಹನಿಸಿ ಹಾಲುಳಿಯ ಕಾಸಿ ಮಧುವೆರಸಿ ನೆಕ್ಕಿಸಲು ಮಕ್ಕಳ ಛರ್ದಿ, ಅತಿಸಾರಗಳು ಹರವಹವು. ಹಾಗೂ ಸರ್ವಾತಿಸಾರಕ್ಕೆ; ಬಾಳೇಹೂವು, ಮಾವಿನ ತಳಿರು, ಕಹಿಪಡವಲದ ಸೊಪ್ಪು, ಮುಳ್ಳಂಪುರುಚೆಯ ಸೊಪ್ಪು, ಬೆಟ್ಟನೆಲ್ಲೀಸೊಪ್ಪು, ಈ ಸೊಪ್ಪುಗಳನು ಒಂದು ಮಡಕೆಯಲ್ಲಿ ತುಂಬಿ ಮುಚ್ಚಳವ ಮುಚ್ಚಿ ಸಂದುಲೇಪವಂ

ಮಾಡಿ ಶಿರುಮಣ್ಣುಗೊಂಡು ಬೆವರುವ ಹಾಗೆ ಪುಟವಿಕ್ಕಿ ತೆಗೆದು ಆ ಸೊಪ್ಪುಗಳ ರಸವ ಹಿಂಡಿಕೊಂಡು ಜೇನುತುಪ್ಪವೆರಸಿ ಕುಡಿಯ ಕೊಡೆ ಶಿಶುಗಳಿಗೆ ಸರ್ವಾತಿಸಾರ ಹರ. ಇಲ್ಲವೆ ಕೋಲುಮುರುಕನ ಚೆಕ್ಕೆ, ಅತಿಬಜೆ, ಹಿಪ್ಪಲಿ ಈ ಮೂರನು ಮೊಲೆವಾಲಲ್ಲೆರೆದು ಕಲ್ಕವ ಮಾಡಿ ವೈದ್ಯನು ಮಕ್ಕಳಿಗೆ ಕುಡಿಸಲು ಸರ್ವಾತಿಸಾರ ಹರವಹುದು"[೪೭]. ಎಂದು ಹೇಳಿರುವಲ್ಲಿ ಮನುಷ್ಯರಿಗೆ ಬರುವ ವಾಂತಿ ಮತ್ತು ಭೇದಿಯು ದಿನಕ್ಕೆ ಮೂರಕ್ಕಿಂತ ಹೆಚ್ಚು ಬಾರಿ ಆದರೆ ದೇಹದಲ್ಲಿರುವ ನೀರಿನ ಅಂಶ ಕಡಿಮೆ ಆಗುವುದು. ಹಾಗಾಗಿ ಅತಿಸಾರಕ್ಕೆ ಮುಖ್ಯ ಔಷಧವೆಂದರೆ ದ್ರವಪದಾರ್ಥಗಳು. ಆದ್ದರಿಂದ ಶಾಸ್ತ್ರಜ್ಞರು ವಿವಿಧ ಸೊಪ್ಪುಗಳ ರಸವನ್ನು ಕೊಡಲು ತಿಳಿಸಿರುವರು. ಅಲೋಪತಿಯಲ್ಲಿ ಅತಿಸಾರವಾದಾಗ ಓ.ಆರ್.ಎಸ್.ನ್ನು ಹಾಗೂ ಎಳನೀರು ಮತ್ತು ಕಿತ್ತಳೆ, ಬಾಳೆಹಣ್ಣು, ಟೋಮಟೋ ಹಣ್ಣಿನ ರಸಗಳನ್ನು ಕೊಡಬೇಕೆಂದು ನಿರ್ದೇಶಿಸುತ್ತಾರೆ. ಪ್ರಾಯಶಃ ಪ್ರಾಚೀನ ಶಾಸ್ತ್ರಜ್ಞರು ಹೇಳುವ ಮೂಲಿಕೆಗಳಲ್ಲಿಯೂ ಈ ಗುಣ ಅಡಕವಾಗಿರುತ್ತದೆ. ಹಾಗಾಗಿ ಇವರು ಹೇಳುವ ಕಲ್ಕ ಕಷಾಯ ಔಷಧ ಮಹತ್ವಪೂರ್ಣ ಔಷಧವಾಗಿ ಕಂಡುಬರುತ್ತದೆ.

ಮಕ್ಕಳಿಗೆ ಆಗಾಗ್ಗೆ ಕಾಡುವ ಮತ್ತೊಂದು ವ್ಯಾದಿಯೆಂದರೆ ಮಲ ಮತ್ತು ಮೂತ್ರ ಸರಾಗವಾಗಿ ಆಗದಿರುವುದು. ಮಲ ಮೂತ್ರಗಳು ಸರಾಗವಾಗಿ ಆಗದಿದ್ದರೆ ಅದು ಅನೇಕ ರೋಗಗಳ ಹುಟ್ಟಿಗೆ ಕಾರಣವಾಗುತ್ತದೆ. ಆದ್ದರಿಂದ ಪ್ರತಿದಿನ ಅದು ಸರಳವಾಗಿ ನಡೆಯಬೇಕಾದ ಕ್ರಿಯೆ. ಅಕಸ್ಮಾತ್ ಈ ತೊಂದರೆಯಾದಾಗ ಶಾಸ್ತ್ರಜ್ಞರು ಹೇಳಿದ ಚಿಕಿತ್ಸಾ ಕ್ರಮ ಹೀಗಿದೆ; "ಹಿಪ್ಪಲಿ, ಹಿಟ್ಟುಳಿಕನ ಬೇರು, ಏಲಕ್ಕಿ, ಸೈಂದವ ಇವುಗಳ ಚೂರ್ಣಿಸಿ ಜೇನುತುಪ್ಪ ಸಕ್ಕರತೆವೆರಸಿ ನಾಭಿಯಿಂದ ಕೆಳಕ್ಕೆ ಲೇಪಂಗೈಯಲು ಜಲ, ಮಲ ಬಿಡುಗೆ, ಮೂತ್ರ ಸರಾಗವಾಗಿ ಬಿಡುವುದು. ಇಲ್ಲವೆ; ಇಂದ್ರಪುಷ್ಟಿ, ವರ್ಷಫಲ, ಸೌತೇಬೀಜ, ಇಲಿಹಿಕ್ಕೆ, ಗೋರಕ್ಷಾಬೀಜ, ಇವಿಷ್ಟನು ಸಮಭಾಗವಾಗಿ ಗರುಗದ ಸೊಪ್ಪಿನ ರಸದಲ್ಲಿ ಮರ್ದಿಸಿ ನಾಭಿಯ ಕೆಳಕ್ಕೆ ಲೇಪಂಗೈಯಲು ಜಲ, ಮಲಗಳ ಕಟ್ಟು ಶಮನವಹುದು. ಅಥವಾ ನೆಗ್ಗಿಲಕಾಯ ಚೂರ್ಣವನು ಜೇನುತುಪ್ಪದಿಂದ ಕೊಡಿಸಲು ಶಿಶುವಿನ ಮೂತ್ರಕೃಛ್ರ ಶಮನವಹುದು. ಆ ಬೇರನೇ ಹಾಲಲ್ಲಿ ಕಷಾಯವ ಕಾಸಿ ಆ ಹಾಲ ಕುಡಿಯಿಸೆ ಮೂತ್ರಕೃಛ್ರ ಶಮನ"[೪೮]. ಮಲಬದ್ದತೆಯು ಸಾಮಾನ್ಯವಾಗಿ ಸತತವಾಗಿ ಗಟ್ಟಿಯಾದ ಆಹಾರ ಸೇವನೆ, ನೀರಿನ ಅಂಶದ ಕೊರತೆ ಮತ್ತು ಅತಿಯಾದ ಉಷ್ಣದಿಂದ ಉಂಟಾಗುತ್ತದೆ. ಅದೇ ರೀತಿ ಮಲಬದ್ದತೆಯೂ ಅಷ್ಟೆ. ಇದಕ್ಕೆ ಹೆಚ್ಚಾಗಿ ನೀರು ಕುಡಿಯುವುದರಿಂದ ಮತ್ತು ನೀರಿನಾಂಶವಿರುವ ಆಹಾರ ಸೇವನೆಯಿಂದ ಈ ತೊಂದರೆ ಬರದಂತೆ ನೋಡಿಕೊಳ್ಳಬಹುದು. ಆದರೆ ಕೆಲ ಸಂದರ್ಭದಲ್ಲಿ ಈ ವ್ಯಾದಿ ಬಂದೊದಗಿದಾಗ ಅದಕ್ಕೆ ಶಾಸ್ತ್ರಜ್ಞರು ಹಿಪ್ಪಲಿ, ಏಲಕ್ಕಿ, ಗೋರಕ್ಷಬೀಜ, ಗರುಗದ ಸೊಪ್ಪು ಇಂತಹ ಔಷದಿ ಪದಾರ್ಥಗಳನ್ನು ಮರ್ದಿಸಿ ನಾಭಿಯ ಕೆಳಕ್ಕೆ ಲೇಪಿಸಲು ಹೇಳಿರುವರು. ಈ ಕ್ರಮದಿಂದ ಸೇವಿಸಿದ ಆಹಾರವು ಜೀರ್ಣವಾಗದೆ ಇರುವುದನ್ನು ಜೀರ್ಣಿಸುವ ಮತ್ತು ಉಷ್ಣತೆಯನ್ನು ಹೋಗಲಾಡಿಸುವ ಕೆಲಸ ಮಾಡುತ್ತಿರಬುಹುದು ಅದಕ್ಕಾಗಿ ಈ ಕ್ರಮಗಳನ್ನು ಹೇಳಿದ್ದಾರೆ. ಆದರೆ ಈ ವಿಧಾನವನ್ನು ತಜ್ಞ ವೈದ್ಯರು ಪರೀಕ್ಷಿಸಿ ನೋಡಬೇಕು.

ಹೀಗೆ ನಂಬಿಕೆ ಮತ್ತು ಸಂಪ್ರದಾಯದ ಮೂಲವಾಗಿ ಬೆಳೆದು ಬಂದ ಬಾಲವೈದ್ಯವು ಸರಳವಾಗಿ ನಮ್ಮ ಸುತ್ತಲಿನ ಪರಿಸರದಲ್ಲೆ ಸಿಗುವ ಔಷಧಿಗಳನ್ನು ಬಳಸಿಕೊಂಡು ಚಿಕಿತ್ಸೆ ನೀಡುವ ಕ್ರಮ ನಮ್ಮ ದೇಶಿ ವೈದ್ಯಪದ್ದತಿಯಲ್ಲಿ ಬೆಳೆದುಬಂದಿದೆ.

### ೪.೧.೧.೩. ವಿಷವೈದ್ಯ

ಸಾಮಾನ್ಯವಾಗಿ ವಿಷವೈದ್ಯಯೆಂದರೆ ಹಾವು, ಚೇಳು ಮೊದಲಾದ ವಿಷಜಂತುಗಳ ಕಡಿತದಿಂದ ಉಂಟಾಗುವ ಪ್ರಾಣಾಘಾತ ಉಪದ್ರವಕ್ಕೆ ಪರಿಹಾರೋಪಾಯಗಳನ್ನು ನೀಡುವುದು ಎಂದರ್ಥ. ಹಾಗೂ "ನಾನಾ ಬಗೆಯ ವಿಷಗಳು ಅವುಗಳ ಹೆಸರು, ಸ್ವರೂಪ ಹಾಗೂ ಪ್ರಾಣಾಪಾಯದ ಸೇವನಾ ಪ್ರಮಾಣ ಮತ್ತು ವಿಷಪ್ರಯೋಗ ಲಕ್ಷಣಗಳು, ಉಪದ್ರವ ಮೊದಲಾದ ವೃತ್ತಾಂತಗಳನ್ನು ವಿವರಿಸುವ ಶಾಸ್ತ್ರಕ್ಕೆ ವಿಷವೈದ್ಯಶಾಸ್ತ್ರವೆಂದು ಹೆಸರು"[೨೯]. ಆದರೆ, ಮಾನವ ಪ್ರತಿನಿತ್ಯ ಜೀವನಕ್ಕೆ ಉಪಯೋಗವಾಗುವ ಸಕಲವಸ್ತುಗಳಲ್ಲಿ ಒಂದಿಲ್ಲೊಂದು ಬಗೆಯ ವಿಷಗಳು, ತುಂಬಿಕೊಂಡಿರುತ್ತವೆ. ಈ ರೀತಿಯ ವಿಷಪೂರಿತ ವಸ್ತುಗಳಿಂದ ಅಪಾಯ ತಪ್ಪಿದ್ದಲ್ಲ. ಇದಕ್ಕೆ ಪರಿಹಾರ ಕಂಡುಕೊಳ್ಳಲು ಚಿಕಿತ್ಸೆ ಅವಶ್ಯವೆಂದು ಅರಿತು ಪ್ರಾಚೀನ ಕಾಲದಿಂದಲೂ ಯಾವುದೇ ಬಗೆಯ ವಿಷಕ್ಕೆ ಒಂದಲ್ಲ ಒಂದು ಚಿಕಿತ್ಸೆಯನ್ನು ಕಂಡು ಹಿಡಿಯುವ ಪ್ರಯತ್ನಗಳು ನಡೆದಿವೆ. ಹಾಗೂ ನಡೆಯುತ್ತಲಿವೆ. "ದೂರದ ಗ್ರೀಸನಿಂದ ದಂಡೆತ್ತಿಬಂದ ಅಲೆಕ್ಸಾಂಡರ್‌ನ ಸೈನಿಕರನ್ನು ಹಾವು ಕಡಿತದ ಮರಣದಿಂದ ಭಾರತೀಯ ವಿಷವೈದ್ಯರು ರಕ್ಷಿಸಿದರು ಎಂಬ ಇತಿಹಾಸದ ಸಂಗತಿಯು ನಿಚ್ಚಳಗೊಳ್ಳುವುದು ನಮ್ಮ ನೆಲದ ಶ್ರೀಮಂತ ವಿಷವೈದ್ಯ ಪರಂಪರೆಯಿಂದ. ಇದಾದ ಬಳಿಕ ಸುಮಾರು ಸಾವಿರದ ನೂರು ವರ್ಷಗಳು ಸಂದು ಹೋದವು. ಆಗೊಬ್ಬ ಮಹಾತ್ಮ ನಮ್ಮ ನೆರೆಯ ಮುಗುಳುವಳ್ಳಿಯಲ್ಲಿ ಹುಟ್ಟಿಕೊಂಡ. ವಿಶ್ವದ ಪ್ರಪ್ರಥಮ ವಿಷವೈದ್ಯ ಗ್ರಂಥ ಈತನ ಹೆಗ್ಗಳಿಕೆಯ ಕನ್ನಡ ಕೃತಿ. ಗ್ರಂಥದ ಹೆಸರು ಖಗೇಂದ್ರಮಣಿದರ್ಪಣಂ"[೩೦].

ಆಯುರ್ವೇದಾಚಾರ್ಯರಾದ ಚರಕ, ಸುಶ್ರುತ, ವಾಗ್ಭಟ ಹಾಗೂ ಪೂಜ್ಯಪಾದರು ವಿಷಚಿಕಿತ್ಸಾ ವಿಭಾಗಕ್ಕೆ 'ಆಗದತಂತ್ರ'ವೆಂದು ಕರೆದು, ಅದನ್ನು ತಮ್ಮ ಗ್ರಂಥಗಳಲ್ಲಿ ವಿವರವಾಗಿ ಪ್ರತಿಪಾದಿಸಿದ್ದಾರೆ. ಸಂಸ್ಕೃತ ಸಾಹಿತ್ಯದಲ್ಲಿ ವಿಷವೈದ್ಯವನ್ನು ಕುರಿತಂತೆ ಬಂದಿರುವ ಗ್ರಂಥಗಳಲ್ಲಿ 'ಕಾಶ್ಯಪ ಸಂಹಿತೆ' ಮುಖ್ಯವಾದದ್ದು. ಇದು "ಗರುಡ ಪಂಚಾಕ್ಷರೀ ಕಲ್ಪವೆಂದೇ ಪ್ರಸಿದ್ಧವಾಗಿದೆ. ಇದರಲ್ಲಿ ಸ್ಥಾವರ, ಜಂಗಮ, ಕೃತಿಮ, ಗ್ರಹಜ ಮತ್ತು ಶಂಕಾಜ ವಿಷಗಳಿಗೆ ಚಿಕಿತ್ಸೆಯನ್ನು ಹೇಳಲಾಗಿದೆಯಾದರೂ ವಿಷಜಂತುಗಳ ಕಡಿತದ ಚಿಕಿತ್ಸೆಗೆ ಹೆಚ್ಚಿನ ಮಹತ್ವ ಕೊಡಲಾಗಿದೆ"[೩೧]. ಈ ಆಕರ ಚರ್ಚೆಯಲ್ಲಿ ಉಲ್ಲೇಖಿಸಿದಂತೆ ಕನ್ನಡದಲ್ಲಿ ಸಮಗ್ರವಾಗಿ 'ಖಗೇಂದ್ರಮಣಿಮಣಿ ದರ್ಪಣಂ' ಮತ್ತು ಚಾವುಂಡರಾಯನ ಲೋಕೋಪಕಾರದ ವಿಷವೈದ್ಯವೆಂಬ ಒಂದು ಅಧಿಕಾರದಲ್ಲಿ ಹಾಗೂ ನರಸಿಂಹಶಾಸ್ತ್ರಿಗಳ ವೈದ್ಯಸಾರಸಂಗ್ರಹದ ಒಂದು ಪ್ರಕರಣದಲ್ಲಿ ಸ್ಥಾವರ, ಜಂಗಮ, ಕೃತ್ರಿಮಗಳಿಂದ ಸಂಭವಿಸುವ ಪ್ರಾಣಾಪಾಹಾರಗಳಾದ ವಿಷದೋಷಗಳನ್ನು ನಿವಾರಿಸುವ ಕ್ರಮವೂ ಉಕ್ತವಾಗಿವೆ. ಅವುಗಳನ್ನು ಈ ಕೆಳಗಿನಂತೆ ವಿಷದಪಡಿಸಲಾಗಿದೆ. ಮೊದಲು ಸ್ಥಾವರ, ಜಂಗಮ, ಮತ್ತು ಕೃತ್ರಿಮ ವಿಷಗಳು ಯಾವುದರಿಂದ ಬರುತ್ತವೆ ಎಂಬುದನ್ನು ತಿಳಿಯೋಣ.

ಆಹಾರಪದಾರ್ಥ, ದವಸ-ದಾನ್ಯಗಳಿಂದ, ಗಿಡಮರ-ಬಳ್ಳಿಗಳಿಂದ ಉಂಟಾಗುವ ವಿಷಗಳನ್ನು ಸ್ಥಾವರ ವಿಷಗಳೆಂದು, ಹಾವು ಚೇಳು ಇಲಿಗಳೇ ಮೊದಲಾದವೂ, ನಾಯಿ, ಹುಲಿ, ಗೌಳಿಜಾತಿಗಳು, ಮೊಸಳೆ ಮೀನು ಮುಂತಾದ ಜಲಚರ ಪ್ರಾಣಿಗಳೂ, ನೊರಜು, ಗುಂಗುರು, ದುಂಬಿಗಳು, ಪಕ್ಷಿಸಮೂಹವೂ ಜನರೂ, ನಂಜಲಿ, ನಲ್ಲಿರುವೆ, ಇಲಿ, ಹೆಗ್ಗಣ ಮುಂತಾದ ವಿಷಗ್ರಾಹಿಗಳಿಂದ ಉಂಟಾಗುವ ವಿಷವನ್ನು ಜಂಗಮವಿಷವೆಂದೂ, ಉಳಿದ ಕೃತ್ರಿಮ ವಿಷಗಳೆಂದರೆ ಕೈಮಸಕ, ಮದ್ದು, ಪರರಿಂದ ಮಾಡಿಸಿದ ಅಭಿಚಾರ, ಅನಿಷ್ಟತೆಗಳು ಇತ್ಯಾದಿ.

ಸ್ಥಾವರ ವಿಷದಿಂದ ಕೃತಿಮ ವಿಷದವರೆಗೂ ಆಗುವ ಅನಾಹುತಗಳಿಗೆ ಉಪಚಾರಗಳನ್ನು ಪಾನ ಅಂಜನ ನಸ್ಯ ಲೇಪ ಮೊದಲಾದ ಕ್ರಮಗಳಲ್ಲಿ ಮಾಡಬೇಕಾದ ರೀತಿಗಳನ್ನು ಔಷಧಗಳಿಂದಲ್ಲದೆ ಮಂತ್ರ ತಂತ್ರಾದಿಗಳಿಂದಲೂ ವಿಷನಿವಾರಣೆ ಸಾಧ್ಯವೆಂದು ಹೇಳಲಾಗಿದೆ.

ಸ್ಥಾವರವಿಷವು ಇಪ್ಪತ್ತೈದು ವಿಧವಾಗಿರುವುದು. ಅವುಗಳಲ್ಲಿ ಕ್ರೂರ ವಿಷಗಳು–ಮಸ್ತೆ, ವತ್ಸಾನಾಭ, ಬಲಾಹ, ಪುಷ್ಕರಶರ, ಹರಿದ್ರಾ, ಶೃಂಗೀಕುಲ, ಮೇಷಶೃಂಗಿ, ಹಾಲಾಹಳ, ಕಾಸ್ತುಕ, ರಕ್ತಶೃಂಗಿ, ಮಧುಪಾಕಗಳೂ, ಇಂದ್ರವಜ್ರ, ಕರ್ಕಾಟಕ, ಶೃಂಗಿ, ಮಧುರ, ಕ್ರೌಂಚ, ಹರಿತ, ಅರ್ಕ, ಕಾಳಕೂಟ, ಪುಂಡರೀಕ ಸಂಕೋಚಗಳೂ, ಗಾಳವ ಅಂಜನ, ರೋಹಿಣ, ಏಕವೀರ ಎಂಬ ಒಟ್ಟು ೨೫ ರೀತಿಯ ಕ್ರೂರ ವಿಷಗಳಿವೆ. ಅತೀ ಕ್ರೂರ ವಿಷಗಳು ಐದು ಅವುಗಳು; ಸಂಕೋಚ ಕಾಳಕೂಟ, ವತ್ಸನಾಭಿ, ಮುಸ್ತಕ ಮತ್ತು ಶೃಂಗ ಎಂಬವುಗಳಿವೆ. ಸ್ಥಾವರವಿಷಗಳ ಲಕ್ಷಣಗಳನ್ನು ಮಂಗರಾಜ ಈ ಕೆಳಗಿನಂತೆ ಹೇಳುತ್ತಾನೆ;

ಮ॥ ಅತಿಸಾರಂ ಮೂರ್ಛೆದಾಹಂ ಮತಿ ವಿಕಳತೆಯುಂ ಭ್ರಾಂತಿ ಹೃಚ್ಛೂಲೆತಾಪಂ
ಗತಸತ್ರಂ ನೇತ್ರಮಾಂದ್ಯಂ ಪ್ರಕೃತಿ ವಿಕೃತಿಯುಂ ಗದ್ಗದಧ್ವಾನಕಂಠಂ
ಗತಿಭಂಗಂ ಶ್ವಾಸಖಾಸಂ ರುಧಿರವಮನಮುಂ ಸ್ವೇದಮತ್ಯಂತ ಖೇದಂ
ಧೃತಕೋಪಂ ತಾವಿವೆಲ್ಲಂ ವಿಷಮತರಮೆನಿಪ್ಪಂಗೆ ಚಿಹ್ನಂಗಳಕ್ಕುಂ"[೫೨]

ಅತಿಸಾರ, ಮೂರ್ಛೆ, ದಾಹ, ಬುದ್ಧಿಭ್ರಮಣೆ, ಭ್ರಾಂತಿ, ಹೃದಯಶೂಲೆ, ತಾಪ, ಬಲಹೀನತೆ, ಕಣ್ಣುಮಂಜು, ಅಸಹಜ ಶರೀರಪ್ರಕೃತಿ, ಗದ್ಗದ ಧ್ವನಿ, ನಿಶ್ಚಲತೆ, ಕೆಮ್ಮು, ರಕ್ತವಮನ, ಬೆವರುವುದು, ದುಃಖ, ಕೋಪ, ಇವೆಲ್ಲವೂ ಸ್ಥಾವರ ವಿಷಮತದ ಲಕ್ಷಣಗಳಾಗಿವೆ. ಇದಕ್ಕೆ ಚಿಕಿತ್ಸಾ ಕ್ರಮವಾಗಿ ಹಲವು ಔಷಧ ಮತ್ತು ಮಂತ್ರವನ್ನು ಹೇಳುತ್ತಾನೆ. ಮೊದಲ ಮಂತ್ರ ಈ ಕೆಳಗಿನಂತಿವೆ;

೧. ಓಂ ನಮೋ ಭಗವತೇ ಪಾರ್ಶ್ವನಾಥಾಯ ಸ್ಥಾವರ ಜಂಗಮ ಕೃತ್ರಿಮವಿಷ ಸಂಹರಾಯ ಹಂ ಝುಂ ಝಿಂ ಹಂಸ ಪಾರ್ಶ್ವನಾಥದೇವತಾಜ್ಞಾ ವಿಷಹರ ಮಲ್ಲಿನಾಥದೇವತಾಜ್ಞಾ ತ್ರಿಭುವನ ಗುರುಡಾಜ್ಞಾ ಶ್ರೀಧರದೇವತಾಜ್ಞಾ ಶ್ರೀಫ್ರಂ ನಿರ್ವಿಷಂ ಕುರುಹು ಫಟ್‌ಸ್ವಾಹಾ. ಇದು ಸಕಲ ವಿಷಹರ ಮಂತ್ರ.

೨. ಓಂ ನಮೋ ಭಗವತೇ ಸ್ವಚ್ಛಂದ ಭೈರವೇ ಮಹಾಭೈರವೇ ಕಾಳಕೂಟವಿಷಂ ಸ್ಫೋಟಯ ಖಂಡಯ ಅವತಾರಯ ನಾಬಿವಿಷಂ ಹಾಲಾಹಲವಿಷಂ ಕೃತ್ರಿಮವಿಷಂ ಶಂಕಾವಿಷಂ ಉಪಘಾತವಿಷಂ ಸ್ಥಾವರ ಜಂಗಮವಿಷಂ ಕಾಲಚಂಚುಚಾಪರಯೂತಾಜ ಸುಮಂತು ಜಹಾದ್ವಯಿಃ ಚೆನ್ನನಳಖ ಚಂದ್ರಯಜ ಓಂ ಕಾಳಾಯ ಮಹಾಕಾಳಾಯ ಕಾಳಗರ್ಭವಿಹಾ ಅಮೃತಗರ್ಭ ದೇವಿ ಓಂ ಕ್ಷಾಂ ಕ್ಷೀಂ ಕ್ಷೂಂ ಕ್ಷಾಂ ಕ್ಷೂಂ ಓಂ ಹುಂ ಫಟ್ ಸ್ವಾಹಾ ನಾಸ್ತಿ ವಿಷ ಸ್ವಾಹಾ : ಇದು ಸ್ವಚ್ಛಂದ ಭೈರವಿಮಂತ್ರಂ"[೫೩].

ಯಾವುದಾದರೊಂದು ವಿಷಪೀಡಿತನಾದವನ/ಳ ಶರೀರವನ್ನು ಈ ಮೇಲಿನ ಎರಡು ಮಂತ್ರಗಳಲ್ಲಿ ಯಾವುದಾದರೊಂದರಿಂದ ಮಂತ್ರಿಸಿ,

.......ಮಂತ್ರವಾರ್ಧಾರೆಯಿಂ ಸೋಮಧ್ಯಾನವಿಶೇಷದಿಂ ತಳಿದು ಸಮ್ಯಗ್ಭೇಷಜಾನೀಕಮ
ನಾಮೋಚ್ಚಾರಣಪೂರ್ವಕಂ ಪಠಿಸಿ ದಷ್ಟಂಗೀಯೇ ಬಾಳ್ಗುಂ ದಿಟಂ"[೫೪]

ಮಂತ್ರಸಹಿತ ನೀರನ್ನು ಸೋಮಧ್ಯಾನದಿಂದ ಚಿಮುಕಿಸಿ, ಸಮ್ಯಕ್‌ಜ್ಞಾನ ಪೂರಿತವಾದ ಔಷಧವನ್ನು ನಾಮೋಚ್ಚಾರಣಪೂರಕವಾಗಿ ಪಠಿಸಿ ದಷ್ಟನಿಗೀಯಲು ಆತನು ನಿಜವಾಗಿಯೂ ಬದುಕವನು. ಎಂದು

ಪ್ರಮಾಣ ಪೂರ್ವಕವಾಗಿ ಹೇಳಿರುವಲ್ಲಿ ಮಂತ್ರದೊಂದಿಗೆ ಔಷಧವನ್ನು 'ಸಮ್ಯಕ್ ಜ್ಞಾನ ಪೂರಿತವಾಗಿ' ನೀಡಲು ಹೇಳಿರುವನು. ಇಲ್ಲಿ ಮಂಗರಾಜ ಸೂಚಿತ ಮಂತ್ರವು ರೋಗಿಯ ಮನಸ್ಸಿನ ಆತಂಕವನ್ನು ಹೋಗಲಾಡಿಸುತ್ತದೆ. ಔಷಧಿ ವಿಷವನ್ನು ಹೋಗಲಾಡಿಸುತ್ತದೆ. ಕೇವಲ ಮಂತ್ರದಿಂದ ವಿಷವಾಗಿಸಲು ಸಾಧ್ಯವಿಲ್ಲ ಎಂದು ತಿಳಿಯಬೇಕಾಗುತ್ತದೆ. ಇಲ್ಲಿ ಮಂತ್ರಕ್ಕಿಂತ ಔಷಧವೇ ಮುಖ್ಯವಾಗುತ್ತದೆ.

ಯಂತ್ರ, ಮಂತ್ರದ ವಾತಾವರಣವು ಮನಸ್ಸಿಗಾಗುವ ನೆಮ್ಮದಿ, ಸುರಕ್ಷತೆಗಳನ್ನು ನೀಡುತ್ತದೆ. ಉದಾಹರಣೆಗೆ: ಹಾವನ್ನು ಕಂಡ ಕ್ಷಣಮಾತ್ರದಲ್ಲಿ ಮನುಷ್ಯನಿಗೆ ಜಗತ್ತೆಲ್ಲಾ ಮರೆತು, ಮೈನಡುಕ, ಬೆವರು, ಹೆದರಿಕೆ, ನಿಂತರೋಮಗಳು, ಇವೆಲ್ಲಾ ಮಿಂಚಿನ ವೇಗದ ದೇಹದಲ್ಲಾಗುವ ಹಾರ್ಮೋನ್‌ಗಳಿಂದಾಗುವ ಕ್ರಿಯೆ. ಅಂತೆಯೇ ಮಂತ್ರ, ಯಂತ್ರಗಳಿಂದ ಕೆಲವು ಸಾರಿ ನೆಮ್ಮದಿ ಸಿಗಬಲ್ಲದೇನೋ? "ಯಾವುದೇ ಒಂದು ರೋಗ ಅಥವಾ ಗಾಯಗಳನ್ನು ಗುಣಪಡಿಸಲು ಗಿಡಮೂಲಿಕೆ ಮತ್ತು ಮಂತ್ರಗಳನ್ನು ಬಳಸುತ್ತಾರೆ. ಇದರಲ್ಲಿ ಯಾವುದು ಆರೋಗ್ಯವರ್ಧದ ಶಕ್ತಿಯಾಗಿ ಕೆಲಸ ಮಾಡುತ್ತದೆ. ಮಂತ್ರವೋ ಶುಶ್ರೂಷೆಯೋ ಎಂಬ ಪ್ರಶ್ನೆಗೆ ಉತ್ತರ ಕಷ್ಟ ಸಾಧ್ಯ. ಹಾಗೆ ನೋಡಿದರೆ ಮಂತ್ರಕ್ಕಿಂತ ಮೂಲಿಕೆಗೆ ರೋಗ ನಿವಾರಣಾಶಕ್ತಿ ಇರುವುದು ಸ್ಪಷ್ಟ. ಆದರೆ ಮಂತ್ರ ಮತ್ತು ಮೂಲಿಕೆ ಎರಡೂ ಸಮನಾಗಿ ರೂಪಗೊಂಡು ಬಂದಿರುವುದು ಸ್ಪಷ್ಟ"[೫೫] ಮುಂದುವರಿದು ಔಷಧಗಳನ್ನು ಹೇಳಿದ್ದು ಹೀಗೆ;

> ಮದನಫಲ ಲೋಧ್ರಮೆಂಬಿವ। ನುದಕದೊಳಂ ಕುಡಿಯೆ ಕುಡುವುದಂತಲ್ಲದೊಡೀ
> ವುದು ಬಜೆಯೊಳುಪ್ಪುಮಂ ಬೆರ।ಸಿದು ವಮನಮದಾಗೆ ಸರ್ವ ವಿಷಹರಮಕ್ಕುಂ
> ಉದಕದೊಳೆ ಬಿಳಿಯ ಬೇರಂ। ಪದನಱಿದಿಯಲ್ಕೆ ವಿಷಮನಟಿದಾವಮನಂ
> ಅದು ದೊರಕದಂದು ಚುಂಚಿನೊ।ಳೊದವಿದ ಬೀಜಮುಮನರೆದು ಕುಡುವುದು ಬೇಗಂ
> ನೀರೊಳ್ ಮಱುಗಿಸಿ ಕುಡು ಕಾ। ಳ್ವೀರೆಯ ಬೇರಂ ಸಮಾಕ್ಷಿಕಂ ಘೃತದಿಂ ಸಂ
> ಹಾರಿಸುಗುಂ ವಮನಂ ವಿಷ ದಾರುಣಮಂ ತತ್‌ಕ್ಷಣ ಭಿಷಗ್ವರಮತದಿಂ"[೫೬]

ಉಮ್ಮತ್ತದ ಕಾಯಿ ಮತ್ತು ಲೋಧ್ರ ಇಲ್ಲವೆ ಬಜೆ ಮತ್ತು ಉಪ್ಪುಗಳನ್ನು ಬೆರಸಿ ನೀರಿನಲ್ಲಿ ಕೂಡಿಸಿ ವಮನವಾಗಲು ಎಲ್ಲ ವಿಧದ ವಿಷ ಪರಿಹಾರವಾಗುವವು. ಅಥವಾ ದೇಹಸ್ಥಿತಿಯನ್ನರಿತು ಬಿಳಿಯ ಬೇರನ್ನು ನೀರಿನಲ್ಲಿ ಕೊಡಲು ವಮನವಾಗಿ ವಿಷವನ್ನು ಹೋಗಲಾಡಿಸುತ್ತದೆ. ಅದು ದೊರೆಯದಿದ್ದರೆ ಚುಂಚಿನಬೀಜವನ್ನು ಅರೆದು ಬೇಗನೆ ಕೊಡಬೇಕು. ಇಲ್ಲವೇ ಕಾಡು ಹೀರೆಯ ಬೇರನ್ನು ನೀರಿನಲ್ಲಿ ಬೇಯಿಸಿ ಜೇನುತುಪ್ಪ ಮತ್ತು ತುಪ್ಪದೊಡನೆ ಕೊಡಬೇಕು. ಆಗ ಉಗ್ರವಿಷವಿದ್ದರೂ ಕೂಡಲೇ ನಿವಾರಣೆಯಾಗುವುದು. ಇಲ್ಲಿ 'ದೇಹದ ಸ್ಥಿತಿಯನ್ನು ಅರಿತು' ಎಂದಿರುವಲ್ಲಿ ಚಿಕ್ಕವರು, ದೊಡ್ಡವರು, ವಾತ, ಪಿತ್ತ, ಕಫ, ಮಹಿಳೆ ಎಂದು ತಿಳಿದು ಔಷಧ ಕೊಡಬೇಕು ಎಂದು ಸಲಹೆ ಹೇಳಿರುವುದು ಸ್ವಾಗತಾರ್ಹ. ವಿಷಲಕ್ಷಣ ನಿವಾರಣೋಪಾಯ ಹೇಳಿರುವುದು ಅತ್ಯುತ್ತಮ ಸಲಹೆಯಾಗಿದೆ. ಅದರೆ ಔಷಧವನ್ನು ಯಾವ ಪ್ರಮಾಣದಲ್ಲಿ ಮತ್ತು ಎಷ್ಟು ಸಾರಿ ತೆಗೆದು ಕೊಳ್ಳಬೇಕೆಂದು ಹೇಳಿರುವುದಿಲ್ಲ. ಮುಂದುವರೆದು ಖಗೇಂದ್ರಮಣಿದರ್ಪಣಂದಲ್ಲಿ;

**ಕಣೆಗಿಲ ವಿಷಕ್ಕೆ** : ಅರಿಸಿನವನ್ನು ಮೊಸರು ತುಪ್ಪಗಳೊಡನೆ ಅರೆದು ಕೊಟ್ಟರೆ, ಇಲ್ಲವೆ ಅಣಿಲೆ ಅರಿಸಿನ ಮತ್ತು ಸಕ್ಕರೆಯನ್ನು ಬೆರಸಿ ಕೊಟ್ಟರೆ ಕಣಿಗಿಲೆಯಿಂದಾದ ವಿಷ ನಿವಾರಣೆ(೨-೩೪) ಲಾಮಂಚ ಅರಿಸಿನ

ಮೆಣಸು ಮಧುಕ ಈ ನಾಲ್ಕನ್ನು ಕೂಡಿಸಿ ನೀರು ಅಥವಾ ಹಾಲಿನಲ್ಲಿ ಕೊಟ್ಟರೆ ಭಯಂಕರವಾದ ಕಣಿಗಿಲ ವಿಷವು ನಿವಾರಣೆಯಾಗುತ್ತದೆ(೨–೩೫)

**ಅಶ್ವಮಾರಿಯ ವಿಷಕ್ಕೆ :** ತರಣಿಯ (ಸೊಳೆಬೊಟ್ಟು ಗಿಡ?) ಬೇರನ್ನು ನೀರಿನಲ್ಲಿ, ಮೆಣಸನ್ನು ಮಜ್ಜಿಗೆಯಲ್ಲಿ, ಅರಿಸಿನವನ್ನು ಬಿಸಿನೀರಿನಲ್ಲಿ ಅರೆದು ನೀರಿನೊಡನೆ ಕೊಡಲು ಅಶ್ವಮಾರಿ (ಕಣಿಗಿಲೆ)ಯ ಉಗ್ರವಿಷವೂ ಪರಿಹರ(೨–೩೯)

**ಕಹಿಸೋರೆಯ ವಿಷಕ್ಕೆ :** ಧಾನ್ಯದ ಗಂಜಿಯನ್ನು ನೀರಿನೊಡನೆ ಅಥವಾ ಪುನರ್ನವಿಯನ್ನು ಮೊಸರಿನೊಡನೆ ಇಲ್ಲವೆ ಹಿರಿಮದ್ದಿನ ಬೇರನ್ನು ನೀರಿನೊಡನೆ ಕುಡಿಸಲು ಕಹಿಸೋರೆಯ ವಿಷ ನಿವಾರಣೆಯಾಗುವುದು(೨–೪೩)

**ಕಾಂಜೀರ ಮಿಶ್ರಿತ ಎಣ್ಣೆಯ ವಿಷ :** ನೇರಿಲ ತೊಕ್ಕನ್ನು ಹಾಲಿನಲ್ಲಿ ಅಥವಾ ಅರಿಶಿನ ಮತ್ತು ಲಾಮಂಚಗಳನ್ನು ಬಿಸಿನೀರಿನಲ್ಲಿ ಕೊಟ್ಟರೆ ಕಾಂಜೀರವಿಶ್ರಿತ ಎಣ್ಣೆಯ ವಿಷ ಪರಿಹಾರ (೨–೪೬)

**ಇಟ್ಟೆ ಬೀಜದ ವಿಷಕ್ಕೆ :** ಬಾಳೆಯ ಹಣ್ಣು ನೇರಿಲತೊಕ್ಕು ಕುದಿಸಿದ ನೀರು ಅಥವಾ ಸಕ್ಕರೆ ಲಾಮಂಚಗಳನ್ನು ನೀರಿನೊಡನೆ ಕೊಡಲು ಇಟ್ಟಬೀಜದ ವಿಷ ನಿವಾರಣೆ (೨–೪೭)

**ಉಮ್ಮತ್ತದ ವಿಷಕ್ಕೆ :** ತಾವರೆ ಇಲ್ಲವೆ ಆಸಡಿ ಅಥವಾ ಎಕ್ಕದ ಬೇರು ಅಥವಾ ತಾವರೆ ಮತ್ತು ಸಕ್ಕರೆಯೊಡನೆ ಹತ್ತಿಯ ಬೀಜ ಹಾಲು ಎರಡರಿಸಿನಗಳನ್ನು ಅಥವಾ ಕೇದಗೆಯ ಬೇರನ್ನು ನೀರಿನೊಡನೆ ಕೊಡಲು ಉಗ್ರವಾದ ಉಮ್ಮತ್ತದ ವಿಷವು ಆ ಕೊಡಲೆ ಪರಿಹಾರ (೨–೪೮)

**ಸಣಬಿನ ವಿಷಕ್ಕೆ :** ಚೊಕ್ಕಣಿಕೆಯೊಡನೆ ಅಮೃತಬಳ್ಳಿ ಇಲ್ಲವೆ ಕಿರುಗೋಣಿಯನ್ನು ಕೊಟ್ಟರೆ ಸಣಬಿನ ವಿಷ ಪರಿಹರ(೨–೪೯)

**ಎಕ್ಕೆಯ ಹಾಲು ವಿಷಕ್ಕೆ :** ದಂತಿ (ಜಾಪಾಳ, ಉಮ್ಮತ್ತ) ಮತ್ತು ಅಣಿಲೆಯನ್ನು ಕೊಟ್ಟಲ್ಲಿ ಇಲಿವಾಲದ ವಿಷವೂ ಎಳ್ಳೆಣ್ಣೆ ಸಕ್ಕರೆ ಮತ್ತು ಮಜ್ಜಿಗೆಯನ್ನು ಕುಡಿಯುವುದರಿಂದ ಎಕ್ಕದ ಹಾಲಿನ ದೋಷವೂ ನಿವಾರಣೆ (೨–೫೦) ಹಾಗೂ ಎಣ್ಣೆ ಮತ್ತು ಟಂಕಣಗಳನ್ನು ನೀರಿನೊಡನೆ ಗೋಣಿ ಮತ್ತು ಅಣಿಲೆಗಳನ್ನು ಹಾಲಿನೊಡನೆ ಕೊಟ್ಟರೆ ಎಕ್ಕೆಯ ಹಾಲಿನ ವಿಷ ನಿವಾರಣೆಯಾಗುವುದು. ಹಾಗೂ ಎಳನೀರು ಮತ್ತು ಹಾಲುಗಳಿಂದ ಸ್ನಾನ ಪಾನಗಳನ್ನು ಮಾಡಿಸಿದರೆ ಎಕ್ಕದ ಹಾಲಿನ ವಿಷ ಪರಿಹಾರವಾಗುವುದು. ಅದು ಕಣ್ಣಿನಲ್ಲಿ ಸೇರಿದ್ದರೆ ಎಳ್ಳನ್ನು ತೆಗೆದುಕೊಂಡು ಕಣ್ಣಿಗೆ ಹಿಂಡಲು ಅದು ಪರಿಹಾರವಾಗಿ ಕಣ್ಣಿನ ಭೀತಿ ನಿವಾರಣೆಯಾಗುವುದು. ಇದಕ್ಕಿಂತ ಉತ್ತಮವಾದ ಮದ್ದಿದೆಯೆ?(೨–೫೧,೫೨)"[೫೭].

ಇಲ್ಲಿ ಮಂಗರಾಜ ಸೂಚಿಸಿದ ವಿಷಪದಾರ್ಥ ಸಸ್ಯಗಳಿಂದ ಉಂಟಾದವು. ಇವುಗಳನ್ನು ನೋಡಿದಾಗ ಸಕಲ ವಸ್ತುಗಳಲ್ಲೂ ವಿಷವಿದ್ದೆ ಇರುತ್ತದೆ ಎಂದು ತಿಳಿಯಿತು. ಅಂತೂ ವಿಷದ ಮೂಲ ಯಾವುದೇ ಇರಲಿ, ಅದು ತುಂಬ ಅಪಾಯಕರವಾದದ್ದು. ಶರಿರಕ್ಕೆ ಬಾಧೆಯನ್ನೂ ಅಂಗಾಂಗಗಳ ನ್ಯೂನತೆಯನ್ನು ಚಟುವಟಿಕೆಗಳ ಅವ್ಯವಸ್ಥೆಯನ್ನೂ ಮನಸ್ಸಿಗೆ ವೇದನೆಯನ್ನು ಪ್ರಾಣಕ್ಕೆ ಸಂಚಕಾರವನ್ನು ತರಬಲ್ಲ ದುರ್ಗುಣಗಳಿಂದ ಕೂಡಿದ್ದು, ಸ್ವಾಸ್ಥ್ಯವನ್ನು ಕೆಡಿಸುತ್ತದೆ. ಆದ್ದರಿಂದ ಅದಕ್ಕೆ ಚಿಕಿತ್ಸೆ ಅತ್ಯಗತ್ಯ. ಪ್ರತಿಯೊಂದು ವಿಷಕ್ಕೂ ಪ್ರತ್ಯೌಷಧವಾಗಿ ಸಸ್ಯ, ಗಿಡಮೂಲಿಕೆ, ಆಹಾರ ಪದಾರ್ಥಗಳೇ ಔಷಧವಾಗಿ ಕಾರ್ಯಮಾಡುತ್ತವೆ. ಇದನ್ನು ಮಂಗರಾಜ ಸವಾಲಿನಂತೆ

‘ಇದಕ್ಕಿಂತ ಉತ್ತಮವಾದ ಮದ್ದುಂಟೆ’ ಎಂದು ಹೇಳಿರುವುದು. ಸಾಮಾನ್ಯವಾಗಿ ಎಲ್ಲಾ ವಿಷಗಳ ಚಿಕಿತ್ಸೆಗಳಲ್ಲಿ ಅರಿಸಿಣವನ್ನು ಹೆಚ್ಚಾಗಿ ಬಳಸಲಾಗಿದೆ. ಅರಿಸಿಣವು ರೋಗನಿರೋದಕ ಶಕ್ತಿ ಹೊಂದಿರುವುದರಿಂದ ಇದನ್ನು ಬಾಹ್ಯ ರೋಗಗಳಾದ ಗಾಯಗಳಿಗೆ ಮತ್ತು ಚರ್ಮಾದಿ ರೋಗಗಳಿಗೂ ಬಳಸುತ್ತಾರೆ. ಅದರಂತೆ ಆಂತರಿಕವಾಗಿ ವಿಷವನ್ನು ಶಮನಗೊಳಿಸಲು ಅತ್ಯಂತ ಪರಿಣಾಮಕಾರಿಯಾದ ವಿಷದ ಪ್ರತ್ರೌಷಧವಾಗಿ ಅರಿಸಿಣವು ಕಾರ್ಯನಿರ್ವಹಿಸುತ್ತದೆ. ಆದ್ದರಿಂದ ಇಂದಿಗೂ ಜನಸಾಮಾನ್ಯರು ಗಾಯವಾದಾಗ ರಕ್ತ ನಿಲುಗಡೆಗೆ, ಬಾನಂತಿಯರಿಗೆ ರೋಗನಿರೋಧಕವಾಗಿ ಬಳಸುವುದು ಸರ್ವೇಸಾಮಾನ್ಯವಾಗಿದೆ. ಹಾಗೂ ಮಜ್ಜಿಗೆ ಕೂಡ ಅಷ್ಟೆ ಪರಿಣಾಮಕಾರಿಯಾದ ಔಷಧವಾಗಿ ಕಾರ್ಯ ನಿರ್ವಹಿಸುತ್ತದೆ. ಆದ್ದರಿಂದ ಇಂದಿಗೂ ಹಳ್ಳಿಗಳಲ್ಲಿ ಈ ವಿಧಾನವನ್ನು ಅನುಸರಿಸುತ್ತಿರುವುದನ್ನು ನೋಡಿದರೆ ಇವೆಲ್ಲವು ವೈಜ್ಞಾನಿಕಾಂಶಗಳೆ ಎಂದು ಹೇಳಬಹುದು.

ಮಂಗರಾಜನು ಇನ್ನೂ ಅನೇಕ ಸ್ಥಾವರ ವಿಷಗಳಿಗೆ ಚಿಕಿತ್ಸೆಯನ್ನು ಹೇಳಿರುವನು. ಕೆಲವು ಉದಾಹರಣೆಗಳು ಈ ರೀತಿಯಾಗಿವೆ; ‘ಆವರಿಕೆ ನೆಲ್ಲಿ ಯಷ್ಟಿಮಧುಕ ಎಳ್ಳು ಶತಾವಾರಿ ಕೊಗ್ಗಿ ಗೋಪ್ಷಯ (ಹಸುವಿನ ಹಾಲು) ತಾವರೆ ನೇರಿಲು ಅಂಕೋಲೆ ಸಕ್ಕರೆ ಪಾಲ್ಮರದ ಚಿಗುರು ಸೂರ್ಯಭಕ್ತ ಕಟುಕತ್ರಯ ಎಂಬಿವುಗಳನ್ನು ಬೇರೆ ಬೇರೆಯಾಗಿ ಲೇಪನ ಪಾನ ಮಾಡಲು ಕಳ್ಳಿಯ ವಿಷಪರಿಹರ (೨–೫೩). ಅಣಿಲೆಯನ್ನು ಬಿಸಿ ನೀರಿನೊಡನೆ, ತಾವರೆ ಶ್ರೀಗಂಧಗಳನ್ನು ತಣ್ಣೀರಿನಲ್ಲಿ ತೆಗೆದುಕೊಂಡರೆ ಕರ್ಪೂರದ ವಿಷವು ಪರಿಹಾರವಾಗುತ್ತದೆ(೨–೬೦). ಕಿರುಕುಸಾಲೆ ಮತ್ತು ಕರಿಯ ಜೀರಿಗೆಯನ್ನು ಅರೆದು ನೀರಿನೊಡನೆ ಕೊಡಲು ಕರ್ಪೂರ ಮಿಶ್ರಿತ ತೈಲದ ವಿಷಗಳು ಉಪಶಮನವಾಗುತ್ತವೆ(೨–೬೧). ಕರ್ಪೂರವು ಬೆಲ್ಲದೊಡನೆ ಸೇರಿದರೆ ವಿಷವಾಗುತ್ತದೆ. ಅದಕ್ಕೆ ಬಜೆ ನೀರುಪ್ಪುಗಳನ್ನು ಕೊಟ್ಟು ವಮನ ಮಾಡಿಸಲು ವಿಷ ನಿವಾರಣೆಯೆಂಬ ಮಾತು ತಪ್ಪದೆಂಬುದು ಮಂಗರಾಜನ ಇಷ್ಟೋಕ್ತಿಯಾಗಿದೆ (೨–೬೩). ಮಂಗರಾಜ ಖಚಿತವಾಗಿ ಹೇಳಿರುವುದರಿಂದ ಈ ಎಲ್ಲ ಚಿಕಿತ್ಸೆಗಳು ಪ್ರಸ್ತುತ ಮತ್ತು ಪ್ರಯೋಗಾರ್ಹವಾಗಿವೆ. ‘ಶ್ರೀಗಂಧ ಸಬ್ಬಸಿಗೆಗಳಿಂದ ಗಂಧಕದ ವಿಷವೂ, ಸೈಂಧವ ಬೆಲ್ಲ ಇಂಗುಗಳನ್ನು ಕೊಡಲು ಬಿಳುಗಾರದ ವಿಷವೂ ಪರಿಹಾರವಾಗುವುದು(೨–೬೬). ಬಿಸಿನೀರಿನಲ್ಲಿ ಕಡೆದ ಮಜ್ಜಿಗೆಯೊಡನೆ ನೆಲ್ಲಿಕಾಯಿಯನ್ನು ಕೂಡಿಸಿ ಕೊಟ್ಟರೆ ಸೂಜಿಗಲ್ಲಿನ ವಿಷವನ್ನು ಹೋಗಲಾಡಿಸುತ್ತದೆ ಎಂಬುದರಲ್ಲಿ ಸಂದೇಹವಿದೆಯೇ? (೨–೬೯) ಎಂಬುದರಲ್ಲಿ ಸತ್ಯಾಸತ್ಯತೆಯೇ ಇದೆ. ಅದೇ ರೀತಿ ‘ಮೂರು ಕ್ಷಾರ ಮತ್ತು ತ್ರಿಕಟುಗಳು ಗಾಳಿ ಬೆಂಕಿಗಳಂತೆ ಸಬುಕಾರ (ಸಾಬೂನು)ದ ವಿಷವನ್ನು ಹೋಗಲಾಡಿಸುತ್ತದೆ(೨–೭೨) ವಿಭೂತಿ ಆಲಿಕಲ್ಲು ಹಾಲುಗಳೊಡನೆ ತೆಂಗಿನ ಹೊಂಬಾಳೆ ಸೇರಿಸಿ ಸಕ್ಕರೆಯೊಡನೆ ಕೊಡಲು ಸಾಬೂನಿನ ವಿಷ ಉಪಶಮನವಾಗುವುದು(೨–೭೩). ಬೇವಿನೆಲೆ ಬಿಳಿಯ ಗಣಜಿಲುಗಳನ್ನು ಹಸುವಿನ ಹಾಲಿನಲ್ಲಿ ಅರೆದು ಸಕ್ಕರೆ ಸಹಿತ ಸೇವಿಸಲು ಜೀರಿಗೆ ಮೆಂಥೆಯ ಮತ್ತು ಓವಿನ ವಿಷಗಳು ಹಾವಿಗೆ ಗರುಡನಿದ್ದಂತೆ ಪರಿಹಾರವಾಗುವುದು(೨–೭೬). ಎಂದಿರುವಲ್ಲಿ ಇಂದು ವೈಜ್ಞಾನಿಕವಾಗಿ ನಾವು ಎಷ್ಟೇ ಮುಂದುವರಿದಿದ್ದರು ಮಂಗರಾಜ ಹೇಳಿದ ಚಿಕಿತ್ಸಾ ವಿಧಾನವನ್ನು ಸುಲಭವಾಗಿ ಮತ್ತು ಕಡಿಮೆ ವೆಚ್ಚದಲ್ಲಿ ಉಪಯೋಗಿಸುವುದು ಅತ್ಯಂತ ಸೂಕ್ತ. ಇನ್ನೂ ಅನೇಕ ವಿಷಗಳಾದ ಹಾಲಿನ ವಿಷ, ನೇರಿನ ಹಣ್ಣಿನ ವಿಷ, ಹಲಸಿನ ಹಣ್ಣಿನ ವಿಷ, ಬಾಳೆಯ ಹಣ್ಣಿನ ವಿಷ, ತೆಂಗಿನಕಾಯಿ ವಿಷ, ಎಳನೀರ ವಿಷ, ಕಬ್ಬಿನ ರಸದ ವಿಷ, ದಾಳಿಂಬದ ವಿಷ, ಅಣಿಲೆಯ ವಿಷ, ಇತ್ಯಾದಿ ವಿಷಗಳಿಗೆ ನಿವಾರಣೋಪಾಯಗಳನ್ನು ಹೇಳಿರುವನು.

ಸ್ಥಾವರ ವಿಷದಲ್ಲಿ ಆಹಾರ ಪದಾರ್ಥಗಳಿಂದಲೇ ವಿಷ ಉಂಟಾಗುವುದು. ಆದ್ದರಿಂದ ಪ್ರತಿಯೊಂದು ಆಹಾರ ಪಧಾರ್ಥಗಳಲ್ಲಿ ವಿಷ ಅಂಶ ಇರುವುದರಿಂದ ಯಾವುದನ್ನೂ ಹೆಚ್ಚಾಗಿ ಸೇವಿಸಿದೇ ನಮ್ಮ ದೇಹದ ಸಾಮರ್ಥ್ಯಕ್ಕೆ ತಕ್ಕಂತೆ ದಿನಚರ್ಯ ಪಾಲಿಸುವ ಮೂಲಕ ಋತುಚರ್ಯಕ್ಕನುಗುಣವಾಗಿ ವಾತಾವರಣಕ್ಕೆ ತಕ್ಕಂತೆ ಮಿತವಾದ ಹಿತವಾದ ಆಹಾರ ಸೇವನೆಯಿಂದ ಯಾವ ಪದಾರ್ಥವು ವಿಷವಾಗದೆ ಸಮಪ್ರಕೃತಿ ಉಂಟಾಗಿ ದೀರ್ಘಾಯುವನ್ನು ಪಡೆಯಬಹುದು. ಹಾಗೂ ಆರೋಗ್ಯಯುತ ಜೀವನವನ್ನು ಸಾಗಿಸಬಹುದೆಂಬುದು ನಮ್ಮ ದೇಶಿ ವೈದ್ಯ ಪದ್ಧತಿಯ ಸಿದ್ಧಾಂತ. ಅದರಂತೆ ಮನುಷ್ಯರೆಲ್ಲರೂ ನಡೆದರೆ ಅನಾರೋಗ್ಯದಿಂದ ಮುಕ್ತರಾಗಬಹುದು ದೀರ್ಘಾಯುವನ್ನು ಪಡೆಯಬಹುದು.

ಮೊದಲೇ ತಿಳಿಸಿದಂತೆ ಪ್ರಾಚೀನ ವಿಷವೈದ್ಯದಲ್ಲಿ ಸ್ಥಾವರ, ಜಂಗಮ, ಕೃತ್ರಿಮಾದಿ ವಿಷಗಳಲ್ಲಿ ಜಂಗಮ ವಿಷದೋಷ ನಿವಾರಣೆಗೆ ಹೆಚ್ಚು ಪ್ರಾಮುಖ್ಯತೆ ಇದೆ. ಜಂಗಮ ವಿಷದಲ್ಲಿ ಎಂಟಂಗಗಳನ್ನು ಹೇಳುತ್ತಾರೆ. ಅವುಗಳೆಂದರೆ; ಸಂಗ್ರಹ, ಅಂಗನ್ಯಾಸ, ರಕ್ಷಾವಿಧಿ, ಸ್ತೋಭ, ಸ್ತಂಭ, ನಿರ್ವಿಷ, ಚೋದ್ಯ ಮತ್ತು ಖಟಿಕಾಫಣೀಂದ್ರ

ಪ್ರಾಚೀನ ಕಾಲದ ವೈದ್ಯಪದ್ಧತಿಯಲ್ಲಿ ಯಾವುದೇ ರೋಗ ಅಥವಾ ವಿಷ ತಗುಲಿದಾಗ ಕ್ರಮಬದ್ಧವಾದ ಚಿಕಿತ್ಸಾ ಕ್ರಮವನ್ನು ಅನುಸರಿಸುತ್ತಿದ್ದರು. ಮೊದಲು ರೋಗಿಯನ್ನು ವಿವಿಧ ಕ್ರಮಗಳಿಂದ ಪರೀಕ್ಷಿಸುವುದು. ನಂತರ ಕಾರಣ ಪರಿಣಾಮ ತಿಳಿದು ಔಷಧೋಪಚಾರ ಮಾಡುವುದು. ಅದರಂತೆ ಈ ಜಂಗಮ ವಿಷದೋಷದಲ್ಲಿ ಈ ಎಂಟು ಅಂಗಗಳನ್ನು ಕ್ರಮವಾಗಿ ಅನುಸರಿಸುತ್ತಿದ್ದರು. ಮೊದಲು ರೋಗಿಯನ್ನು ಪರೀಕ್ಷಿಸುವುದು. ಉಪಚರಿಸುವುದು ನಂತರ ವಿಷವೇರಿದವನು ಗಾಬರಿಯಿಂದ ಅಪ್ರಜ್ಞಾಹೀನನಾಗಿರುತ್ತಾನೆ. ಅವನನ್ನು ಪ್ರಜ್ಞಾವಸ್ಥೆಗೆ ತರುವುದು ಮುಂದುವರಿದು ಕ್ರಮವಾಗಿ ವಿಷವೇರಿದವನನ್ನು ಸಾಮಾನ್ಯ ಸ್ಥಿತಿಗೆ ತರುವುದು. ನಮ್ಮ ಪೂರ್ವಜರು ಯಾವುದೇ ಕಾರ್ಯವನ್ನು ಕ್ರಮವರಿತು ನಿರ್ವಹಿಸುತ್ತಿದ್ದರು. ಆದ್ದರಿಂದ ಅವರಿಗೆ ತಗುಲಿದ ದೋಷ ಮುರುಕಳಿಸದೆ ಪೂರ್ಣ ಗುಣಮುಖವಾಗುತ್ತಿದ್ದವು. ಆದರೆ ಇಂದಿನ ಚಿಕಿತ್ಸಾ ಪದ್ಧತಿಯಲ್ಲಿ ಕ್ರಮಗಳನ್ನು ಅನುಸರಿಸದಿರುವುದರಿಮದ ಯಾವುದೇ ರೋಗವು ಪೂರ್ಣ ಗುಣಮುಖವಾಗದೇ ಮರುಕಳಿಸುವ ಸಂಬವವಿರುತ್ತದೆ.

ಮಂಗರಾಜ ಮತ್ತು ಚಾವುಂಡರಾಯ ಇಬ್ಬರು ತಮ್ಮ ಕೃತಿಗಳಲ್ಲಿ ಜಂಗಮವಿಷದಲ್ಲಿ ಹಾವಿನವಿಷದ ಕುರಿತು ಹೆಚ್ಚು ಪ್ರಸ್ತಾಪಿಸಿರುವರು. ಮಂಗರಾಜ ಹಾವುಗಳ ಕುಲದೇಶ ಕಾಲಭೇದವನ್ನು ಎಂಟು ವಿಧಗಳೆಂದು ಹೇಳಿರುವನು. ಅವುಗಳ ಲಕ್ಷಣಗಳನ್ನು ಹೇಳಲಾಗಿದೆ. ಮುಂದುವರೆದು ಸರ್ಪಗಳು ಕಚ್ಚುವುದಕ್ಕೆ ಕಾರಣವನ್ನು ಚಾವುಂಡಾರಯ ಮತ್ತು ಮಂಗರಾಜ ಹೇಳಿದ್ದು ಹೀಗಿದೆ.

(ಪೆರೆಯುರ್ಚೆ) ದಾಂಟೆ ಕೋಲ್ದ (ಲ್ದ)।
ಪ್ಪಿರೆ ಪಗೆಗೊಳೆ ಸೊರ್ಕೆ ಶಂಕೆ ದೊರೆಕೊಳೆ ವಿಷಮು॥
ಬ್ಬರಿಸೆ (ಸಿ) ಮೞಲುಂದೆ ತಮ್ಮೊಳ್।
ನೆರೆದೆಡೆಯೊಳ್ ಕಾ(ನಾ)ಡೆ ಪಾವು ಕೊಳ್ಗುಂ ನರನಂ॥ (೧೦-೨)"[೬೪]

"ಪಾವುಗಳ್ಗೆ ಹೆರೆಯುರ್ಚುವಾಗಳ್, ಮಂಡಲಗೊಂಡಿರ್ದಲ್ಲಿ ದಾಂಟಿ ಪೋಗಲ್ ಕೋಲಿನಲ್ಲಿ ಪೊಯ್ದು ನೋಯೆ ಪಗೆಗೊಂಡಿರ್ದಲ್ಲಿ, ಆಹಾರಮಂ ಕೊಂಡು ಸೊಕಿರ್ಪಲ್ಲಿ, ತನ್ನ ಮನಸ್ಸಿನಲ್ಲಿ ಹಾವೆಂಬ ಶಂಕೆ

ಪುಟ್ಟಿದಲ್ಲಿ, ವಿಷಂಗಳ್ ಪೆರ್ಚಿರ್ದಲ್ಲಿ ನೆಟ್ಟಗೆ ಇದು ಇರ್ದಾಗಳ್ ಹೆಣ್ಗಂಡು ಪಾವುಗಳ್ ಕೂಡಿ ಇರ್ಪಲ್ಲಿ ಇಂಥಾ ವೇಳೆಗಳಲ್ಲಿ ಮನುಷ್ಯರ್ ಆ ಹಾವುಗಳಂ ಬಾರಿ(ದಿ) ಸಲ್ ಆ ಹಾವು ಮನುಷ್ಯರ ಕರ್ಚುವದು". ಇದು ಪದ್ಯದ ಟೀಕಾರ್ಥ.

ಮಂಗರಾಜನ 'ಖಗೇಂದ್ರಮಣಿ ದರ್ಪಣಂ'ದಲ್ಲಿ ಹೇಳಿದ್ದು ಹೀಗಿದೆ;

ಸುರತಾಥಿಕ್ಷೋಭದಿಂ ಪಿಂಗುವುದತಿವಿಷದರ್ಪಿಷ್ಠನುನ್ಮತ್ತನಾಹಾ
ರರತಂ ಸ್ವಾಸ್ಥಾನ ಲುಬ್ಧಂ ಕ್ಷುಧಿತನಧಿಕಭೀತಂ ನರಂ ದಾಂಟೆ ತನ್ನಂ
ಪಿರಿದುಂ ಶಂಕಾಕುಳಂ ತಾನೆನಿಪ ನವವಿಧಂ ವೈರಸಂಬಂಧಮಕ್ಕುಂ
ಧರೆಯೊಳ್ ನಿಷ್ಕಾರಣಂ ಬಂದಡಸಿ ಪಿಡಿದೊಡಂ ಕಾಲಸಪಾಖ್ಯನಕ್ಕುಂ(೩-೪೦)

ಸುರತಾರ್ಥದಿಂದ ವಂಚಿತವಾದಾಗ, ಅತಿವಿಷದಿಂದ ಉನ್ಮತ್ತವಾದಾಗ, ಆಹಾರಾರ್ಥವಾಗಿ ತಿರುಗುವಾಗ, ತನ್ನ ನೆಲೆಯನ್ನು ಕಳೆದುಕೊಂಡಾಗ, ಹಸಿದಿರುವಾಗ, ಹೆಚ್ಚು ಭಯಗೊಂಡಾಗ, ಮನುಷ್ಯನು ಅದನ್ನು ದಾಟಿದಾಗ ಹೆಚ್ಚಾಗಿ ಶಂಕಾಕುಳವೇ ಮೊದಲಾದ ಒಂಬತ್ತು ವಿಧ ಸರ್ಪಗಳು ಶತ್ರುತ್ವದಿಂದ ಕಚ್ಚುತ್ತವೆ.

ಇಲ್ಲಿ ಇಬ್ಬರೂ ಹೇಳಿದ್ದರಲ್ಲಿ ಸ್ವಲ್ಪಮಟ್ಟಿಗೆ ಸಾಮ್ಯತೆ ಕಂಡುಬರುತ್ತದೆ. ಈ ಕಾರಣಗಳು ಪದಶಃ ಸತ್ಯವಾಗಿವೆ. ಚಾವುಂಡರಾಯ ಹೇಳಿದ 'ತನ್ನ ಮನಸ್ಸಿನಲ್ಲಿ ಹಾವೆಂಬ ಶೆಂಕೆ ಪುಟ್ಟಿದಲ್ಲಿ' ಈ ಮಾತು ಲಕ್ಷಿಸಬೇಕು. 'ಮೆಟ್ಟಿದಲ್ಲದೇ ಹಾವು ಕಡಿಯದು' ಎಂಬ ಜನಪದ ಮಾತಿನಂತೆ ಈ ಕಾರಣ ಪದಶಃ ಸತ್ಯ. ಮಂಗರಾಜ ಹೇಳಿದ 'ಹೆಚ್ಚು ಭಯಗೊಂಡಾಗ' ಎಂಬ ಮಾತಿನಂತೆ ಹಾವು ನಿಜವಾಗಿಯೂ ಅಂಜುಬುರಕ ಪ್ರಾಣಿ. ಮನುಷ್ಯನು ನಡೆದಾಡುವ ಸಪ್ಪಳಕ್ಕೆ ದೂರ ಓಡುತ್ತದೆ. ಆದರೂ ಅದರ ಚಲನೆಗೆ ಅಡ್ಡಿ ಒದಗಿದಾಗ, ಅದರ ಶಾಂತಿಗೆ ಭಂಗ ಬಂದಾಗ ಮಾತ್ರ ಸಿಡಿದೇಳುತ್ತದೆ. ಸ್ವ-ರಕ್ಷಣಾರ್ಥವಾಗಿ ಪ್ರಾಣಿಗಳು ಮನುಷ್ಯರ ಮೇಲೆ ವಿಷ ಪ್ರಯೋಗ ಮಾಡುತ್ತವೆ.

ಮನುಷ್ಯನ ಯಾವ್ಯಾವ ಅವಯವಗಳಿಗೆ ಹಾವು ಕಚ್ಚಿದರೆ ಬದುಕುಳಿವುದು ಅಸಾಧ್ಯ ಎಂಬುದನ್ನು ರೀತಿ ಮಂಗರಾಜರಾಜನ ಖಗೇಂದ್ರಮಣಿದರ್ಪಣಂದಲ್ಲಿ ಈ ರೀತಿ ಹೇಳಿದ್ದಾನೆ;

ಚಂ॥ ಪಡತಲೆ ಕಣ್ನೊಸಲ್ ಕರತಳದ್ವಿತಯಂ ಪಣೆಗಣ್ ಕದಂಪು ಕಾ
ಲಡಿದುದಿ ಮೂಗು ನಾಭಿ ಹೃದಯಂ ಚಿಬುಕಂ ತಲೆ ರೋಮದಂಚುನಾ
ಣೆಡೆ ಕುಚಮಧ್ಯಮುಂ ಪದಜು ಪುರ್ವುಕಗಳೆಂಬಿವುಮಂ ಮಹಾಹಿ ಕೊಂ
ಡೊಡೆ ಗರುಡಂಗಮೆತ್ತಲರಿದೆಂದೊಡೆ ಪೇಱುಟಿದರ್ಗೆ ಸಾಧ್ಯಮೇ (೩-೪೨)"[೬೦]

ಭ್ರೂಮಧ್ಯೆ, ಎಡತಲೆ, ಅಧರೋಷ್ಠ, ಹಣೆ, ಕಣ್ಣು, ಕುತ್ತಿಗೆ, ಗದ್ದ, ಎದೆ, ಮೂಗು, ಕಟವಾಯಿ, ಮೊಲೆತುದಿ, ಹೊಟ್ಟೆ, ಶಿಶ್ನ, ಹೊಕ್ಕಳು, ಮಣಿಕಟ್ಟು, ಮೊದಲಾದ ಸ್ಥಳಗಳಲ್ಲಿ ಹಾವು ಕಡಿದರೆ ಆ ವ್ಯಕ್ತಿ ಬುದುಕುವುದಿಲ್ಲ ಎಂದು ಹೇಳಿದ್ದಾರೆ. ಸಾಮಾನ್ಯವಾಗಿ ಈ ಸ್ಥಾನಗಳಲ್ಲಿ ಸರ್ಪ ಕಚ್ಚಿದರೆ ರೋಗಿಗೆ ಪ್ರಥಮ ಚಿಕಿತ್ಸೆ ಮಾಡುವುದು ಕಷ್ಟವಾಗಬಹುದು. ವಿಷವು ಬಹುಬೇಗನೇ ದೇಹವನ್ನು ಆವರಿಸಿಕೊಂಡು ರೋಗಿ ಬದುಕುಳಿಯಲಾರನೆಂಬ ಉದ್ದೇಶದಿಂದ ಹೀಗೆ ಹೇಳಿರಬಹುದು. ಈ ಹಿನ್ನೆಲೆಯಲ್ಲಿ ಇವರು ಹೇಳಿದ ಹೇಳಿಕೆ ಸೂಕ್ತವಾಗಿ ಕಾಣಬಹುದು. ಆದರೂ ಇಂಥ ಸಂದರ್ಭದಲ್ಲಿ ತಕ್ಕ ಪ್ರಯತ್ನ, ಯೋಗ್ಯ ಚಿಕಿತ್ಸೆ

ತುರ್ತಾಗಿ ದೊರೆತರೆ ರೋಗಿಯು ಗುಣ ಹೊಂದುವ ಸಾಧ್ಯತೆ ಇರುತ್ತದೆ. ಎಂಬುದನ್ನು ಮರೆಯುವಂತಿಲ್ಲ.

ಶಾಸ್ತ್ರಜ್ಞರು ವಿಷವೇರಿದ ವ್ಯಕ್ತಿಯನ್ನು ಪರೀಕ್ಷಿಸಿ ರೋಗಿಯ ಅಳಿವು–ಉಳಿವಿನ ಬಗ್ಗೆ ತಿಳಿಯಲು ಸೂಚಿಸಿರುವ ಸಂಗತಿ ಇಲ್ಲಿ ಗಮನಾರ್ಹ. ಚಾವುಂಡರಾಯ ಒಂದು ಪದ್ಯದಲ್ಲಿ ಹೇಳಿದ್ದು ಹೀಗೆ;

> ಬಱವಱ ಬತ್ತಿ ತೋಱಿ ಕಿಱುನಾಲಗೆ ಮುಟ್ಟಲೊಂಡಂ ಶಿರೋರುಹಂ।
> ಪಱಿಯೆ ಕುವರ್ಣಮಾಗೆ ನಖದಂತೆಚಯಂ ಕಡುದಣ್ಣಸಾಗಿ ಸುಯ್॥
> ಪೊಱಮಡೆ ಪೊಟ್ಟೆ ಪೊಟ್ಟಣಿ(ಳಿ)ಸೆ ಕನ್ನಡಿ ಗಂಟಲೆ ಕೆತ್ತು ಪೋಗೆಗೋ।
> ಣೊಱಗಿರೆ ಮೂಗಿನೊಳ್ ನುಡಿಯೆ ಬಾಯ್ ಪೆಡೆ ದಷ್ಟನ ಸಾವು ನಿಶ್ಚಯಂ॥"[೨೧]

"ದಷ್ಟನ ಚೇಷ್ಟೆಯನಱಿವೊಡೆ ನಾಲಗೆಯಂ ಮುಟ್ಟಿ ನೋಡಲ್ ದ್ರವಮಿಲ್ಲದಿರ್ದೊಡೆ ಮಂಡೆಯ ಕೂದಲು ಮುಟ್ಟಲ್ ಕಿಟ್ಟುಬಹ, ಕೈಕಾಲುಗಾರ್ ಪಲ್ಗಳ ವರ್ಣಂ ಪಲ್ಲಟಮಾಗಿ ಕಪ್ಪಾಗಿರುಹ, ಉಸಿರ್ವಿಡುವಾಗಳ್ ಉಷ್ಣಮಿಲ್ಲದೆ ಶೀತಮಾಗಿರುಹ, ಹೊಟ್ಟೆಯುಬ್ಬರಿಸಿಹ, ಕಣ್‌ಗುಟಿಯಹ, ಗಂಟಲ್ ವೊಣಗುಹ, ಕೊರಲ್ ಒಂದು ಕಡೆಗೆ ಬಾಗುಹ, ಮೂಗಿನೊಳಗೆ ಮಾತನಾಡುವ ಈ ಗುಣಂಗಳ್ ಆ ದಷ್ಟಂಗಾಗಲ್ ಗಾರುಡಂಗ ಮಸಾಧ್ಯಮೆಂದಱಿವುದು". ಇದು ಪದ್ಯದ ಟೀಕಾರ್ಥ. ಮಂಗರಾಜನೂ; "ಹಲ್ಲುಗಳು ಹತ್ತಿಕೊಂಡಿರಲು, ಉಗುರುಗಳು ಬಣ್ಣ ಬಂದಿರಲು, ನಾಲಗೆ ಕಪ್ಪಾಗಿರಲು, ಗಂಟಲು ಅದುರುತ್ತಿರಲು, ಹೊಟ್ಟೆ ಒಳಹೋಗಿ ಗಟ್ಟಿಯಾಗಿರಲು ದಷ್ಟ ಶರೀರಿಗೆ ಅಶುಭವಾಗುತ್ತದೆ. ದಷ್ಟನ ಹೆಡತಲೆ ಅಲ್ಲಾಡದಂತಿರಲು ಕತ್ತು ಮಡಿಚಿಕೊಂಡಿರಲು ನಾಸಿಕದಂದ ನುಡಿಯಲಾಗದೆ ಬಾಯಿ ಬಿಡುತ್ತಿರಲು ಅವನು ಕೂಡಲೇ ಸಾಯುತ್ತಾನೆ. ಕಣ್ಣಿನಿಂದ ನೋಡಲಾಗದಿದ್ದರೂ ಕಣ್ಣೆವೆಗಳು ಅಲುಗದೆ ನೆಟ್ಟಂತಿರಲು ,ಶರೀರ ತಣ್ಣಗಾಗಲು ದಷ್ಟನ ವಿಷನಿವಾರಣೆ ಮುಕ್ಕಣ್ಣನಿಗೂ ಅಸಾಧ್ಯವೆಂದು ತಿಳಿಯುವುದು"[೨೨].ಎಂದು ಹೇಳಿರುವುದು ವಾಸ್ತವ ಕೂಡ. ಸಾಮಾನ್ಯವಾಗಿ ಹಾವು ಕಡಿದ ಮೂವತ್ತು ನಿಮಿಷಗಳೊಳಗೆ ವಿಷ ಲಕ್ಷಣಗಳು ಕಾಣಿಸತೊಡಗುತ್ತವೆಂಬುದು ತಜ್ಞರ ಮಾತು. "ಹಾವು ಕಡಿದ ಭಾಗದಲ್ಲಿ ಮೊದಲು ನೋವು, ಉರಿ ಮತ್ತು ಬಾವು ಕಾಣಿಸಿಕೊಂಡು ತುಸು ಹೆಪ್ಪುಗಟ್ಟಿದ ರಕ್ತ, ರಕ್ತಸ್ರಾವವು ಪ್ರಾರಂಭವಾಗುತ್ತದೆ. ಬಾವು ಕ್ರಮೇಣ ಇಡಿಯ ಅಂಗವನ್ನು ವ್ಯಾಪಿಸುತ್ತ ಬಂದು, ಜೋಮುಹಿಡಿಯುವುದಲ್ಲದೆ ಗಾಯದ ಬಳಿಯ ಅಂಗಾಂಶವು ನೀಲಿ ಅಥವಾ ಗುಲಾಬಿ ವರ್ಣಕ್ಕೆ ತಿರುಗುವುದು. ಈ ಸ್ಥಾನಿಕ ಲಕ್ಷಣಗಳ ಜೊತೆಗೆ ಕೈಕಾಲು ಶಕ್ತಿಗುಂದುವುದು, ದೇಹಾಯಾಸ, ನಿಶ್ಶಕ್ತಿ, ಕೊರಳು ಬಲಹೀನವಾದಂತೆ ಕಾಣಿಸಿಕೊಂಡು ತಲೆಚಾಚಿ ಮಲಗಬೇಕೆನ್ನುವ ಆಸೆಯುಂಟಾಗುವುದು ಮುಖ್ಯವಾಗಿದೆ. ರೋಗಿಯ ಕಣ್ಣು ಬೊಂಬೆ ಕಿರಿದಾಗುತ್ತದೆ. ಅವನಿಗೆ ಮಾತಾಡಲಿಕ್ಕೂ, ನುಂಗಲಿಕ್ಕೂ ತೊಂದರೆ ಕಾಣಿಸಿಕೊಳ್ಳುತ್ತದೆ. ಅವನ ಕಟವಾಯಿಯಿಂದ ಜೊಲ್ಲು ಸುರಿಯತೊಡಗುತ್ತದೆ. ಕ್ರಮೇಣ ಉಸಿರಾಟದ ತೊಂದರೆಯೂ, ವಾಂತಿ–ವಾಕರಿಕೆಗಳೂ, ವಿವಿಧಾಂಗಗಳಿಂದ ರಕ್ತಸ್ರಾವವೂ ಉಂಟಾಗಿ ಸಾವು ಸಂಭವಿಸಬಹುದು"[೨೩]. ಆದಕಾರಣ ಹಾವು ಕಡಿತಕ್ಕೆ ಜಾಗ್ರತೆಯ ಚಿಕಿತ್ಸೆ ಅವಶ್ಯಕ. ಅದಿಲ್ಲದೆ ವಿಷವು ದೇಹವನ್ನೆಲ್ಲ ವ್ಯಾಪಿಸಿಕೊಂಡುಬಿಡುತ್ತದೆ. ಆಗ ಚಿಕಿತ್ಸೆ ನೀಡಿದರೆ ಪ್ರಯೋಜನವಾಗುವುದಿಲ್ಲ. ಈ ನಿಟ್ಟಿನಲ್ಲಿ ಶಾಸ್ತ್ರಜ್ಞರು ಕೊಡುವ ವಿವರಣೆ ಸೂಕ್ತವಾಗಿ ತೋರುತ್ತದೆ.

ಹಾವು ಕಚ್ಚಿದ ವಿಷ ಪರಿಹಾರಕ್ಕೆ ಕೆಲವು ಮಂತ್ರಗಳ ಮೂಲಕ ಉಪಶಮನ ಮಾಡಬಹುದು ಎಂದು ಶಾಸ್ತ್ರಕಾರ ಮಂಗರಾಜ ಹೇಳಿದ್ದು ಹೀಗಿದೆ; 'ಎಡಗೈ ಹೆಬ್ಬೆರಳಿನಿಂದ ಹ್ರಾಂ ಎಂಬಕ್ಷರವನ್ನು ಬರೆದು, ಕ್ರಮವಾಗಿ ಹ್ರೀಂ ಹ್ರೂಂ ಹ್ರೌಂ ಹ್ರಃ ಎಂಬಕ್ಷರಗಳನ್ನು ಬೆರಳಿನಿಂದ ಬರೆಯಬೇಕು. (೪–೫) ವಿಷ

'ಪರಿಹಾರವಾಗುವುದು. ಹಾಗೂ ಓಂ ನಮೋ ಭಗವತೇ ಪಾರ್ಶ್ವತೀರ್ಥಕರಾಯ ಸಂ ಹಂ ಸಃ (ಮಹಾಹಂಸಃ, ಪದ್ಮಹಂಸಃ, ಶಿವಹಂಸಃ, ಕೊಹಂಸಃ) ಊಂ ಕ್ರಹಂಸಃ ಝಂ ಝಿಂ ಹಂಸಃ ಕ್ಷಿಪ ಮಹಾವಿಷಂ ಭಕ್ಷ ಹೂಂ ಫಟ್ ಸ್ವಾಹಾ' (ಮಂತ್ರ ೪-೫೭) ಎಂಬ ಅನೇಕ ಮಂತ್ರಗಳಿಂದ ಹಾವಿನ ವಿಷವನ್ನು ಹೋಗಲಾಡಿಸಬಹುದು ಎಂದು ಹೇಳಿರುವನು. ಚಾವುಂಡರಾಯ ಕೆಲವು ಮಂತ್ರಗಳನ್ನುಚ್ಚರಿಸುವುದರ ಮೂಲಕ ಹಾವು ಕಚ್ಚಿದವನ ಮೇಲೆ ನೀರು ಚಿಮುಕಿಸುವ ಮೂಲಕ ವಿಷವನ್ನು ಶಮನಮಾಡಬಹುದು ಎಂದಿರುವ ಮಾತುಗಳು ವಿಚಾರಾರ್ಹ. ಚಾವುಂಡರಾಯ ಲೋಕೋಪಕಾರದಲ್ಲಿ ವಾಯುಮಂತ್ರದಲ್ಲಿ 'ಓಂ ಹ್ರೀಂ ವಃ' ಎಂಬೀ ಬೀಜಮಂತ್ರಗಳಿಂದ ಉದಕವನ್ನು ಮಂತ್ರಿಸಿ ದಷ್ಟನ ಮುಸಡ ಮೇಲೆ ತಳಿಯಲೊಡನೆ ಆತ ಕಣ್ತೆರೆದು ನೋಡಿದರೆ ಬದುಕುತ್ತಾನೆ. 'ಓಂ ಪ್ರಂ ಸಃ ಪ್ಲವಶಃ ಪ್ಲಯವಶಃ' ಎಂಬ ಗರುಡ ಮಂತ್ರವನ್ನು ಪಠಿಸಿ ನೀರು ಚಿಮುಕಿಸಿದಾಗ ರೋಗಿ ಅವಯವಗಳನ್ನು ಆಡಿಸುತ್ತ ಮಿಡುಕಿ ಬಿಸುಸುಯ್ದರೆ ಇನ್ನೂ ಒಳಿತು. 'ಓಂ [ವ್ಯಾಂ] ಹಂ ಸಃ, "ಪ್ರವಶಃ" [ಓಂ] ಪ್ಲಾಯುವಶಃ' ಎಂಬ ಗಾರುಡ ಗಗನ ಮಂತ್ರಗಳಿಂದ ಅಭಿಮಂತ್ರಿಸಿದ ಜಲವನ್ನು ದಷ್ಟನಿಗೆ ಕುಡಿಸಿದಾಗ ಅವನು ವಾಂತಿ ಮಾಡಿದ ಪಕ್ಷದಲ್ಲಿ ಖಂಡಿತ ಬದುಕುವುದಿಲ್ಲವೆಂದು ತಿಳಿಯಬೇಕಂತೆ. (೧೦-೧೦,೧೧,೧೨). ಮಂತ್ರಕ್ಕೂ ವಿಷಚಿಕಿತ್ಸೆಗೂ ಯಾವುದೇ ಬಗೆಯ ವೈಜ್ಞಾನಿಕ ಸಂಬಂಧ ಇಲ್ಲವೆಂದು ಅನಿಸುತ್ತದೆ. ಆದರೂ ಇಂದಿಗೂ ಕೆಲವರಲ್ಲಿ ಮಂತ್ರಶಕ್ತಿಯಿಂದಲೇ ಹಾವು ಕಡಿದವರನ್ನು ಬದುಕುಳಿಸಬಹುದೆಂಬ ನಂಬಿಕೆಯಿದೆ. ಒಂದು ಅಭಿಪ್ರಾಯದ ಪ್ರಕಾರ "ಇಂದಿಗೂ ಸರ್ಪಚಿಕಿತ್ಸೆಯನ್ನು ಕೇವಲ ಮಂತ್ರಬಲದಿಂದಲೇ ವಾಸಿ ಮಾಡುತ್ತಿರುವುದನ್ನು ನೋಡುವಾಗ ವಿಜ್ಞಾನಕ್ಕೆ ಮೀರಿದ ಯಾವುದೇ ಒಂದು ಶಕ್ತಿ ಇದೆ...ಸರ್ಪ ಚಿಕಿತ್ಸೆಯಲ್ಲಿ ಮಣಿ, ಮಂತ್ರ, ಔಷಧಗಳ ಪ್ರಯೋಗವೂ ರೂಢಿಯಲ್ಲಿದೆಯಲ್ಲದೆ ಅದು ಪೂರ್ಣ ಯಶಸ್ವಿಯೂ ಆಗಿದೆ"[೪೪] ಎನ್ನಲಾಗುತ್ತದೆ.

ಸಾಮಾನ್ಯವಾಗಿ ಔಷಧ ಪ್ರಯೋಗದಿಂದ ಸರ್ಪಮುಟ್ಟಿದವರನ್ನು ಬದುಕಿಸುವುದು ಸಾಧ್ಯ. ಆದರೆ ಮಣಿ ಮಂತ್ರಗಳ ವಿಚಾರದ ಬಗ್ಗೆ ಹಾಗೆ ಹೇಳಿರುವುದರ ಸತ್ಯಾಸತ್ಯತೆಯನ್ನು ತಿಳಿಯಬೇಕು. ಹಾವುಗಳಲ್ಲಿ ನಾಗರಹಾವು, ಮಂಡಲಹಾವು, ಕೆಟ್ಟಹಾವು ಮುಂತಾದ ಕೆಲವು ಹಾವುಗಳು ಮಾತ್ರ ವಿಷಪೂರಿತ. ಆದರೆ ಎಲ್ಲಾ ಹಾವುಗಳು ವಿಷಪೂರಿತ ಎನ್ನುವ ನಂಬಿಕೆ ಹಲವರಲ್ಲಿದೆ. ಸಾಮಾನ್ಯವಾಗಿ ಯಾವುದೇ ಪ್ರದೇಶದಲ್ಲಿ ವಿಷವಿಲ್ಲದ ಹಾವುಗಳೇ ಹೆಚ್ಚು. ಹಾಗಾಗಿ ಕಚ್ಚಿದ ಹಾವು ವಿಷಪೂರಿತವಾಗಿಲ್ಲದಿದ್ದರೆ, ಕಚ್ಚಿಸಿಕೊಂಡ ವ್ಯಕ್ತಿ ಬದುಕುವುದು ಖಚಿತ. ಮಂಗರಾಜ ಇನ್ನೊಂದು ಕ್ರಮವನ್ನು ಹೇಳಿದ್ದು ಹೀಗಿದೆ; 'ಕಂ॥ಕ್ರಮದೋಂ ನಮೋ ಭಗವತಿ। ಪ್ರಮುಕಾಕ್ಷರಮಂ ಜಪಂಗೆ[ಯಲ್ ನೀಂ] ನೂಱೆಂಟಮರ್ದಿರೆ ಬಟಿಯಂ ತಾಡಿಸು। ಢಮರುಗಮಂ ದಷ್ಟಪಾರ್ಶ್ವದೊಳ್ ಸಾಕ್ರೋಶಂ ಓಂ ನಮೋ ಭಗವತೀ ಎಂಬ ಪ್ರಮುಖಾಕ್ಷರಗಳನ್ನು ಕ್ರಮವಾಗಿ ನೂರೆಂಟು(೪-೪೯) ಬಾರಿ ಜಪಿಸಬೇಕು. ಅಲ್ಲದೆ ದಷ್ಟನ ಪಕ್ಕದಲ್ಲಿ ಕ್ರೋಶ ಢಮರುಗವನ್ನು ಬಾರಿಸಬೇಕು. ಹಾಗೂ ಮಂತ್ರ-'ಓಂ ನಮೋ ಭಗವತಿ ವೃದ್ಧ ಗರುಡಾಯ ಸರ್ಪ ವಿಷನಾಶಿನ ಛಿಂದಿ ಛಿಂದಿ ಗೃಹ್ಣ, ಭಗವತಿ ವಿಧ್ಯೆಹರ ಹೂಂ ಫಟ್‌ಸ್ವಾಹಾ' ಈ ಮಂತ್ರವನ್ನು ನೂರೆಂಟು ಬಾರಿ ಜಪಿಸುತ್ತ ಹಾವು ಕಡಿದವರ ಪಕ್ಕದಲ್ಲಿ ಹೀಗೆ ನುಡಿಯಬೇಕು. 'ಎಲೈ ನಿನ್ನ ಗೋವುಗಳನ್ನು ಕಳ್ಳರು ಓಡಿಸಿಕೊಂಡು ಹೋದರು, ಅಯ್ಯೋ ಏಳು ಎಂದು ನುಡಿಸಲು ಬಲಗಾಲಿನ ಮೂಲಕ ವಿಷವಿಳಿದು ದಷ್ಟನು ಎದ್ದು ಕುಳಿತು, ನಂತರ ನಡೆಯುವನು (೪-೫೦). ಎಂದಿರುವಲ್ಲಿ ಹಾವು

ಕಚ್ಚಿದಾಗ ಅದು ವಿಷಹಾವು ಆಗದೇ ಸಾಮಾನ್ಯ ಹಾವು ಕಚ್ಚಿದಾಗ ಬಯದಿಂದಲೇ ಸಾಯುವ ಸಾಧ್ಯತೆಗಳು ಇರುತ್ತದೆ. ಅಂಥ ಸಂದರ್ಭದಲ್ಲಿ ಮಂಗರಾಜ ಹೇಳಿದ ಮಾತನ್ನು ಹೇಳಿದರೆ ಹಾವು ಕಡಿದವನು ಮಂತ್ರದಿಂದಲೇ ಹಾವಿನ ವಿಷ ಪರಿಹಾರವಾಯಿತು ಎಂದು ನಂಬಲಾಗುತ್ತದೆ.

ಅಂತೂ ಹಾವು ಯಾವುದೇ ಇರಲಿ ಅದು ಕಚ್ಚಿದ ತಕ್ಷಣವೇ ಉದ್ರೇಕಗೊಳ್ಳದೆ ಶಾಂತವಾಗಿದ್ದು, ಪ್ರಥಮ ಚಿಕಿತ್ಸೆ ನಡೆಸಬೇಕಾದದ್ದು ಅತ್ಯಗತ್ಯ. ಆ ಬಗ್ಗೆ ಚಾವುಂಡರಾಯ ಕೊಡುವ ಮಾಹಿತಿ ತುಂಬ ಅರ್ಥ ಪೂರ್ಣವಾಗಿದೆ.

ಪಾವು ಕೊಳೆ ಕರ್ಣಮಲಮಂ।
ತೀವುಗೆ ಮೇಣ್ ಕೊಯ್ದು ಕೆಳಗೆ ಪಿಂಡುಗೆ ರಕ್ತ॥
ಸ್ರಾವಂ ಮಾಡುಗೆ ಚುರ್ಚುಗೆ।
ನೀವುಗೆ ವಿಷಹರಣ ಮಲ್ತೆ ತಾತ್ಕಾಲಿಕದೊಳ್॥ (೧೦-೧೩)"[೬೫]

ಹಾವಿನ ಕಡಿತಕ್ಕೆ ಒಳಗಾದ ವ್ಯಕ್ತಿ ಕೂಡಲೇ ಕಿವಿಯ ಗುಗ್ಗೆ ತೆಗೆದು ಕಣ್ಣಿಗೆ ಹಚ್ಚಿಕೊಳ್ಳಬೇಕು. ಇಲ್ಲವೇ ಕಚ್ಚಿದ ಜಾಗವನ್ನು ಬಿಟ್ಟು ಮೇಲಿಂದ ಕೆಳಮುಖವಾಗಿ ತಿಕ್ಕಿ ಎರಡು ಕಟ್ಟುಗಳನ್ನು ಹಾಕಬೇಕು. ವಿಷವಿಳಿದ ಸ್ಥಳದಲ್ಲಿ ಗಾಯಮಾಡಿ ಹಿಸುಕಿ ವಿಷಯುಕ್ತ ರಕ್ತವನ್ನು ಹೊರ ಹಾಕಬೇಕು. ಗಾಯದ ಮುಖವನ್ನು ನೀವುತ್ತ ವಿಷವೇರದಂತೆ ಮಾಡಬೇಕು. ಅಲ್ಲದೆ ಕಾದ ಕಬ್ಬಿಣದಿಂದ ಆ ಗಾಯವನ್ನು ಸುಡಬೇಕು. ಈ ಚಿಕಿತ್ಸಾ ಕ್ರಮವನ್ನು ತಕ್ಷಣವೇ ನಡೆಸುವುದರಿಂದ ವಿಷದ ವೇಗ ಹೆಚ್ಚದೆ ತಾತ್ಕಾಲಿಕ ಪರಿಹಾರ ದೊರೆಯುತ್ತದೆ. ವಾಸ್ತವವಾಗಿ ಹಾವು ಕಡಿದಾಗ ತಕ್ಷಣ ಮಾಡಬಹುದಾದ ವಿಧಾನ ಇದೊಂದೆ. ಇದು ಇಂದಿಗೂ ಸಹ ಜನಪದರಲ್ಲಿ ಕಂಡುಬರುತ್ತದೆ. ಕಿವಿ ಗುಗ್ಗೆ ಹಚ್ಚುವ ಕ್ರಮದ ಹೊರತಾಗಿ ಉಳಿದಂತೆ ಇದೇ ಕ್ರಮವನ್ನು ಅಲೋಪಥಿ ವೈದ್ಯ ವಿಜ್ಞಾನದಲ್ಲಿಯೂ ಅನುಸರಿಸಲಾಗುತ್ತದೆ.

ಖಗೇಂದ್ರಮಣಿ ದರ್ಪಣದಲ್ಲಿ ಇನ್ನೂ ಕೇಲವು ಗಿಡಮೂಲಿಕೆಗಳಿಂದ ಸರ್ಪವಿಷ ಪರಿಹಾರ ಕುರಿತು ಸೂಚಿಸಿದ್ದು ಹೀಗೆ; ಬೆಳಗಾರ ಮುಸಲೀಕಂದಗಳನ್ನು ನೀರಿನೊಡನೆ ಕುಡಿಸಲು ಇಲ್ಲವೆ ತಾವರೆಬೇರು ಬೆಳುಗಾರಗಳನ್ನು ಕೊಡಲು ಹಾವಿನ ವಿಷ ಆ ಕ್ಷಣವೆ ನಿವಾರಣೆಯಾಗುವುದು (೫-೨೫). ಮಸಲಿಕಂದ ಕಟುಕರೋಹಿಣಿಗಳಿಂದ ಸರ್ಪ ಕಚ್ಚಿದ ವಿಷ ಪರಿಹಾರವಾಗುವುದು; ಅಸಾಧ್ಯವೆನಿಸಿದ ವಿಷಗಳನ್ನು ಶಮನ ಮಾಡುವುದೆಂದು ಕವಿಕಮಲಗಳಿಗೆ ಭಾಸ್ಕರನಂತಿರುವವರ ಅಭಿಪ್ರಾಯವಾಗಿದೆ(೫-೪೦). ಕಹಿ ಸೋರೆಯ ಬೇರನ್ನು ಅದರ ಎಲೆಯ ರಸದಿಂದರೆದು ಗೋಮೂತ್ರದೊಡನೆ ಲೇಪಿಸಲು ಮತ್ತು ಕುಡಿಸಲು ವಿಷಪರಿಹಾರ, ಕೇಳು ವಿವೇಕಚೂಡರತ್ನಾ(೫-೪೧). ಸುರದಾರು ಎಕ್ಕೆ ಲಾಂಗಲಿ ಕರವೀರ ಚಿತ್ರಮೂಲಗಳನ್ನು ಹದವಾಗಿ ಅರೆದು ದಷ್ಟನಿಗೆ ಕುಡಿಸಲು ವಿಷನಿವಾರಣೆ, ಬುಧಬಂಧುವೇ ಕೇಳು(೫-೪೨). ಹಿಪ್ಪಲಿ ಶೃಂಗವೇರ(ಶುಂಠಿ) ಮೆಣಸು ಮೊಸರು ಹೊಸಕೊಷ್ಠ ಬೆಣ್ಣೆ ಜೇನುತುಪ್ಪ ಸೈಂಧವಗಳನ್ನು ಕೂಡಿಸಿದ ಔಷಧವನ್ನು ಮೊಸರು ಮಜ್ಜಿಗೆಯೊಡನೆ ಕುಡಿಸಲು ಕಾಳಸರ್ಪದಿಂದಾದ ವಿಷವು ನರದಿಂದ ದೂರವಾಗುತ್ತದೆ, ಬುಧೋತ್ತಮಾ(೫-೪೩). ಗಿರಿಕರ್ಣಿಕೆಯನ್ನು ಅಂಬಿಲದೊಡನೆ ಸೇವಿಸಲು ಸರ್ಪವಿಷವೂ ಮತ್ತು ಗಡೂಚಿಯನ್ನು ಅರೆದು ಅಂಬಿಲದೊಡನೆ ತೆಗೆದುಕೊಳ್ಳಲು ವಿಷವೂ ಪರಿಹರ (೫-೪೪). ಮೂರು ಪೊಂಪಣ (ಚಿನ್ನದ ಹಣ) ತೂಕವಾಗಿರುವಂತೆ ತೂಗಿ ಕೈಯಿಂದ ಗುಳಿಗೆ ಮಾಡಿ ಸರ್ಪದಷ್ಟನಿಗೆ ಪಾನ ನಸ್ಯ ಲೇಪನ ವಿಧಿಯನ್ನು

ಮಾಡಬೇಕು. ಇದು ಶ್ರೇಷ್ಠವಾದ ಔಷಧವೆಂದು ಹಿರಿಯರು ಹಿಂದೆ ಹೇಳಿದರು; ಅದನ್ನು ಸಂಗ್ರಹಿಸುವುದು ಯೋಗ್ಯವೆಂದು ತಿಳಿದು ಲೋಕಕ್ಕೆ ಸದ್ಗುಣ ಸಂಪನ್ನನಾದ ಮಂಗರಾಜನು ಹೇಳಿದನು (೫-೪೭,೪೮). ಹೀಗೆ ಗಿಡಮೂಲಿಕಾ ಚಿಕಿತ್ಸೋಪಾಯಗಳನ್ನು ಮಂಗಾರಾಜ ಹೇಳಿರುವನು. ಇವುಗಳನ್ನು ವೈದ್ಯರು ಪರೀಕ್ಷೆಗೆ ಒಳಪಡಿಸಬೇಕು. ಏಕೆಂದರೆ ಇವುಗಳು ಅತ್ಯಂತ ಸರಳವಾಗಿ ದೊರೆಯುವ ಮೂಲಿಕೆಗಳು, ಗೃಹೋಪಯೋಗಿ ವಸ್ತುಗಳು ಇರುವುದರಿಂದ ಇವುಗಳು ಪರೀಕ್ಷಾರ್ಹವಾಗಿವೆ.

ಹಾವಿನ ಬಳಿಕ ಮತ್ತೊಂದು ಅಪಾಯಕಾರಿ ವಿಷ ಜಂತುವೆಂದರೆ ಚೇಳು. ಅದು ಕುಟುಕಿದಾಗ ಕೊಂಡಿಯಿಂದ ಹೊರಸೂಸುವ ವಿಷವು ಭಯಂಕರ ವೇದನೆಯನ್ನೂ ಕೆಲವೊಮ್ಮೆ ಪ್ರಾಣಾಪಾಯವನ್ನೂ ತಂದೊಡ್ಡಬಲ್ಲದು. ಅದಕ್ಕಾಗಿ ಪ್ರಾಚೀನ ಕಾಲದಿಂದಲೂ ಚೇಳಿನ ವಿಷ ಹತ್ತಿಕ್ಕಲು ಹಲವು ಬಗೆಯ ಅನುಪಾನ ಲೇಪನಾದಿ ಔಷಧಗಳು ಬಳಕೆಯಲ್ಲಿವೆ. ಈ ಪರಂಪರೆಯಿಂದ ಪ್ರಭಾವಿತರಾದ ಶಾಸ್ತ್ರಜ್ಞರು ತಮ್ಮ ಗ್ರಂಥಗಳಲ್ಲಿ ಚೇಳು ಕಡಿತದ ಲಕ್ಷಣ ಹಾಗೂ ಅದಕ್ಕೆ ಚಿಕಿತ್ಸೆಯನ್ನು ಸೂಚಿಸಿದ್ದಾರೆ. ಚಾವುಂಡರಾಯನು ಚೇಳು ಕುಟುಕಿದಾಗ ಉಂಟಾಗುವ ಪರಿಣಾಮವನ್ನು ವಿವೇಚಿಸಿದ್ದು ಹೀಗಿದೆ;

ಜ್ವರಮಾಕಂಪಮಪಾನವಾಯು ಮಲಮೂತ್ರೋತ್ಸರ್ಜನಂ ಲಿಂಗವಿ।
ಸ್ಫುರಣಂ ಸಾವು ತದುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋಱುಗುಂ॥೨೫॥"[೬೬]

ಮೈನಡುಕವುಂಟಾಗಿ ತೀವ್ರ ಜ್ವರವೇರುವುದು, ಮೈ ಬೆವರುತ್ತಲೂ ಜ್ಞಾನತಪ್ಪಿ ಗಂಟಲೊಣಗಿ ಅತೀವ ಸಂಕಟ ವೇರ್ಪಡುವುದು. ಲಿಂಗ ಬಾಯುವುದು, ಕಣ್ಣು ಮಂಜಾಗುವುದು, ಆಯಾಸ, ವಾಂತಿ-ಬೇದಿ ಮೊದಲಾದ ಉಪದ್ರವಗಳು ಉಂಟಾಗುತ್ತವೆ. ಅದಕ್ಕೆ ಪ್ರತ್ಯೌಷದವಾಗಿ ಚಾವುಂಡರಾಯ ಲೋಕೋಪಕಾರದಲ್ಲಿ 'ಭದ್ರಮುಸ್ತೆ, ಮೆಣಸು, ಶುಂಠಿ, ಅರಿಸಿನ, ಮರದರಿಸಿನ, ಅಕ್ಕಿಹೆಡೆ ಬೇರು, ಕರಿಬೇವಿನ ಕಾಯಿ-ಮೂಲಿಕೆಗಳನ್ನು ಒಟ್ಟಿಗೆ ಗೋಮುತ್ರದಲ್ಲಿ ಅರೆದು ಕಣ್ಣಿಗೆ ಲೇಪಿಸಬೇಕು. ಇಲ್ಲವೆ ಆ ಔಷಧಕ್ಕೆ ಸೈಂಧವಲವಣ ಮತ್ತು ಆಕಳತುಪ್ಪ ಕೂಡಿಸಿಕೊಂಡು ಕುಡಿಯಬೇಕು. ಹಾಗೆಯೇ ಪುನ್ನಾಗ, ಅರಿದಾಳ, ಮಣಿಶಿಲೆ, ಕುಸುಬೆಹೂ, ಗೃಹಗೊಧೆಯ ವಿಷ್ಟಿ(?) ಇವನ್ನೊಂದಾಗಿ ಚೂರ್ಣಿಸಿ, ಎಕ್ಕೆಹಾಲು ಬೆರಸಿ ಮಾಡಿ ಒಣಗಿಸಿದ ಗುಳಿಗೆಯನ್ನು ಉದಕದಲ್ಲಿ ತೇಯ್ದು ಚೇಳು ಕಡಿದ ಗಾಯಕ್ಕೆ ಲೇಪಿಸಿದರೆ ಸಾಕು. 'ನಿಲ್ಲದು ವಿಷಮಂತದುಂ ಪೆಱರನಂಟಿಸೆ ಪತ್ತುಗುಮಾ ಮಹಾವಿಷಂ' ಎಂದಿದ್ದಾನೆ (೧೦-೨೬,೨೭). ಆದರೆ ವಿಷ ಮತ್ತೊಬ್ಬರಿಗೆ ಅಂಟುವುದು ಸಾಧ್ಯವೇ ಎಂಬ ಸಂದೇಹ ಇಲ್ಲಿ ಮೂಡಬಹುದು. ಸಾಮಾನ್ಯವಾಗಿ ಹಾವು ಚೇಳು ಕಡಿತಕ್ಕೆ ಚಿಕಿತ್ಸೆ ಮಾಡುವ ವ್ಯಕ್ತಿಗೆ ಕೈಯಲ್ಲಿ ಯಾವುದೇ ಗಾಯಗಳಿರಬಾರದು. ಹಾಗಿದ್ದಲ್ಲಿ ವಿಷಜಂತು ಕಡಿಸಕೊಂಡವನ ಗಾಯದಲ್ಲಿಯ ವಿಷವು ಅತಿ ಜಾಗ್ರತೆಯಾಗಿ ಚಿಕಿತ್ಸಕನ ಶರೀರದಲ್ಲಿ ವ್ಯಾಪಿಸಿ ಆತನನ್ನು ತೊಂದರೆಗೀಡುಮಾಡುತ್ತದೆ. ಚಾವುಂಡರಾಯ ಈ ಬಗೆಯ ಎಚ್ಚರಿಕೆಯನ್ನು ಕೊಡುವ ಉದ್ದೇಶದಿಂದ ಆ ಅಂಶವನ್ನು ಪ್ರತಿಪಾದಿಸಿದ್ದಾನೆಂಬುದು ಗಮನಾರ್ಹ. ಇನ್ನೂ; ಕೆಂದೇಳು ಕಚ್ಚಿದ ಪಕ್ಷದಲ್ಲಿ ಗುಗ್ಗಳದ ಧೂಪದ ಹೊಗೆ ಕೊಡಬೇಕು. ಎಕ್ಕೆಯ ಹಣ್ಣೆಲೆಯನ್ನು ತುಪ್ಪದೊಂದಿಗೆ ಬೇಯಿಸಿ ಕುಟುಕಿದ ಜಾಗಕ್ಕೆ ಕಟ್ಟಬೇಕು. ಇಲ್ಲದಿದ್ದರೆ ದೀವಿಗೆಯಿಂದ ಸುರಿವ ಬಿಸಿ ಎಣ್ಣೆಯನ್ನು ಆ ಜಾಗಕ್ಕೆ ಹಚ್ಚಬೇಕು. ಈ ಕ್ರಮ ಅನುಸರಿಸಿದರೆ ವಿಷದೋಷ ಇಂಗುವುದು (೧೦-೨೮)'.

ಹಾಗೆಯೇ ಇಲಿ, ಹೆಗ್ಗಣ, ಕೋತಿ, ಹಲ್ಲಿ, ಹುಲಿ, ತೋಳ, ಕರಡಿ, ಕುದರೆ, ನರಿ ಹಾಗೂ ಹುಚ್ಚುನಾಯಿ ಕಡಿತದಿಂದ ಆದ ವಿಷಕ್ಕೂ ಶಾಸ್ತ್ರಜ್ಞರು ಮದ್ದನ್ನು ಹೇಳಿದ್ದಾರೆ. ಅವುಗಳಲ್ಲಿ ಕೆಲವು ಉದಾಹರಣೆಗಳು ಈ ಕೆಳಗಿನಂತೆ ಇವೆ.

**ಮೂರ್ಷಿಕ ವಿಷಕ್ಕೆ (ಇಲಿ):** ಶ್ವೇತ, ಕೃಷ್ಣ, ಅಲಕ್ತಕ, ಕಪಿಲ, ನೀಲಾಭ, ಧೂಮ್ರಾಭ, ಪೀತ, ಪಿಂಗಲ, ಲೂತಿದಂಷ್ಟ, ಮಹಾಪಿಲ, ಕ್ರೊಡಾಸ್ಯ, ದೀರ್ಘಾಸ್ಯ, ಸಂಭೂತ ಕಾವಳ, ದೀರ್ಘಕರ್ಣ, ಕಳಕಂಠ, ರೇಣುಕಾಂಗ, ಪುಚ್ಛವಿಹೀನವೆಂದು ಹದಿನೆಂಟು ವಿಧದ ಇಲಿಗಳನ್ನು ಮಂಗರಾಜ ಖಗೇಂದ್ರಮಣಿಮಣಿ ದರ್ಪಣದಲ್ಲಿ ಗುರುತಿಸಿದ್ದಾನೆ. ಇವುಗಳು ಕಚ್ಚಿದಾಗ-ನವೆ, ದಾಹ, ಜ್ವರ, ಶೂಲೆ, ವಮನ, ಭ್ರಾಂತಿ, ಮರುಕ ಜೊಲ್ಲು ಸುರಿಯುವುದು, ಅತಿಯಾದ ಬಳಲಿಕೆ, ಚಳಿ ಉಂಟಾಗುತ್ತದೆ. ಇದಕ್ಕೆ ಮದ್ದು-'ಸುಲಲಿತವಾದ ಸಿಂಧುವಾರ, ಶ್ರೇಷ್ಠ ನೀಲಿ, ಹೆಗ್ಗುಳ್ಳ ಎಕ್ಕದ ಬೇರು ಹಿಪ್ಪಲಿ ಮಿಡಿನಾಗರ ಬಿಳಿಯ ಪುನರ್ನವಿ ಈ ಎಲ್ಲವನ್ನು ಕೂಡಿಸಿ ನೀರಿನಲ್ಲಿ ಅರೆದು ಕುಡಿಸಲು ಬಹುಬಣ್ಣದ ಇಲಿ ಹೆಗ್ಗಣಗಳ ವಿಷಗಳು ನಿವಾರಣೆಯಾಗುವವು(೧೨-೯).

**ಹುಲಿ ಕಚ್ಚಿದ ವಿಷಕ್ಕೆ :** ಹಾಲೆಯ ಎಲೆ ಮೆಣಸುಗಳನ್ನು ಬೆರಸಿ ಮೂರು ದಿನವಿಟ್ಟು, ಅನಂತರ ಅದನ್ನು ಅರೆದು ಹಚ್ಚಲು, ಇಲ್ಲವೆ ಮೊಳಗೆಂಬ ಮರದ ಬೇರನ್ನೂ ಐದೆಲೆ ನಾಗನ ಎಲೆಗಳನ್ನು ಮೂರು ದಿವಸ ಹಚ್ಚಲು ವಿಷ ಪರಿಹಾರವಾಗುವುದು (೧೩-೬). ಎರಡರಿಸಿನ ಜಾತುಗಳನ್ನು ಅರೆದು ಹುಲಿಯ ಹಲ್ಲು ಮತ್ತು ಉಗುರುಗಳಿಂದಾದ ಗಾಯಗಳಿಗೆ ಹಚ್ಚಲು ವಿಷನಿವಾರಣೆ (೧೩-೯). ನಿಂಬೆಯ ಎಲೆ, ಸೊಗದೆ ಅಂಗುರು ಹಾಲೆಸೊಪ್ಪು ಬಂಜೆ ಮಡುವಾಗಲು ಭದ್ರಮುಸ್ತೆ ಬಿಳಿಯ ಗಣಜಿಲೆಗಳನ್ನು ಸೇರಿಸಿ ನಿಂಗೆಹುಳಿಯಿಂದ ಹಚ್ಚಲು ಹುಲಿ ಕಚ್ಚಿದ ಗಾಯ ಬೇಗನೆ ಗುಣವಾಗುವುದು(೧೩-೧೧)"[೬೬].

**ಕರಡಿಯ ವಿಷಕ್ಕೆ :** ಶ್ರೇಷ್ಠವೆನ್ನಿಸಿದ ಕೊಗ್ಗಿ ಲಕ್ಷಿ (ದೊಡ್ಡನೆಲದಾವರೆ, ಅರಿಸಿನ) ಪುನರ್ನವಿ ಈ ಮೂರನ್ನು ಬೆರಸಿ ಕಲ್ಲಿನಲ್ಲಿ ಹಾಕಿ ಅರೆದು ತುಗ್ಗಿಲು ಅಣಬೆಯ ರಸ ಅಥವಾ ಶೋಸಿಸಿದ ಶ್ರೇಷ್ಠ ಮಜ್ಜಿಗೆಯಲ್ಲಿ ಸೇವಿಸಲು ಮಾನವನಿಗೆ ಕರಡಿಯ ಹಲ್ಲು ಮತ್ತು ಉಗುರುಗಳಿಂದಾದ ವಿಷ ಬೇಗನೆ ನಿವಾರಣೆಯಾಗುತ್ತದೆ(೧೩-೧೮). ಬರಿವದಣೆಯ ಕೆಂಪು ಹರುಹೆಯ ಬೇರುಗಳ ಕರಿಯನ್ನೂ ಸುಣ್ಣವನ್ನೂ ಬೆರಸಿ ಹಚ್ಚಲು ಕರಪಿಯ ನಖ ಮುಖದಿಂದಾದ ಹುಣ್ಣುಗಳ ಪರಿಹಾರ (೧೩-೧೯)"[೬೮].

**ಹುಚ್ಚುನಾಯಿ ವಿಷಕ್ಕೆ :** ಕನಕದ ಬೇರು ಸಕ್ಕರೆ ಶ್ರೇಷ್ಠ ಎನ್ನಿಸಿದ ತುಪ್ಪ ಇವುಗಳನ್ನು ಹಾಲಿನಲ್ಲಿ ಕುಡಿಸಲು ಹುಚ್ಚುನಾಯಿ ವಿಷನಾಶವಾಗುವುದು(೧೩-೨೪). ಸಿತಮಾಹಿಷವನ್ನು ತುಪ್ಪ ಸಕ್ಕರೆ ಮತ್ತು ಬೆಲ್ಲದೊಡನೆ ತಿನ್ನುವುದು ಇಲ್ಲವೆ ಸಕ್ಕರೆ ಕುಂಬಳಕಾಯಿಯ ರಸ ಮೆಣಸುಗಳನ್ನು ಸೇವಿಸುವುದರಿಂದ ಹುಚ್ಚನಾಯಿಯ ವಿಷ ನಿವಾರಣೆ(೧೩-೨೬). ಹತ್ತಿಹಣ್ಣು ತುಪ್ಪ ಉತ್ತರಣೆ ಜೇನುತುಪ್ಪಗಳನ್ನು ಇಲ್ಲವೆ ಮತ್ತಿಯಬೇರನ್ನು ನೀರಿನಲ್ಲಿ ಕೊಡಲು ಹುಚ್ಚನಾಯಿಯ ವಿಷ ಪರಿಹಾರ(೧೩-೨೮)"[೬೯].

ಕರಿಉಮ್ಮತ್ತದ ಬೇರು ಅಥವಾ ಎಲೆಯ ರಸವನ್ನು, ಇಲ್ಲವೆ ಅವರೆಕಾಳು, ಸುಣ್ಣ ಕೂಡಿಸಿ ಹುಚ್ಚನಾಯಿ ಕಡಿತಕ್ಕೆ ಚಿಕಿತ್ಸೆಯಾಗಿ ಜನಪದರು ಇಂದಿಗೂ ಬಳಸುತ್ತಾರೆ. ಅಲೋಪಥಿಯಲ್ಲಿ ಹುಚ್ಚುನಾಯಿ ದ್ವಂಶಕ್ಕೆ 'Anti Rabic Serum' ಚುಚ್ಚು ಮದ್ದನ್ನು ನಾಭಿಯ ಸುತ್ತ ೭ ರಿಂದ ೧೪ ದಿನಗಳವರೆಗೆ ಕೊಡುವ ಕ್ರಮವಿದೆ. ಇದು ನಾಯಿ ಕಡಿತಕ್ಕೆ ನಿರ್ದಿಷ್ಟ ಪ್ರತ್ಯೌಷಧ. ಆದರೆ ಮಂಗರಾಜನ ಚಿಕಿತ್ಸೆ ಎಷ್ಟರ ಮಟ್ಟಿಗೆ ಗುಣಕಾರಿ ಎಂಬುದು ನಿರ್ದಿಷ್ಟವಾಗಿ ತಿಳಿಯದೇ ಇದ್ದರು ಪ್ರಾಥಮಿಕ ಚಿಕಿತ್ಸೆಗೆ ಫಲಕಾರಿ.

ಮಂಗರಾಜನ ಖಗೇಂದ್ರಮಣಿದರ್ಪಣಂ ದಲ್ಲಿ ಇದುವರೆಗೂ ವಿಷದಪಡಿಸಿದ ವಿವಿಧ ವಿಷಚಿಕಿತ್ಸೆಗಳಲ್ಲದೆ ನರಿಯ ವಿಷಕ್ಕೆ, ಬೆಕ್ಕಿನ ವಿಷಕ್ಕೆ, ಮುಂಗುಸಿ ವಿಷಕ್ಕೆ, ಮೊಸಳೆಯ ವಿಷಕ್ಕೆ ಹಾಗೂ ಮೀನ, ಏಡಿ, ಕಪ್ಪೆ, ಹಲ್ಲಿ, ಓತಿ, ಗೋಸುಂಬೆ, ಉಡು, ಮೊಲ, ಹಸು, ಇತ್ಯಾದಿ, ಪ್ರಾಣಿ, ಜಲಚರ ಪ್ರಾಣಿಗಳಿಂದ ಉಂಟಾಗುವ ವಿಷಕ್ಕೆ ಚಿಕಿತ್ಸೋಪಾಯಗಳನ್ನು ಮಂಗರಾಜ ಹೇಳಿದ್ದಾನೆ. ಪ್ರಾಚೀನ ಕಾಲದಲ್ಲಿ ಮನುಷ್ಯ ಕಾಡು ಮೇಡುಗಳಲ್ಲಿ ವಾಸವಾಗಿದ್ದ. ಆಗ ಅನೇಕ ಪ್ರಾಣಿಗಳಿಂದ ತೊಂದರೆಗೆ ಒಳಗಾಗುತ್ತಿದ್ದ ಅವುಗಳು ಕಚ್ಚಿದಾಗ ಸಹಜವಾಗಿ ತನ್ನ ಸುತ್ತಲಿನ ಮೂಲಿಕೆಗಳನ್ನೆ ಬಳಸಿ ವಿಷಪರಿಹಾರವನ್ನು ಕಂಡುಕೊಂಡದ್ದು ಸಹಜ. ಆದರೆ ಕೆಲ ಸಂದರ್ಭದಲ್ಲಿ ಮಂಗರಾಜ ಹೇಳಿದಂತೆ ಗಾಯಕ್ಕೆ ಹಚ್ಚಲು ಔಷದಿ ಹೇಳದೇ ನಸ್ಯವನ್ನು ಮಾತ್ರ ಹೇಳಿರುವುದು ಸಂಶಯಕ್ಕೆ ಎಡೆಮಾಡಿಕೊಡುತ್ತದೆ. ಹಾಗೂ ಇಂದು ಈ ತೆರನಾದ ಕಾಡು ಪ್ರಾಣಿಗಳಿಂದ ಅನಾಹುತ ಸಂಬವಿಸುವುದು ಕಡಿಮೆ. ಆದರೂ ಈ ಎಲ್ಲ ಚಿಕಿತ್ಸಾ ಕ್ರಮಗಳನ್ನು ಅನಿವಾರ್ಯ ಸಂದರ್ಭದಲ್ಲಿ ಬಳಕೆಗೆ ಉಪಯೋಗಿಸಲು ಸಾಧ್ಯವಾಗುಬಹುದು. ಇವನ್ನು ಪರೀಕ್ಷಿಸಿ ತಿಳಿಯುವುದು ಅನಿವಾರ್ಯ. ಆದರೆ ಮಂಗರಾಜ ಹೇಳಿದ ಕೆಲ ಮೂಲಿಕೆಗಳು ನಮ್ಮ ನಾಡಿನಲ್ಲಿ ಲಭ್ಯವಾಗದೇ ಇರುವ ಮೂಲಿಕೆಗಳಿವೆ. ದೇಶಿ ವೈದ್ಯಪದ್ಧತಿಯಲ್ಲಿ ಔಷಧಕ್ಕಾಗಿ ಬಳಸುವ ಗಿಡಮೂಲಿಕೆಗಳನ್ನು ಆಯಾ ಭೌಗೋಳಿಕ ಪರಿಸರದಲ್ಲಿ ಲಭ್ಯವಿದ್ದ ಸಸ್ಯಗಳನ್ನು ಬಳಸಿಕೊಳ್ಳುವುದು ವಾಡಿಕೆ. ಪ್ರಾದೇಶಿಕವಾಗಿ ಭಿನ್ನವಾದರೂ ಒಂದೇ ಸಸ್ಯಕ್ಕೆ ಭಿನ್ನ ಹೆಸರಿನಿಂದ ಕರೆಯುವುದು ಕಂಡುಬರುತ್ತದೆ. ಅಲ್ಲದೆ ಒಂದೇ ರೋಗಕ್ಕೆ ತಮ್ಮ ಪರಿಸರದಲ್ಲಿ ಲಭ್ಯವಿದ್ದ ವಿಭಿನ್ನ ಸಸ್ಯಗಳನ್ನು ಬಳಸುವುದು ಕಂಡುಬರುತ್ತದೆ. ಇಲ್ಲಿ ಮಂಗರಾಜ ಖಗೇಂದ್ರಮಣಿಮಣಿ ದರ್ಪಣಂ ದಲ್ಲಿ ಬಳಸಿದ ಗಿಡಮೂಲಿಕೆಗಳು ಹೆಚ್ಚಾಗಿ ಮುಗಳವಳ್ಳಿಯ ಪ್ರದೇಶವುಗಳಾಗಿವೆ.

ಮಂಗರಾಜ ಹೇಳುವ ಕೃತ್ರಿಮ ವಿಷದಿಂದಾಗುವ ರೋಗಲಕ್ಷಣಗಳು ಅದಕ್ಕೆ ತಕ್ಕ ಚಿಕಿತ್ಸೋಪಾಯಗಳು ಕುತೂಹಲಬರಿಸುವಂತಿವೆ. ಕೃತ್ರಿಮ ವಿಷಗಳು ವಿರಕ್ತನಾದ ಕೆಟ್ಟಸ್ತ್ರೀಯ ದುರ್ಮೋಹದಿಂದ ಕಪಟವೃತ್ತಿಯಿಂದ, ಅನ್ನಪಾನಗಳಲ್ಲಿ, ತಿಂಡಿತಿನಿಸುಗಳಲ್ಲಿ, ಸಕ್ಕರೆ ತುಪ್ಪ ಮೊದಲಾದ ಲೇಹ್ಯಗಳಲ್ಲಿ ಹಾಗೂ ನಾನಾವಿಧ ಜೀವಿಗಳ ವಿಷದಿಂದ, ನಾನಾ ವಿಧ ಧಾತುಪ್ರಯೋಗಳಿಂದ ಅಡಿಕೆ ಮುಂತಾದ ಫಲಗಳಿಂದ ಪಾನದಿಂದ ಅನೇಕ ವಿಧದ ನಖ ಕೇಶಗಳಿಂದ ಕೈಮಸಕು, ಮದ್ದುಗಳಿಂದ ಕೃತ್ರಿಮ ವಿಷಗಳು ಸಂಭವಿಸುತ್ತವೆ. ಹಾಗೂ ಕೆಲವು ಸ್ತ್ರೀಯರು ಪುರುಷರನ್ನು ನಂಬಿಸಿ ಮಾಡುವ ಚುಂಬನದಿಂದಲು ವಿಷಪ್ರಯೋಗ ಮಾಡಬಹುದು ಎನ್ನಲಾಗುತ್ತದೆ. ಕೃತ್ರಿಮ ವಿಷ ತಗುಲಿದಾಗ–ಕೋಪ, ಉಬ್ಬಸ, ಕೆಮ್ಮು, ದಾಹ ಬಳಲಿಕೆ ಮಹಾಚಿಂತೆ, ಮನಸ್ತಾಪ, ಅಜೀರ್ಣ ಇತ್ಯಾದಿ ಲಕ್ಷಣಗಳು ಉಂಟಾಗುತ್ತವೆ. ಸ್ತ್ರೀಯರ ಕೃತ್ರಿಮ ವಿಷದಿಂದ–ವಾಂತಿ, ತಲೆನೋವು ಮಹಾಭ್ರಾಂತಿ, ಶರೀರದಿಂದ ರಕ್ತ ಮೂತ್ರಸ್ರಾವ ಮನಃತಾಪ ಬಳಲಿಕೆಗಳು ತಲೆದೋರುತ್ತವೆ. 'ಕೃತ್ರಿಮ ವಿಷವನ್ನು ಊಟಮಾಡುವ ಸ್ಥಳದಲ್ಲಿ ಮಲಗುವಲ್ಲಿ ಕೂಟದಲ್ಲಿ ಹಿಗೆ ವಿವಿಧ ಸ್ಥಳಗಳಲ್ಲಿ ಹೆಂಡಿರು ಮತ್ತು ಚೇಟಿಯರು ವಿಷವನ್ನಿಕ್ಕಲು ಅದರಿಂದ ಶರೀರವಳಿಯದೇ ಉಳಿಯುವುದಿಲ್ಲವೆಂಬುದು ಅತಿ ಮಹತ್ವದ ವಿಷಯವಾಗಿದೆ' (೧೪-೧೦) ಎಂದು ಹೇಳಿದ್ದಾನೆ. ಕೃತ್ರಿಮ ವಿಷಉಂಟಾದಾಗ ಅದು ಮಂತ್ರತಂತ್ರಗಳಿಂದ ತಿಥಿ ಪಕ್ಷ ಮಾಸ ಆರು ತಿಂಗಳು ನಿವಾರಣೆಯಾಗದೆ ಮೀರಿ ವರ್ಷವಾದರೆ ಆ ಮಾನವನ ಪ್ರಾಣ ತಗೆಯುತ್ತದೆ (೧೪-೧೧) ಎನ್ನಲಾಗಿದೆ.

ಇದಕ್ಕೆ ನಿವಾರಣೋಪಾಯವಾಗಿ ಯಂತ್ರಮಂತ್ರಗಳನ್ನು ಮತ್ತು ಗಿಡಮೂಲಿಕೆ ಮದ್ದುಗಳನ್ನು ಈ ಕೆಳಗಿನಂತೆ ಹೇಳಿರುವನು.

**ಕೈ ವಿಷಕ್ಕೆ:** ಬೇವಿನ ಎಲೆ ವೃಷಭ (ಹೆರಿಗೆಹಾಲೆ) ಪಟೋಲಗಳನ್ನು ಪ್ರತ್ಯೇಕವಾಗಿ ಮಾಗದಿರಸರಾದಲ್ಲಿ ಸೇರಿಸಿದರೆ ಅದಕ್ಕೆ ಎಂಟು ಗುಣಗಳು ಪ್ರಾಪ್ತವಾಗುವುವು. ಅವುಗಳನ್ನು ಕಾಯಿಸಿ ಕಾಲು ಭಾಗ ಉಳಿದಾಗ ಹಸುವಿನ ತುಪ್ಪ ಮತ್ತು ಅದರ ಸುಮ ಅಣಿಲೆಯ ಚೂರ್ಣವನ್ನು ಹಾಲಿ ಅದರರ್ಧ ತುಪ್ಪವುಳಿಯುವಂತೆ ಕಾಯಿಸಿ ಸೇವಿಸಲು ನೀಚರು ಹಾಕಿದ ವಿಷವು ನಿವಾರಣೆಯಾಗುವುದು(೧೪-೩೧,೩೨,೩೩).

ಸಾಮಾನ್ಯವಾಗಿ ಕೃತ್ರಿಮ ವಿಷಕ್ಕೆ ಜೇನುತುಪ್ಪ, ತುಪ್ಪಗಳನ್ನೇ ಔಷಧಗಳಾಗಿ ಹೆಚ್ಚು ಬಳಸುವಂತೆ ಶಿಫಾರಸ್ಸು ಮಾಡಲಾಗಿದೆ. ಇವು ಎಷ್ಟರ ಮಟ್ಟಿಗೆ ಫಲಕಾರಿ ಎಂಬುದನ್ನು ವೈದ್ಯವಿಜ್ಞಾನಿಗಳ ಪ್ರಯೋಗ ಪರೀಕ್ಷೆಯ ಮೂಲಕ ಸಾದಿಸಿತೋರಿಸಬೇಕು.

ಕೃತ್ರಿಮ ವಿಷವಾದಾಗ ರಕ್ಷಣಾರ್ಥವಾಗಿ ಹೇಳಿದ್ದು ಹೀಗಿದೆ; 'ಮೊಲ್ಲೆಯ ಬೇರನ್ನು ತಂದು ರಕ್ಷೆಯನ್ನು ಮಾಡಲು ಕೆಯ್ಮಸಕದವನಿಗೆ ಒಳ್ಳೆಯದು. "ದುಷ್ಟನಿಗ್ರಹಿಯಾದ ಹರಿವಿಷ್ಟರನನ್ನು ಯಂತ್ರಮಧ್ಯದಲ್ಲಿ ಸಂಸ್ಥಾಪಿಸಿ ಅಷ್ಟೋತ್ತರಶತ ಪುಷ್ಪವನ್ನು ಎರಡು ಪಾದಕಮಲದಲ್ಲಿ ಅರ್ಪಿಸು.

ಯಂತ್ರ :

| | | |
|---|---|---|
| ಕ್ರೋಂ | ಕ್ರೋಂ | ಕ್ರೋಂ |
| ಕ್ರೋಂ | ದೇ | ಕ್ರೋಂ |
| ಗ್ರೋಂ | ಗ್ರೋಂ | ಗ್ರೋಂ |
| (ಕ್ರೋಂ) | (ಕ್ರೋಂ) | ಕ್ರೋಂ) |

ವಚನ: ಯಂ ತ್ರಾಧಿಪತಿಗೆ ಪುಷ್ಪವನಿಕ್ಕುವ ಮಂತ್ರಂ ಓಂ ಆಂ ಕ್ರೊಂ ಎಂದರ್ಚಿಸಿ ರಕ್ಷೆಯಿಂ ಕಟ್ಟಲಾ ದರಹಿತ ಬುದ್ಧಿಯಿಂ ಮಾಡಿದ ಕುಟಿಲಂಗಳ್ ಕಿಡುಗುಂ"[೨೦]

ಇಂತಹ ಮಂತ್ರ ಕುರಿತು ಡಾ.ವೀರೇಶ ಬಡಿಗೇರ ಅವರು ಹಲಗೆ ಬಳಪದಲ್ಲಿ; "ಅತಿ ಮಾನುಷ ಶಕ್ತಿಗಳ ಸಂಪರ್ಕ ಹಾಗೂ ನಿಯಂತ್ರಣಕ್ಕೆ ಮಂತ್ರ ವಿದ್ಯೆಯನ್ನು ಮನುಷ್ಯ ಕಂಡಕೊಂಡ. ಮಂತ್ರವೆಂದರೆ ವೇದದಲ್ಲಿರುವ ಛಂದೋಬದ್ಧವಾದ ಪವಿತ್ರ ದೇವತಾ ಸ್ತುತಿ. ಆದರೆ ಸಮುದಾಯದಲ್ಲಿ ಪ್ರಚಲಿತವಿರುವ ಮಂತ್ರ ಮಾತು ಮತ್ತು ನುಡಿಗಳಿಂದ ಕೂಡಿದ ಅಕ್ಷರ ಸಮೂಹವಾಗಿದೆ"(ಪು.೯೨) ಎನ್ನುತ್ತಾರೆ. ವಿಷಜಂತು ಕಡಿತಕ್ಕೊಳಗಾದ ರೋಗಿಯ ಶುಶ್ರೂಷೆಯ ಕ್ರಮಗಳು ಇಲ್ಲಿ ವಿವರವಾಗಿ ಪ್ರತಿಪಾದಿತವಾಗಿಲ್ಲ. ಹಾಗೂ ಔಷಧ ಸೇವನೆಯ ಪ್ರಮಾಣ ಕಾಲಗಳ ಉಲ್ಲೇಖಗಳೂ ಇಲ್ಲ. ಈ ದೃಷ್ಟಿಯಿಂದ ನೋಡಿದಾಗ ವಿಷವೈದ್ಯ ಚಿಕಿತ್ಸೋಪಾಯಗಳನ್ನು ಜನಸಾಮಾನ್ಯರು ತಮಗೆ ಅನುಕೂಲಕ್ಕೆ ತಕ್ಕಂತೆ ಕೊಡುವುದನ್ನು ಶಾಸ್ತ್ರಜ್ಞರು ಅದನ್ನು ಆಗೆ ದಾಖಲಿಸಿದಂತಿದೆ. ಆದರೆ ಈ ಗ್ರಂಥದಲ್ಲಿ ಉಕ್ತವಾಗಿರುವ ಅನೇಕ ವಿಷಯಗಳು ಇಂದಿಗೂ ಜನಸಮುದಾಯದಲ್ಲಿ ಜೀವಂತವಾಗಿವೆ. ಜನಪದ ವೈದ್ಯರು ಅರ್ಬುದ, ಗಂಟು, ಹಳೆಗಾಯ ಕರಗಿಸಲು ಬಿಕ್ಕೆ ಅಂಟು ಮೇಣ ಬಳಸುತ್ತಾರೆ. ಜಾನುವಾರಿಗಂತೂ ಇದು ದಿವ್ಯಔಷಧ. ಅಂದಿನ ಈ ವಿಷ ಔಷಧಗಳು ಪ್ರಯೋಗ ವಿಜ್ಞಾನಕ್ಕೆ ಕೈಗನ್ನಡಿಯಂತಿವೆ.

### ೪.೧.೨. ಪ್ರಾಣಿ ವೈದ್ಯ

ಅನಾದಿಕಾಲದಿಂದಲೂ ಮಾನವ ತನ್ನ ಸುಖಮಯ ಬದುಕಿಗೆ ಒಂದಲ್ಲ ಒಂದು ರೀತಿಯಲ್ಲಿ ಪ್ರಾಣಿಗಳನ್ನು ಅವಲಂಬಿಸಿಕೊಂಡು ಬಂದಿದ್ದಾನೆ; ಬರುತ್ತಿದ್ದಾನೆ. ನಮ್ಮ ದೇಶ ಕೃಷಿಯಾಧಾರಿತವಾದುದು.

ಕೃಷಿಯೇ ನಮ್ಮ ದೇಶದ ಬೆನ್ನೆಲುಬು ಎಂದು ಹೇಳುತ್ತೇವೆ. ಈ ಕೃಷಿಯಲ್ಲಿ ತೊಡಗಲು ಮಾನವನಿಗೆ ಪ್ರಾಣಿಗಳು ಅತ್ಯವಶ್ಯ. ವಸ್ತುಗಳನ್ನು ಸಾಗಿಸಲು ಮತ್ತು ರಕ್ಷಣೆಗಾಗಿ ಪ್ರಾಣಿಗಳಿಗೆ ಮಹತ್ವದ ಸ್ಥಾನವಿದೆ. 'ಪ್ರಾಣಿಗಳಿಲ್ಲದ ಕೃಷಿಕನ ಮನೆ ಆತ್ಮವಿಲ್ಲದ ದೇಹದಂತೆ' ಎಂಬ ಗಾದೆ ಮಾತಿನಂತೆ ತಮ್ಮ ಕೃಷಿ ಕಾರ್ಯಗಳಿಗಾಗಿ ಎತ್ತು ಕೋಣಗಳನ್ನು, ಹಾಲು ಹಯನಗಳಿಗಾಗಿ ಹಸು ಎಮ್ಮೆಗಳನ್ನು, ಆಹಾರಕ್ಕಾಗಿ ಮೇಕೆ ಕುರಿ ಕೋಳಿಗಳನ್ನೂ, ರಕ್ಷಣೆಗಾಗಿ ನಾಯಿ ಬೆಕ್ಕುಗಳನ್ನೂ ಸಾಕುವುದು ಸಾಮಾನ್ಯ. ಹಾಗೂ ಪ್ರಾಚೀನ ಕಾಲದ ಯುದ್ಧ ಸಂದರ್ಭದಲ್ಲಿ ಕುದರೆ, ಆನೆಗಳನ್ನೂ ಸಾಕುತ್ತಿದ್ದರು. ಈ ಎಲ್ಲಾ ಪ್ರಾಣಿಗಳು ಮಾನವನ ನೆರವಿಗೆ ಸಹಾಯಕವಾಗುವುವು. ಆದ್ದರಿಂದ ಅವುಗಳ ಕುರಿತು ಮಾನವನಿಗೆ ಕಾಳಜಿ ಹೆಚ್ಚು. ಮನುಷ್ಯ ತನ್ನೊಳಗಿನ ರೋಗಗಳನ್ನು ಪತ್ತೆ ಹಚ್ಚಿ ಅವುಗಳಿಗೆ ನಿವಾರಣೆಗಳನ್ನು ಕಂಡುಕೊಂಡಂತೆ ತನ್ನೊಂದಿಗೆ ಸಹ ಜೀವನ ನಡೆಸುವ ತನ್ನ ಬದುಕಿನೊಂದಿಗೆ ಒಂದು ರೀತಿಯಲ್ಲಿ ಆಧಾರಸ್ತಂಭಗಳಂತಿರುವ ತನ್ನ ಸಾಕು ಪ್ರಾಣಿಗಳನ್ನು ನೋಡುವುದು ಅನಿವಾರ್ಯ. ಆದುದರಿಂದ ಅವುಗಳು ಅನಾರೋಗ್ಯಕ್ಕೆ ಒಳಗಾದಾಗ ಅವುಗಳ ನಿವಾರಣೆಗೆ ಚಿಕಿತ್ಸಾ ವಿಧಾನವನ್ನು ಅನುಸರಿಸಿದ.

ಪ್ರಾಣಿವೈದ್ಯ ನಿನ್ನೆಮೊನ್ನೆಯದಲ್ಲ. ಅದಕ್ಕೆ ಅದರದೇಯಾದ ಸುದೀರ್ಘ ಇತಿಹಾಸ ಮತ್ತು ಪರಂಪರೆಯಿದೆ. ಅಲ್ಲದೆ ಇತರ ಜಾನಪದ ರೂಪಗಳಂತೆ ಪ್ರಾಣಿವೈದ್ಯದ ಉಗಮ ವಿಕಾಸಗಳು, ಸ್ವರೂಪ ಲಕ್ಷಣಗಳು ಮತ್ತು ತಂತ್ರ ವಿಧಾನಗಳು ಪ್ರಪಂಚದಾದ್ಯಂತ ಒಂದೇ ರೀತಿಯಾಗಿವೆ. "ತಮ್ಮ ಮೊದಲ ಹಸಿವು ಎಂಬ ರೋಗ ನಿವಾರಿಸಿಕೊಳ್ಳಲು ಪ್ರಾಣಿಗಳು ತಮಗೆಟುಕಿದ ನೂರಾರು ಬಗೆಯ ಸೊಪ್ಪುಸದೆ, ಹಣ್ಣು ಹಂಪಲಗಳನ್ನು, ಗೆಡ್ಡೆಗೆಣಸು, ಮಾಂಸಮಡ್ಡಿಗಳನ್ನು ತಿಂದಿರಬೇಕು"[೨೨]. ಪ್ರಾಣಿಗಳ ಜೀವನ ವಿಧಾನ ಅವುಗಳ ಆಹಾರದ ಆಯ್ಕೆ ಮುಂತಾದವುಗಳನ್ನು ಗಮನಿಸುತ್ತಾ ಬಂದ ಮನುಷ್ಯನು, ಅವುಗಳಿಗೆ ಬರುವ ರೋಗ, ರೋಗಕ್ಕೆ ಕೊಡುವ ಚಿಕಿತ್ಸೆಗಳ ಕುರಿತು ನಿಸರ್ಗದಲ್ಲಿ ತನಗೆ ದೊರೆತ ಅನುಭವದ ಮೂಲಕ ಗುರುತಿಸಿಕೊಂಡಿದ್ದಾನೆ. ಉದಾ. ನಾಯಿ ಬೆಕ್ಕುಗಳು ತಮಗೆ ಅಜೀರ್ಣವಾದಾಗ ಇಬ್ಬನಿಯಿಂದ ಕೂಡಿದ ಗರಿಕೆ ಹುಲ್ಲನ್ನು ತಿಂದು ವಾಂತಿ ಮಾಡಿಕೊಳ್ಳುವುದನ್ನು ನೋಡುತ್ತೇವೆ. ದನಕ್ಕೆ ಗಾಯವಾದರೆ ನಾಲಿಗೆಯಿಂದ ನೆಕ್ಕಿ ಗಾಯವನ್ನು ಗುಣಪಡಿಸಿಕೊಳ್ಳುವುದನ್ನು ಕಂಡಿದ್ದೇವೆ. ಹಕ್ಕಿಯೊಂದಕ್ಕೆ ಕಾಲು ಮುರಿದಲ್ಲಿ ಅದು ತನ್ನ ಮುರಿದ ಕಾಲಿಗೆ ಒಂದು ರೀತಿಯ ಮಣ್ಣನ್ನು ಲೇಪಿಸಿಕೊಂಡು ಕಾಲಿಗೆ ಕಟ್ಟನ್ನು ಹಾಕಿಕೊಳ್ಳುತ್ತದೆ. ಇವೆ ಮುಂತಾಗಿ ಪ್ರಾಣಿಗಳು ತಮಗೆ ತಾವೇ ಸ್ವಯಂ ವೈದ್ಯ ಮಾಡಿಕೊಳ್ಳುವ ಕ್ರಮವನ್ನು ಗಮನಿಸಿದರೆ ಪ್ರಾಣಿಗಳ ವೈದ್ಯ ಪರಂಪರೆ ಮತ್ತು ಪ್ರಾಚೀನತೆಯ ಅರಿವು ನಮಗಾಗುತ್ತದೆ. ಅದು ಪ್ರಾಣಿಜೀವಿಗಳಷ್ಟೇ ಹಳೆಯದೆಂಬುದು ದೃಢವಾಗುತ್ತದೆ.

ಪ್ರಾಣಿವೈದ್ಯ ವಾಸ್ತವವಾಗಿ, ನಿಸರ್ಗದ ಸಹಜ ಪ್ರೇರಣೆಯಿಂದ ಅನಿವಾರ್ಯವಾಗಿ ರೂಪಗೊಂಡುದಾಗಿದೆ. ಮನುಷ್ಯ ತನ್ನನ್ನು ರಕ್ಷಿಸಿಕೊಳ್ಳುವ ಜೊತೆಗೆ ತನ್ನ ಪರಿಸರವನ್ನು ಸಂರಕ್ಷಿಸಿಕೊಳ್ಳುವ ಪ್ರವೃತ್ತಿಯನ್ನು ಹೊಂದಿದ ಪರಿಣಾಮವಿದು. ತನ್ನ ಯೋಗಕ್ಷೇಮದೊಡನೆ ಸಾಕುಪ್ರಾಣಿಗಳ ಆರೋಗ್ಯವೂ ಮುಖ್ಯವೆಂಬುದನ್ನು ಕೃಷಿಕ ಗಮನದಲ್ಲಿಟ್ಟುಕೊಂಡಿರುವುದರಿಂದ ಪ್ರಾಣಿವೈದ್ಯ ಹೆಚ್ಚು ಪಾಮುಖ್ಯತೆ ಪಡೆದಿದೆ"[೨೩]. ಮನುಷ್ಯ ವೈದ್ಯಕ್ಕೆ ಜನಪದ ವೈದ್ಯವೇ ಮೂಲವಾದಂತೆ ಪ್ರಾಣಿವೈದ್ಯಕ್ಕೂ ಜನಪದ ವೈದ್ಯವೇ ಮೂಲ. ಮೌಖಿಕವಾಗಿ ಕಂಠಸ್ತದಿಂದ ತಲೆಮಾರಿನಿಂದ ತಲೆಮಾರಿಗೆ ಬಂದ ಪ್ರಾಣಿ ವೈದ್ಯ ಅಕ್ಷರ ಜ್ಞಾನ ಬಂದ ನಂತರ ಹೆಚ್ಚು ಪ್ರಯೋಗದ

ಮೂಲಕ ಬರವಣಿಗೆಯಲ್ಲಿ ಬಂದಿತು. ಬರವಣಿಗೆಯಲ್ಲಿ ಲಭ್ಯವಿದ್ದ ಪ್ರಾಣಿವೈದ್ಯಕ್ಕೆ ಸಂಬಂಧಿದ ವಿಷಯದ ಆಧಾರದಿಂದ ಪ್ರಮುಕವಾಗಿ ಮೂರು ಭಾಗವಾಗಿ ವಿಂಗಡಿಸಲಾಗಿದೆ. ಅವುಗಳು, ಗೋವೈದ್ಯ, ಅಶ್ವವೈದ್ಯ ಮತ್ತು ಗಜವೈದ್ಯ. ಇವುಗಳನ್ನು ಈ ಕೆಳಗಿನಂತೆ ವಿವರವಾಗಿ ವಿಷದಪಡಿಸಲಾಗಿದೆ.

**೪.೧.೨.೧. ಗೋವೈದ್ಯ**

ಪ್ರಾಚೀನ ಕಾಲದಿಂದಲೂ ಗೋವುಗಳಿಗೆ ಅತ್ಯಂತ ಮಹತ್ವದ ಸ್ಥಾನವನ್ನು ಕೊಡಲಾಗಿದ್ದು, ದೇವರು ಎಂದು ಪೂಜಿಸಲಾಗುತ್ತದೆ. ಇಂತಹ ಪಾವಿತ್ರ್ಯ ಹೊಂದಿರುವ ಗೋವುಗಳ ಕುರಿತು ಶಾಸ್ತ್ರಗ್ರಂಥಗಳು ರಚನೆಗೊಂಡಿವೆ. ದನಗಳು (ಗೋವು) ರೈತನ ನಿತ್ಯಜೀವನದಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತವೆ. ಆದ್ದರಿಂದ ಅವುಗಳನ್ನು ರೋಗರುಜಿನಗಳಿಂದ ರಕ್ಷಿಸಿ ಪಾಲನೆ ಮಾಡುವ ವಿಧಾನವು ಮಾನವನಿಗೆ ಅತ್ಯಗತ್ಯವಾಗಿ ತಿಳಿದಿರಲೇಬೇಕಾಗುತ್ತದೆ. ಇಂದು ಪಶುವೈದಕೀಯ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯಾಗಿದ್ದು ನರಳುತ್ತಿರುವ ಪ್ರಾಣಿಯ ರೋಗನಿದಾನ ತಂತ್ರ ಹಾಗೂ ಚಿಕಿತ್ಸಾ ವಿಧಾನಗಳು ಲಭ್ಯವಿವೆ. ಆದರೂ ಈ ವಿಷಯದಲ್ಲಿ ನಮ್ಮ ಪ್ರಾಚೀನರು ಸಾಕಷ್ಟು ತಿಳಿವಳಿಕೆ ಹೊಂದಿದವರಾಗಿದ್ದರು. ಕ್ರಿ.ಶ. ೧೧೦೦ರಲ್ಲಿ ಪ್ರಾಣಿವೈದ್ಯಕ್ಕೆ ಸಂಬಂಧಿಸಿದ ಅದರಲ್ಲೂ ಗೋವೈದ್ಯಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ರಚನೆಗೊಂಡ ಮೊದಲ ಕೃತಿ ಕೀರ್ತಿವರ್ಮನದು. ಪ್ರಸ್ತುತ ಗ್ರಂಥದಲ್ಲಿ ವ್ಯಾದಿಗಳಿಗೆ ಔಷಧ, ಮಂತ್ರ, ಬರೆಹಾಕುವ ಕ್ರಮವನ್ನು ವಿಸ್ತಾರವಾಗಿ ವಿವರಿಸಲಾಗಿದೆ. ಕೀರ್ತಿವರ್ಮನ ಗೋವೈದ್ಯ ಗ್ರಂಥವನ್ನು ಕುರಿತು ಡಾ.ಕೆ.ಕೃಷ್ಣಮೂರ್ತಿ ಅವರು "ಈತನ ಗೋವೈದ್ಯ ಗ್ರಂಥವು ಕನ್ನಡ ವೈದ್ಯಶಾಸ್ತ್ರಕ್ಕಷ್ಟೆ ಅಲ್ಲದೆ ಭಾರತೀಯ ವೈದ್ಯಶಾಸ್ತ್ರಕ್ಕೂ ಒಂದು ವಿಶಿಷ್ಟ ರೀತಿಯ ಕೊಡುಗೆಯನ್ನು ನೀಡಿದೆ ಎನ್ನಬಹುದು ಎಂದು ಅಭಿಪ್ರಾಯಪಡುತ್ತಾರೆ. ಏಕೆಂದರೆ ಭಾರತೀಯ ವೈದ್ಯಶಾಸ್ತ್ರದ ವಿಭಾಗಗಳಲ್ಲಿ ಆಯುರ್ವೇದದ ಅಂಗವಾಗಿ ಮನುಷ್ಯರ ಚಿಕಿತ್ಸೆಯೂ ಅಶ್ವಶಾಸ್ತ್ರ, ಗಜಶಾಸ್ತ್ರಗಳ ಅಂಗವಾಗಿ ಆಯಾ ಪ್ರಾಣಿ ರೋಗಗಳ ಚಿಕಿತ್ಸೆಯೂ ಪ್ರತಿಪಾದಿತವಾಗುತ್ತಿದ್ದವೇ ಹೊರತು ಪ್ರತ್ಯೇಕವಾಗಿ ಗೋವೈದ್ಯವನ್ನೇ ಕುರಿತು ಸ್ವತಂತ್ರ ಗ್ರಂಥ ಸಂಸ್ಕೃತದಲ್ಲಿ ಕೂಡ ಅಲ್ಲಿಯವರೆಗೆ ದೊರೆಯದು"[೨]. ಎಂದಿರುವುದು ಈ ಕೃತಿಯ ಹೆಗ್ಗಳಿಕೆಗೆ ಸಾಕ್ಷಿಯಾಗಿದೆ. ಗೋವೈದ್ಯ ಕುರಿತು ನಂತರ ಚಾವುಂಡರಾಯ ತನ್ನ ಲೋಕೋಪಕಾರ ಗ್ರಂಥದಲ್ಲಿ ನರಾದಿವೈದ್ಯ ಪ್ರಕರಣದಲ್ಲಿ ಮತ್ತು ಅನಾಮಧೆಯ ಎಂಬುವವನು ರಚಿಸಿದ ಗೋವೈದ್ಯ ಕೃತಿಗಳಲ್ಲಿ ಗೋವುಗಳಿಗೆ ತಗುಲುವ ಕೆಲ ರೋಗ–ಲಕ್ಷಣ–ಚಿಕಿತ್ಸಾ ವಿಧಿವಿಧಾನಗಳನ್ನು ಹೇಳಲಾಗಿದೆ. ಅವುಗಳ ಕೆಲವೊಂದನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಗೋವುಗಳಿಗೆ ಬರುವ ಮಹಾಜ್ವರಕ್ಕೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ. ಕೆ.೨೧೨ರಲ್ಲಿ;

"ಪಾಗಲೆಲೆ ಪಾಲುಮಂ
ಬಾಗಿರೆಯಜಮೂತ್ರದಿಂದ ನಸ್ಯಂ
ಗೈಗ ಹಂದಿಯ ವೃಷ್ಟಿಯ
ನಾಗಳೆ ಬಿಸಿನೀರೊಳ್ ಮಹಾಜ್ವರನಾಶಂ॥೨॥"

ಎಂದಿದೆ. ಅದೇ ರೀತಿ ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಕಾ.೮೬೫.೩ರಲ್ಲಿ; ಕೆಲ ರೋಗಗಳಿಗೆ ಚಿಕಿತ್ಸೆಗಳು ಈ ಕೆಳಗಿನಂತಿವೆ.

**ರಕ್ತನುಚ್ಚುವುದುಕ್ಕೆ :** ಅರಳಿ ತಿಗುಡಿನ ರಸ, ಸಮವಳ್ಳೆಣ್ಣೆ ಸಮನೆರೆಯುವುದು ಆರೋಗ್ಯಮಂ ಎಂದು ಹೇಳಿದೆ.

**ಕಳ್ಳು ರೋಗಕ್ಕೆ :** ಈ ರೋಗ ತಗುಲಿದಾಗ ಬಿದ್ದು ಹೊರಳುವುದು, ಹೇಳಲಾರದು, ಬಾಯಲ್ಲಿ ಸೋರುವುದು ಇದಕ್ಕೆ ಮೂಲಂಗಿ ಲೆಕ್ಕಿಸೊಪ್ಪು ಕುಟ್ಟಿ ರಸವನ್ನು ತಕ್ಕೊಂಡು ಮುಂಜಾನೆ ಮೂರು ಗೊಟ್ಟನೆತ್ತಲು ಮಾಣ್ಗುಂ. ಎಂದು ಸಾಮಾನ್ಯವಾಗಿ ಇಂದು ಜನಪದರು ಪಾಲಿಸುತ್ತಿದ್ದ ಕ್ರಮಗಳನ್ನೆ ಹೇಳಲಾಗಿದೆ.

**ಹೊಟ್ಟೆಯುಬ್ಬಿದರೆ :** ಪಾತಾಲ ಗರುಡನ ಸಹಮೂಲಷ ತಂದು ಅಂಬಿಲದಲ್ಲಿ ಅರೆದು ಮೂರು ಗೊಟ್ಟವನೆತ್ತಲು ಮಾಣ್ಗುಂ ಎಂದಿದೆ.

**ಹುಚ್ಚುರೋಗಕ್ಕೆ :** ಹುರಳಿ ಕಟ್ಟನ್ನು, ಅಂಬಿಲವನ್ನು ಸಮನಾಗಿ ಮೂರು ಗೊಟ್ಟನ್ನು ಕುಡಿಸಿದರೆ ಹೋಗುವುದು.

**ಕಾಮರೋಗ :** ಈ ರೋಗ ಉಂಟಾದಾಗ ಕಣ್ಣು ಕೆಂಪಗಾಗುವದು, ಕುಗ್ಗಿ ನಡೆವದು, ಮೇವು ತಿನ್ನಲಾರದು. ಇದಕ್ಕೆ ಚಿಕಿತ್ಸೆಯಾಗಿ ಚಿತ್ರಮೂಲದ ಸಮೂಲ ಮುಷ್ಟಿತಪ್ಪಲ ಸಮೂಲ ಈ ಎರಡು ಅರದು ಅಂಬಿಲದಲ್ಲಿ ಕಲಸಿ ಕೊಡಲು ಆ ರೋಗ ನಾಶವಾಗುವುದು".

ಲೋಕೋಪಕಾರದಲ್ಲಿ ಕೆಲ ರೋಗಗಳ ಲಕ್ಷಣ ಮತ್ತು ಚಿಕಿತ್ಸಾ ವಿಧಿವಿಧಾನಗಳನ್ನು ಚಾವುಂಡರಾಯ ಈ ಕೆಳಗಿನಂತೆ ವಿವರಿಸಿದ್ದಾನೆ.

**ಸೂಲಿಗೆ :** "ಮೇವು ಬಿಡುವುದು, ಮೆಲುಕು ಹಾಕದಿರುವುದು, ಯಾವಾಗಲೂ ಕಾಲನ್ನು ಬಡಿದು ಕೊಳ್ಳುವುದು ಈ ಲಕ್ಷಣ ಪಶುವಿನಲ್ಲಿ ಕಂಡುಬಂದಾಗ ಅದಕ್ಕೆ ಶೂಲೆಯಾಗಿದೆ ಎಂದು ತಿಳಿಯಬೇಕು. ಆಗ ಅದಕ್ಕೆ ಶುಂಠಿ, ಬೆಳ್ಳುಳ್ಳಿ, ಗಜಹಿಪ್ಪಲಿ, ಚವ್ಯ, ಇಂಗು, ಅಂಗುರ, ಗುಡ, ಓಮ, ಉಪ್ಪು, ಅರಿಸಿನ, ಬಜೆ-ಈ ಮೂಲಿಕೆಗಳನ್ನು ಉದಕದಲ್ಲಿ ಅರದು ಕುಡಿಸಬೇಕು ಇದರಿಂದ ರೋಗ ಗುಣವಾಗುತ್ತದೆ"[೨೪]. ಎಂದಿರುವಲ್ಲಿ ಈ ಔಷಧಗಳನ್ನು ಕುಡಿಸಿದರೆ ರೋಗ ಪರಿಹಾರವಾಗುತ್ತದೆನ್ನುವುದರಲ್ಲಿ ಅಚ್ಚರಿಯಿಲ್ಲ. ಮುಂದುವರಿದು ಜ್ವರದ ಲಕ್ಷಣ ಮತ್ತು ಚಿಕಿತ್ಸೆ ಕುರಿತು ಲೋಕೋಪಕಾರದಲ್ಲಿ;

ನಯನಜಲಂಗಳುಣ್ಮುವೊಡೆ ಬಿಕ್ಕುವೊಡಂ ತನು ಸೇಡೆಗೆಟ್ಟು ಬೆಂ।
ಕೆಯನೊಳಗೊಳ್ವೊಡಂ ಜ್ವರಿತನೆಂದಱಿದಾ ಜ್ವರದೇಟ್ಗೆಯೊಳ್ ಕವುಂ॥
ಡೆಯ ರಸಮಕ್ಕೆ ಲೊಕ್ಕಿಯನರಿಷ್ಟಫಲಂಗಲನಕ್ಕೆ ಪಂದಿಗ।
ಡ್ಡೆಯ ಪುರುವಳ್ಳಿ ಯೂಷಜಳಮಕ್ಕುಪಯೋಗಿಸಿದಂದು ಮಿಮ್ಗಿಗುಂ॥೨೦೫॥

ಪಸು ಜ್ವ(ಜ)ರಯಿ (ಗಿ)ಸಿದೊಡೆ ಹೊಲೆಯರ।
ಮಸಣದ ಬೂದಿಯನೆ ಪೂಸುಗಲ್ಲ ದೊಡುದ್ಧೂ॥
ಳಿಸು ತಡೆಯದೆ ಕೊಳೆವಾವಿನ।
ಭಸಿತಮನನಿತಱಿಕೊಳೆತಜ್ಜರ (ಪಶಮಿಸುಗುಂ॥೨೦೬॥"[೨೫]

ಪಶುಗಳು ಕಣ್ಣಿನಲ್ಲಿ ನೀರು ಸುರಿಸುವುದು, ಕೆಮ್ಮುವುದು, ಶರೀರವನ್ನು ನಡುಗಿಸುತ್ತ ಕುಗ್ಗಿಸಿಕೊಂಡು ನಿಂತುಕೊಳ್ಳುವುದು, ದೇಹದಲ್ಲಿ ಉಷ್ಣ ಅಧಿಕವಾಗಿರುವುದು ಈ ಲಕ್ಷಣಗಳು ಕಂಡು ಬಂದಾಗ ಆ ಪಶುವಿಗೆ ಜ್ವರವಿದೆ ಎಂದು ತಿಳಿಯಬೇಕು. ಅದಕ್ಕೆ ಚಿಕಿತ್ಸೆಯಾಗಿ "ಕಾವುಂಡೆಕಾಯಿ ರಸ ಅಥವಾ ಲೊಕ್ಕಿಕಾಯಿ,

ಅರಿಷ್ಟಫಲ, ಹಂದಿಗೆಡ್ಡೆ, ಹುರುಳಿ ಇವನ್ನು ಕೂಡಿಸಿ ಕಟ್ಟು ತೆಗೆದು ಬಿಸಿನೀರಿನಲ್ಲಿ ಕದಡಿ ಕುಡಿಸಬೇಕು. ಅಲ್ಲದೆ ಹೊಲೆಯರ ಮಸಣದ ಬೂದಿಯನ್ನು ತಂದು ಜ್ವರ ಪೀಡಿತ ದನದ ಮೈಯ್ಗೆ ಹಚ್ಚಬೇಕು ಅಥವಾ ಕೊಳಕುಮಂಡಲ ಹಾವನ್ನು ಸುಟ್ಟು ಅದರ ಬೂದಿಯನ್ನು ಸವರಬೇಕು. ಇದರಿಂದಲೂ ಪಶುವಿನ ಜ್ವರ ಇಂಗುವುದು" ಎನ್ನಲಾಗಿದೆ. ಇಲ್ಲಿ ಮೂಲಿಕೆಗಳಿಂದ ಕಟ್ಟು ತೆಗೆದು ಕುಡಿಸುವುದು ಒಂದು ಕ್ರಮವಾದರೆ ಪ್ರಾಣಿಜನ್ಯ ಮತ್ತು ಮನುಷ್ಯ ಜನ್ಯ ವಸ್ತುಗಳಿಂದಲೂ ರೋಗಗಳು ವಾಸಿಯಾಗುತ್ತವೆ ಎಂಬುದು ನಮ್ಮ ದೇಶಿ ವೈದ್ಯಪದ್ಧತಿಯ ಒಂದು ಭಾಗವಾಗಿಯೇ ಬೆಳೆದು ಬಂದಿದೆ. ಇಲ್ಲಿ ಪಶುವಿನ ಜ್ವರಕ್ಕೆ ಮೂರು ಪ್ರಕಾರದ ಚಿಕಿತ್ಸಾ ಕ್ರಮಗಳನ್ನು ಚಾವುಂಡರಾಯ ಅಭಿವ್ಯಕ್ತಪಡಿಸಿದ್ದಾನೆ.

ಹಸುಗಳಿಗೆ ಸಾಮಾನ್ಯವಾಗಿ ಕಂಡುಬರುವ ಕೆಲ ರೋಗಗಳಾದ ಕಾಲು ತೊಡಕಿ ಬಿಳುವುದಕ್ಕೆ; "ನುಗ್ಗೆಯ ಬೇರು, ಅಂಕುಲಿಯ ಬೇರು ಅಂಬಿಲದಲ್ಲಿ ಅರದು ಯಿಕ್ಕಲು ಆ ರೋಗ ಮಾಣ್ಗುಂ ಎಂದಿದೆ. ಅದೇ ರೀತಿ ಕಾಲುಬಾವುಗೆ "ಭಜೆ ಹುಳಿಯನ್ನು ಅಂಬಿಲದಲ್ಲಿ ಅರದು ಮೂರು ಗೊಟ್ಟ ಕೊಡಲು ಆರೋಗ್ಯವು"[೬೬]. ದನಗಳಿಗೆ ಹೊಟ್ಟೆಯುಬ್ಬರ ಕಂಡು ಬಂದಾಗ ಕಿರುಕುಸಾಲೆ, ಸೈಂದವಲವಣ, ಬೆಲ್ಲವತ್ತದ ಫಲ, ಲೊಕ್ಕಿ, ಆಲ, ಬಸರಿ ವೃಕ್ಷಗಳ ಚಿಗುರ, ಉಮ್ಮತ್ತದಬೇರು, ತಾವರೆಗೆಂಡೆ, ಬಸಳೆಸೊಪ್ಪು ಇವನ್ನು ಅರದು ನೀರಿನಲ್ಲಿ ಕದಡಿ ಕುಡಿಸುವುದರಿಂದ ಹೊಟ್ಟೆಯುಬ್ಬರವು ಗುಣಮುಖವಾಗುತ್ತದೆ. ಚಾವುಂಡರಾಯ ನರಡಿರೋಗ ಕುರಿತು ದೀರ್ಘವಾಗಿ ಹೇಳಿದ್ದಾನೆ. ಅದರ ಲಕ್ಷಣ ಮತ್ತು ಚಿಕಿತ್ಸೆಯ ಬಗೆಗಿನ ಅಭಿಪ್ರಾಯ ಹೀಗಿದೆ:

ಮ॥ ಭರದಿಂ ಸುಜ್ರನೆ ಸುಯ್ಯೆ ಸೂಗುಜೆಸೆ ಕಣ್ದಿರ್ಕ್ಕಾಲಿಗಲ್ ಬೀಟಿ್ಮೆಯ್।
ಮರವಟ್ಟಂತಿರೆ ನೋ(ಡಿ)ಡೆ ಪೇಟೆ ನರಡಿದಾಯ್ತೆಂದಂದು ನಿಶ್ಚೈಸಿ ಸಿಂ॥
ಧುರುಹಂ ಸಾಸಿವೆ ಬೀವಿಲಕ್ಕಿ ಮರಿಚಂ ಕ್ಷಾರದ್ವಯಂ ನಾಗರಂ।
ಪುರಧೂಮಂಗಳು (ಳಿ) ಮೆಂ(ವೆ) ಬಿವಂ ಕಡುಗೆ ಸೈತಕ್ಕುಂ ಮನೋವೇಗದಿಂ॥೨೦೭॥

ಕಂ॥ ಉದರಂ ಬಿಗಿದೊಡೆ ಬಾಯ್ ಸು।
ಣ್ಣದ ಖಾರಂ ನಾಜೆ ಕರಿಯ ಸೆರೆ ನಾಲಗೆಯೊಳ್॥
ಪುದಿದೊದವೆ ನರಡಿದೆಂದಜಿ।
ದದನೊಡೆದೊರಸುವುದು ಪುಳಿಯೊಳಂ ಲವಣದೊಳಂ ॥೨೦೮॥

ಚಂ॥ ಕಿವಿಗಳೆಳ (ವಿ)ಲ್ಲು ತೂಱುವೊಡೆ ಮೆಯ್ ಬಿಗಿದಪ್ಪೊಡೆ ದಿಟ್ಟಿ ನೆತ್ತಿಗೇ।
ಱುವೊಡದಜಿಮದೆ ಕಣ್ ಗುಜಿದು ತೋಜಿದೊಡೆಚ್ಚುಗೆ ಪಟ್ಟಸೂ[ತ್ರ]ಭ॥
ಸ್ಮ]ವನರೆ ದೆಚ್ಚರಿಷ್ಮಳಮಂ ಕಿವಿಯೊಳ್ ಪಿಜಿಗಲ್ಲದಂದು ಮೇಣ್।
ಕಿವಿಗಳಿನಾವಗಂ ಮಿಡಿವರಂ ಬರೆಗಿಂಬನದರ್ಕೆ ಮಾಡುಗುಂ ॥೨೦೯॥"[೬೭]

ದನಗಳು ನಡುಗುವುದು, ಗೂಬರಿಸಿಕೊಂಡು ನಿಂತುಕೊಳ್ಳುವುದು, ಮರವಟ್ಟಂತೆ ಬೀಳುವುದು, ಕಟ್ಟಿ ಉಸಿರೊಡೆಯುವುದು, ಮೈ ಬಿಸಿಯಾಗಿರುವುದು, ಕಿವಿಗಳು ಇಳಿಬೀಳುವುದು. ಮೇವು ಬಿಡುವುದು, ಕಣ್ಣಿನಲ್ಲಿ ನೀರು ಸುರಿಯುವುದು, ಬಾಯಲ್ಲಿ ಸುಣ್ಣದ ವಾಸನೆ ಹೊರಡುವುದು, ನಾಲಗೆಯ ಮೇಲೆ ಸೆರೆ ಎದ್ದಿರುವುದು–

ಈ ಕ್ಷಣಗಳು ಕಂಡು ಬಂದಾಗ ಅದನ್ನು ನರಡಿರೋಗವೆಂದು ತಿಳಿದು ಅದರ ಚಿಕಿತ್ಸೆಗಾಗಿ; ಸೈಂಧವಲವಣ, ಸಾಸಿವೆ, ಬೀಳಲಕ್ಕಿ, ಮೆಣಸು, ಯವಕ್ಷಾರ, ಸದ್ಯಃಕ್ಷಾರ, ಶುಂಠಿ, ಇಲ್ಲಣ ಇವೆಲ್ಲವನ್ನು ಅಂಬಿಲದಲ್ಲಿ ಅರದು ಕುಡಿಸಬೇಕು. ಇಲ್ಲವೇ ಕಿವಿ ಮೊದಲುಗೊಂಡು ಮಿಡಿಯವರೆಗೆ ಬರೆ ಹಾಕಬೇಕು ಎಂದಿರುವುದು. ಸಾಮಾನ್ಯವಾಗಿ ಈ ನರಡಿರೋಗಕ್ಕೆ ಗ್ರಾಮ್ಯಭಾಷೆಯಲ್ಲಿ 'ಗುಂಡಿನ ಸೆಲೆ' ಎನ್ನುವುದೇ ರೂಢಿ. "ಆಧುನಿಕ ವೈದ್ಯವಿಧಾನದ ಪ್ರಕಾರ ನರಡಿರೋಗವು ಒಂದು ವಿಶಿಷ್ಟಜಾತಿಯ ಅತಿಸೂಕ್ಷ್ಮವಾದ 'ಬ್ಯಾಸಿಲಸ್ ಅಂಥ್ರೇಸಿಸ್' (Bacillus Anthrsis) ಎಂಬ ಅಣುಕ್ರಿಮಿಗಳಿಂದ ಉಂಟಾಗುತ್ತದೆ. ದನಗಳು ರೋಗದಿಂದ ನರಳಿ ಸುಮಾರು ೧೨ ರಿಂದ ೨೪ ಗಂಟೆಗಳಲ್ಲಿ ಒದ್ದಾಡಿ ಸಾಯುತ್ತವೆ. ರೋಗವು ಬಹಳ ತೀಕ್ಷ್ಣವಾಗಿದ್ದಲ್ಲಿ ದನಗಳು ಇದ್ದಕ್ಕಿದ್ದಂತೆ ಸಿಡಿದು ಬಿದ್ದು ಸಾಯುತ್ತವೆ"[೬೬]. ಎಂದಿರುವುದರಿಂದ ಇದೊಂದು ಭಯಾನಕರೋಗ ಮತ್ತು ಸಾಂಕ್ರಾಮಿಕ ರೋಗ. ಈ ನರಡಿರೋಗವು ಸಾಂಕ್ರಾಮಿಕ ರೋಗವಾದ್ದರಿಂದ ಚಾವುಂಡರಾಯ ರೋಗನಿವಾರಣೆಗೆ ಚಿಕಿತ್ಸೆ ಸೂಚಿಸಿದ್ದಾನೆ. ಆದರೆ ರೋಗ ಹರಡದಂತೆ ಅನುಸರಿಸಬೇಕಾದ ವಿಧಾನಗಳನ್ನು ಹೇಳಿರುವುದಿಲ್ಲ. ಈ ನರಡಿರುವ ರೋಗ ಚಿಕಿತ್ಸೆಗೆ ಆಧುನಿಕ ಸಂದರ್ಭದಲ್ಲಿಯೂ ದನಗಳಿಗೆ ರೋಗ ತಗುಲಿದಾಗ ಸಾಮಾನ್ಯವಾಗಿ ಬರೆ ಹಾಕುವ ವಿಧಾನ ರೂಢಿಯಲ್ಲಿದೆ. ಇದರಿಂದಾಗಿ ಜನಪದವೈದ್ಯದ ಪ್ರಭಾವವೂ ಇದರ ಮೇಲೆ ಆಗಿದೆ ಎಂಬುದು ವಿಧಿತವಾಗುತ್ತದೆ.

ಮೈಸೂರು ವಿಶ್ವವಿದ್ಯಾಲಯ ಹಸ್ತಪ್ರತಿ ಭಂಡಾರದ ಹಸ್ತಪ್ರತಿ ಸಂಖ್ಯೆ ಕೆ೧೫೭೪.೩ರಲ್ಲಿ ಕುಂದು ರೋಗಕ್ಕೆ; "ಮೆಕ್ಕಿಯ ಬಾಳುಕಾಯನು ಅಂಬಿಲದಲ್ಲಿ ಕದಡಿಯಜುವದು। ಹಳೆಯ ಕೆರಹ ಕೊರಳಲ್ಲಿ ಕಟ್ಟುವುದೂ"॥ ಎಂದು ಹೇಳಲಾಗಿದೆ. ಹಳ್ಳಿಗಳಲ್ಲಿ ಈ ಕುಂದು ರೋಗಕ್ಕೆ ಹಲವು ಪ್ರತ್ಯೌಷಧಗಳನ್ನು ದನಗಳಿಗೆ ಕುಡಿಸುತ್ತಾರೆ. ಅವುಗಳಲ್ಲಿ ಒಂದು ಕ್ರಮವನ್ನು ಇಲ್ಲಿ ನೆನೆಯಬೇಕು. "ದನಗಳು ಕೊಂಕಿದ ಕೂಡಲೆ ಎರಡು ಕೋಳಿ ಮೊಟ್ಟೆಗಳನ್ನು ತಿನ್ನಿಸಬೇಕು. ಸಿಹಿ ಸೋರೆಹಣ್ಣು, ರಾಗಿ, ಭತ್ತ ಇವುಗಳನ್ನು ತಿರುವಿ ಹಸುವಿನ ಮಜ್ಜಿಗೆಯಲ್ಲಿ ಹುಯ್ಯಬೇಕು. ಇದನ್ನು ಪ್ರತಿನಾಲ್ಕು ಗಂಟೆಗೆ ಒಂದು ಸಾರಿಯಂತೆ ಹುಯ್ಯಬೇಕು. ಸಾಮಾನ್ಯವಾಗಿ ಒಂದೇ ದಿನದಲ್ಲಿ ರೋಗ ನಿವಾರಣೆಯಾಗುತ್ತದೆ. ಒಂದು ದಿನದಲ್ಲಿ ನಿಲ್ಲದೆ ಹೋದರೆ ಔಷಧಿಯನ್ನು ಮೂರು ದಿನಗಳ ಕಾಲ ಮಾಡಬೇಕು"[೬೭]. ಇದರಿಂದ ಬಹುಮಟ್ಟಿಗೆ ರೋಗವು ಗುಣಮುಖವಾಗುತ್ತದೆ. ಪಶು ವೈದ್ಯದಲ್ಲಿ ಸಾಕಷ್ಟು ಪ್ರಗತಿಯಾಗಿರುವ ಇಂದಿನ ದಿನಗಳಲ್ಲಿಯೂ ಇದೇ ಬಗೆಯ ಔಷಧೋಪಚಾರಗಳನ್ನು ತತ್‌ಕ್ಷಣದಲ್ಲಿ ಮಾಡುತ್ತಾರೆ. ಈ ದಿಶೆಯಲ್ಲಿ ನೋಡಿದಾಗ ಮೇಲಿನ ಔಷಧ ಕ್ರಮವು ಇಂದಿಗೂ ಪ್ರಸ್ತುತ. ಆದರೆ ಕಹಿಸೋರೆಯನ್ನು ಹಳೆಯ ಕೆರವನ್ನು ಕೊರಳಿಗೆ ಕಟ್ಟುವ ವಿಧಾನ ಎಷ್ಟು ಫಲಕಾರಿ ಎಂಬುದನ್ನು ತಿಳಿದಾಗ ಇದು ಕೇವಲ ನಂಬಿಕೆ ಎಂದು ಕೆಲವರು ಹೇಳುತ್ತಾರೆ. ಆದರೆ ಇದರ ಹಿಂದೆ ವೈಜ್ಞಾನಿಕ ಸತ್ಯಾಸತ್ಯತೆಗಳೂ ಇರಬಹುದು.

ಗೋವುಗಳಿಗೆ ಬರುವ ಕೆಲ ರೋಗಗಳಿಗೆ ಮಂತ್ರ, ಯಂತ್ರ ಮತ್ತು ಬರೆ ಹಾಕುವುದನ್ನು ದೇಶಿ ವೈದ್ಯದಲ್ಲಿ ಕಾಣಬಹುದು. ಅವುಗಳಲ್ಲಿ ಕೆಲ ಉದಾಹರಣಾರ್ಥವಾಗಿ;

**ಅಂಗುಳುಗಪ್ಪೆ :** ಬೆಂನ ಹಿಳಿಲಿನವೊತ್ತಿನ ಸುಳಿಯ ನಡುವೆ ಚುಚ್ಚುಕದ ಬರೆಯ ಬರೆವುದು।

**ಪಲಮಂಡಲಿಯೆಂಬ ರೋಗಕ್ಕೆ :** ಮುದುಡಿ ತಲ್ಲಣಿಸಿ ಬೀಳೋದು ಕೋಪಿಸಿ ಹಾಯಬಹುದು ಯಿದಕ್ಕೆ ಎಡದ ಬದಿಯಲ್ಲಿ ಯಂತ್ರವ ಮರೆವದು.

**ರೋಹಿಣಿ ರೋಗಕ್ಕೆ :** ಕಂಙುಗುಳಿಗುಂ ಪ್ರಾಣಿ ಕಿವಿಯನಿಳಿಯ ಬಿಟ್ಟುಕೊಂಡುಯಿಹುದು. ಯಿದಕ್ಕೆ ಯಂತ್ರ xxx ಅವುಷದಿಯ ನೀರನ್ನು ವಳ್ಳೆಣ್ಣೆಯ ಬೆರಸಿ ಯೆಜಿವುದು.

**ಚಿಪ್ಪೆರೋಗಕ್ಕೆ :** ಬಸಙು ಮೊಳಗುಗುಂ ನಡೆಯಲಾರದು ಯಡದಲ್ಲಿ ಯಂತ್ರ ಅವುಷದಿ ಲೊಕ್ಕೆಯ ಬಿಸಿನೀರಿನಲ್ಲಿಯೇಙುವುದು"[೬೦]

ಪ್ರಾಣಿ ವೈದ್ಯದ ಮತ್ತೊಂದು ಮುಖ್ಯವಾಗಿರುವ ಗಿಡಮೂಲಿಕೆಯ ಔಷಧ ಚಿಕಿತ್ಸೆಗಿಂತ ಯಂತ್ರ, ಮಂತ್ರ ಮತ್ತು ಬರೆಹಾಕುವ ಕ್ರಮಗಳು ವಿಶೇಷ ಪರಿಶೀಲನೆಗೆ ಅರ್ಹವಾದುವು. ವಾಸ್ತವವಾಗಿ, ಯಂತ್ರ, ಮಂತ್ರ ಮತ್ತು ವೈದ್ಯಕ್ಕೆ ನಿಕಟ ಸಂಬಂಧವಿದೆ. ಪ್ರಾಣಿಯ ರೋಗ ರುಜಿನಗಳಿಗೆ ಅಲೌಕಿಕ ಶಕ್ತಿಗಳೇ ಕಾರಣ ಎಂಬ ನಂಬಿಕೆ ನಮ್ಮ ಜನಪದರಲ್ಲಿ ಬಲವಾಗಿ ಬೇರೂರುವುದು. ಇದಕ್ಕೆ ಕಾರಣ ಕೆಲವು ಸಲ ಅರ್ಜೀಣಗಳಿಂದಾಗಿಯೂ ಹವಮಾನದ ವ್ಯತ್ಯಾಸದಿಂದಾಗಿಯೂ ರೋಗಗಳು ಬಂದಾಗ ಅದಕ್ಕೆ ಸೂಕ್ತವಾದ ಚಿಕಿತ್ಸೆಯನ್ನು ಮಾಡಿದರೂ ಅದೇ ಸಂದರ್ಭದಲ್ಲಿ ಆ ಕಾಯಿಲೆಗಳಿಗೆ ಯಂತ್ರ, ಮಂತ್ರ, ಬರೆಹಾಕುವ ಕ್ರಮದಿಂದಲೂ ಹೋಗಲಾಡಿಸಲು ಪ್ರಯತ್ನಿಸಿದ್ದುಂಟು.

ಆಕಳು, ಎತ್ತು, ಎಮ್ಮೆ, ಕೋಣ, ಕುರಿ, ಮೇಕೆಗಳಿಗೆ ಕೆಲ ಸಂದರ್ಭದಲ್ಲಿ ಸಾಮಾನ್ಯವಾಗಿ ಕಂಡುಬರುವುದು ಬಾಯಿರೋಗ. ಇದನ್ನು ಕುರಿತು ಗ್ರಾಮ್ಯ ಭಾಷೆಯಲ್ಲಿ ಬಾಯಿಬೇನೆ ಎಂದು ಕರೆಯುತ್ತಾರೆ. ಈ ವಿಷಯ ಕುರಿತು ಚಾವುಂಡರಾಯ ವಿಶಿಷ್ಟವಾಗಿ ಲಕ್ಷಣ, ಬಾಯಿ ರೋಗದ ಸ್ವರೂಪ ಮತ್ತು ಚಿಕಿತ್ಸೆಯನ್ನು ಪರಿಚಯಿಸಿರುವುದು ಹೀಗಿದೆ :

ಬಿಸುಸುಯ್ಯ ಬಾಯ್ ಕರಂ ಕೆಂ।
ಪೆಸೆದಿರೆ ಬಿಡೆ ಲೋಳೆ ಸುರಿಯೆ ಬಾಯೆ (ಎ) ಸಳದನೋ॥
ಡಿಸುವೊಡೆ ಕಾಗೆಯ ಗಜೆಯಿಂ।
ಬಿಸುನೀರೊಳ್‌ಕರ್ಚಿ ತೊಡೆಗೆ ಕಟುಕತ್ರಯಮಂ ॥೧೯೯॥

ಬಿಸುನೀರೊಳ್ ಮುನ್ನಂ ಕ।
ಚಿಕ ಸಾಸಿವೆಯ ತೈಲದಿಂದಮಾಸ್ಯಮನಭ್ಯು (ಭ್ಯಂ)॥
ಕ್ಷಿ(ಸಿ)ಸಿ ಪೂಸುಗೆಕ್ಕೆ ಯೆಲೆಯಂ।
ಪಸುವಿನ ಮುಖರೋಗಮಿವ ಜಿನಾಗಲೆ ಕಿಡುಗುಂ ॥೧೯೮॥"[೬೧]

ದನಗಳು ಕಟ್ಟಿ ಉಸಿರು ಹೊಡೆಯುವುದು, ಬಾಯಿ ಕೆಂಪಾಗಿ ಲೋಳೆಯಾಗಿ ಜೊಲ್ಲು ಸುರಿಯುತ್ತಿದ್ದರೆ ಅದಕ್ಕೆ ಬಾಯಿ ರೋಗವೆಂದು ಹೆಸರು. ಅದಕ್ಕೆ ಚಿಕಿತ್ಸೆಯೆಂದರೆ; ಪಶುಗಳ ಬಾಯನ್ನು ಕಾಗೆಯ ಗರಿಯಿಂದ ಒರಸಿ ಬಿಸಿನೀರಿನಿಂದ ಚೆನ್ನಾಗಿ ಸ್ವಚ್ಛಮಾಡಿ, ಶುಂಠಿ, ಮೆಣಸು, ಹಿಪ್ಪಲಿ, ಈ ಮೂರನ್ನು ಉದಕದಲ್ಲರೆದು ಬಾಯಿಗೆ ತೊಡೆದರೆ ಬಾಯಿರೋಗ ಗುಣವಾಗುತ್ತದೆ. ಹಾಗೂ ಆಕಳ ಮುಖವನ್ನು ಬಿಸಿನೀರಿನಿಂದ ಚೆನ್ನಾಗಿ ತೊಳೆದು ಸಾಸಿವೆ ಎಣ್ಣೆಯಲ್ಲಿ ಎಕ್ಕೆಯ ಎಲೆಯನ್ನು ಸೇರಿಸಿ ಅರೆದು ಎಳ್ಳೆಣ್ಣೆಯಲ್ಲಿ ಕಲಸಿ ಮುಸುಡಿಗೆ ಹಚ್ಚುವುದೂ ಬಾಯಿರೋಗಕ್ಕೆ ಪರಿಹಾರವೆಂದು ಹೇಳಲಾಗಿದೆ. ಜನಪದರಲ್ಲಿ ಈ ಕ್ರಮವನ್ನು ಈಗಲೂ ಸಹ ಕಾಣಬಹುದಾಗಿದೆ. ಹಾಗೂ ಆಧುನಿಕ ಪಶುವೈದ್ಯ ಪದ್ಧತಿಯಲ್ಲೂ ಬಾಯಿ ಬೇನೆ ಲಕ್ಷಣ ಹಾಗೂ ಅದರ

ಚಿಕಿತ್ಸೆ ವಿಧಾನ ಹೆಚ್ಚು ಕಡಿಮೆ ಇದೇ ರೀತಿಯಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಈ ಸಂಗತಿಯನ್ನು ಗಮನಿಸಬಹುದು. "ಬಾಯಿ ಬೇನೆಯಲ್ಲಿ ನಾಲಗೆಯ ಮೇಲ್ಭಾಗದಲ್ಲಿಯೇ ಹುಣ್ಣು ಒಡೆದು ಅದು ಒಸಡನ್ನು ಸಹ ಅಕ್ರಮಿಸುತ್ತದೆ. ಆಗ ಜೊಲ್ಲು ಧಾರಕಾರವಾಗಿ ಎಳೆಗಳಂತೆ ಬಾಯಿಂದ ಸುರಿಯ ತೊಡಗುತ್ತದೆ. ಈ ರೋಗವು ಉಪಚಾರಕ್ಕೆ ಬೇಗನೆ ಬಗ್ಗುತ್ತದೆ. ಬಾಯಿಯನ್ನು ೧ಶೇ. ಪಿ.ಪಿ.ಲೋಶನ್ ಅಥವಾ ೧ಶೇ. ಪಟಿಕದ ನೀರಿನಿಂದ ತೊಳೆದು ಬಿಸಿನೀರಿನಿಂದ ಸ್ವಚ್ಛಮಾಡಿ ಎಣ್ಣೆ ಫಿನಾಯಿಲ್‌ಗಳನ್ನು ೧:೮ರ ಪ್ರಮಾಣದಲ್ಲಿ ಹಚ್ಚಿದರೆ ನಾಲ್ಕು ದಿವಸಗಳಲ್ಲಿ ವಾಸಿಯಾಗುತ್ತದೆ"[೮೨]. ಆದಕಾರಣ ಈ ಮೇಲಿನ ರೋಗ ಚಿಕಿತ್ಸಾಕ್ರಮ ಇಂದಿಗೂ ಕೂಡ ಪ್ರಯೋಗಾರ್ಹವಾಗಿದೆ.

ಎಮ್ಮೆ ಅಥವಾ ಹಸುಗಳ ಗರ್ಭದಲ್ಲಿ ಕರು ಸತ್ತಿದ್ದಾಗ ಅದು ಹೊರ ಬರುವುದಕ್ಕೆ ಮತ್ತು ಈದ ಹಸುವಿನಿಂದ ಮಾಸು ಬೀಳದಿದ್ದಾಗ ಮಾಡುವ ಚಿಕಿತ್ಸಾಕ್ರಮವನ್ನು ಈ ಕೆಳಗಿನಂತೆ ಹೇಳಲಾಗಿದೆ;

**ಸತ್ತ ಕರು ಹೊರ ಬರುದಕ್ಕೆ :** ಬಾವುಜಿಗೆಯ ನೆಳ್ಳಂ ನಿ
ಷ್ಪಾವಮನಗಸೆಯುಮನಿಕ್ಕಿದಂದೆರ್ಮೆಗೆ ಮೇ॥
ಣಾವಿಂಗೆ ಬಸಿಲಂ ಕಱು ಸ।
ತ್ತಾವಡಿ (ದಿ) ಗೊಳಿಸುತ್ತುಮಿರ್ಪೊಡದು ಪೊಱಮಡುಗುಂ

**ಮಾಸ ಬೀಳುವುದುಕ್ಕೆ :** ಅಗಸೆ ಪೆಸಱವರೆ ಬಾವುಜಿ॥
ಗೆಗುಳ್ಳ ಮೆಳ್ಳಿಟ್ಟು ಬಳ್ಳಿಸೊರೆಯೆಂಬಿವನಿ॥
ಕ್ಕುಗೆ ಪಾಲೊಳ್ ಮೇಣ್ ಮದ್ಯದೊ
ಳೆ ಗೋಕಲಂ ಮಾಸನಿಕ್ಕುಗುಂ ತತ್‌ಕ್ಷಣ"[೮೩]

ಎಳ್ಳು, ವಾಕುಚಿಬೀಜ, ಅವರೆಬೀಜ, ಅಗಸೆ ಬೀಜಗಳ ಚೂರ್ಣವನ್ನು ತಿನ್ನಿಸುವುದು, ಇದರಿಂದ ಕರು ಹೊರಬರುವುದು ಎಂದು ಹೇಳಲಾಗಿದೆ. ಹಾಗೆಯೇ ಮಾಸು ಬೀಳದಿದ್ದಾಗ ಅಗಸೆ, ಹೆಸರು ಅವರೇಬೀಜ, ವಾಕುಚಿಬೀಜ, ಗುಳ್ಳದಕಾಯಿ, ಎಳ್ಳಿನ ಹಿಂಡಿ, ಬಳ್ಳಿಸೊರೆಯ ಸಮೂಲ– ಇವುಗಳೆಲ್ಲವನ್ನು ಕೂಡಿಸಿ ಚೂರ್ಣಮಾಡಿ ಹಾಲಿನಲ್ಲಾಗಲಿ ಅಥವಾ ಮದ್ಯದಲ್ಲಾಗಲಿ ಕಲಸಿ ಕುಡಿಸಿದರೆ ಮಾಸು ಬೇಗನೆ ಬೀಳುವುದು ಎಂದಿರುವುದು ಅತ್ಯಂತ ಉಪಯುಕ್ತವಾದ ಮಾಹಿತಿ ಎಂದು ತಿಳಿಯಬಹುದು.

ಗೋವು ಮಾಸು ತಿಂದಾಗ ಮತ್ತು ದಿನತುಂಬದೆ ಗರ್ಭದಿಂದ ಕರು ಹೊರಬರುವಾಗ ಕೈಗೊಳ್ಳುವ ಚಿಕಿತ್ಸಾ ವಿಧಾನವನ್ನು ಚಾವುಂಡರಾಯ ಲೋಕೋಪಕಾರದಲ್ಲಿ ಹೇಳಿರುವುದು ಹೀಗಿದೆ; "ಟಿ॥ ಈದ ಆಕಳು ಮಾಸಂ ತಿಂದೊಡೆ ಎಳ್ಳ ಸೂಸಲಂ, ಬೆಲ್ಲಮಂ ಕಲಸಿ ತಿನಿಸುವುದು. ಅಲ್ಲಾ ಅಗಸೆಯ ಬೀಜಮಂ ಪಾಲಲ್ಲರೆದು ಕದಡಿ ಕುಡಿಸುವುದು ಇದರಿಂದಾ ದೋಷಂ ಕಿಡುವುದು–೧೯೩. ಟೀ॥ ಆಕಳುಗಳ್ಗೆ ದಿನಂ ತುಂಬದೆ ಕಱು ಪೊಱಮಡುವಂತಿರ್ದೊಡೆ ಅದನಂಬಿಲದಲ್ಲಿ ತೊಳೆದು ಕರಿಯ ಕಾಕೆಯ ರಸಮಂ ತೊಡೆದು ಒಳಯಿಂಕೆ ವೊತ್ತುವುದು. ಅಲ್ಲ ಉತ್ತರಣೆಯ ರಸಮಂ ತೊಡೆದು ಒಳಯಿಂಕೆ ವೊತ್ತುವುದು ಇವಱಿಂದೆ ಕಱು ತನ್ನ ನಿಜದ ತಾವಿಂಗೆ ಪೋಪುದು–೧೯೪"[೮೪].

ಈದ ಗೋವು ಮಾಸು ತಿಂದುಕೊಂಡ ಪಕ್ಷದಲ್ಲಿ ಅದಕ್ಕೆ ಎಳ್ಳುಸೂಸಲುಗೆ ಬೆಲ್ಲ ಬೆರಸಿ ತಿನ್ನಿಸಬೇಕು. ಇಲ್ಲವೇ ಅಗಸೆ ಬೀಜವನ್ನು ಅರೆದು ಹಾಲಿನೊಂದಿಗೆ ಕುಡಿಸುವುದರಿಂದ ಆ ದೋಷ ನಿವಾರಣೆಯಾಗುತ್ತದೆ. ಜನಪದರಲ್ಲಿ ಹಸು ಮಾಸು ತಿಂದರೆ ಹಾಲು ಕಡಿಮೆಯಾಗುತ್ತದೆ ಎಂಬ ನಂಬಿಕೆ ಇದೆ. ಈ ಮೇಲಿನ ಚಿಕಿತ್ಸೆ ಮಾಡಿದರೆ ಆ ರೀತಿ ಆಗುವುದಿಲ್ಲ ಎಂಬುದನ್ನು ತಿಳಿದು, ಈ ಕ್ರಮವನ್ನು ಪಾಲಿಸಿದರೆ ಸೂಕ್ತ. ದಿನ ತುಂಬದ ಗರ್ಭದಿಂದ ಕರು ಹೊರಬಂದಾಗ ಅದನ್ನು ಅಕ್ಕಿ ಕರ್ಚಿದ ನೀರಿನಲ್ಲಿ ತೊಳೆದು, ಬಳಿಕ ಅದಕ್ಕೆ 'ಕರಿಯ ಕಾಕೆಯ ರಸ'ವನ್ನಾಗಲಿ, ಉತ್ತರಣೆ ಬೇರ ರಸವನ್ನಾಗಲಿ ತೊಡೆದು ಮುಷ್ಟಿಯಿಂದ ಒಳಕ್ಕೆ ಒತ್ತಬೇಕು. ಈ ಕ್ರಮದಿಂದ ಕರು ತನ್ನ ನಿಜದ ನೆಲೆಗೆ ಹೋಗಿ ಸೇರುವುದು ಎಂದು ಹೇಳಿದ ವಿಧಾನವು ಆಧುನಿಕ ಪಶ ವೈದ್ಯ ಪದ್ಧತಿಯಲ್ಲಿಯೂ ಇದೇ ವಿಧಾನವನ್ನು ಅನುಸರಿಸಲಾಗುತ್ತದೆ. "......ಇಂಥ ಪ್ರಸಂಗದಲ್ಲಿ ಹೊರಬಂದ ಭಾಗವನ್ನು ಸ್ವಚ್ಛವಾಗಿ ತೊಳೆದು ಮುಷ್ಟಿಯಿಂದ ಒಳದೂಡಿ ಮೇಲೆ ಅಗ್ಗದಿಂದಾಗಲಿ ಅಥವಾ ಸೀಸೆಯನ್ನು ಹಿಮ್ಮುಖವಾಗಿ ಸೇರಿಸಿ ಅದನ್ನು ಹೊರಬರದಂತೆ ಕಟ್ಟಿಹಾಕಬೇಕು"[೮೫]. ಎಂಬ ಅಭಿಪ್ರಾಯವನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಆದರೆ ಈ ಆಧುನಿಕ ಕ್ರಮಕ್ಕಿಂತ ಚಾವುಂಡರಾಯ ಹೇಳಿದ ಕ್ರಮವೇ ಸ್ಪಷ್ಟ ಮತ್ತು ಉತ್ತಮವೆಂದು ಕಂಡುಬರುತ್ತದೆ.

ಇಂಥ ಇನ್ನೂ ಹಲವಾರು ರೋಗಗಳಿಗೆ ಚಿಕಿತ್ಸಾ ವಿಧಿವಿಧಾನಗಳ ಕುರಿತು ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಮಾಹಿತಿಗಳು ದೊರೆಯುತ್ತವೆ. ಉದಾಹರಣೆಗೆ ಕೊಂಬಿನ ಹುಳು, ನಾಳಿಹುಣ್ಣೆ ತಿರುಗುತ್ತ, ನರಡುರೋಗ, ಕಣ್ಣುರೋಗ, ಶೂಲೆ ಇತ್ಯಾದಿ ವ್ಯಾದಿಗಳಿಗೆ ಚಿಕಿತ್ಸೋಪಾಯಗಳು ದೊರೆಯುತ್ತವೆ.

ಗೋವೈದ್ಯದಲ್ಲಿ ಸೂಚಿಸಿದ ಕೆಲ ರೋಗ–ಲಕ್ಷಣ–ಚಿಕಿತ್ಸಾವಿಧಾನಗಳನ್ನು ಆಧುನಿಕ ವೈದ್ಯವಿಜ್ಞಾನವು ಹೇಳಿದೆ. ಕನ್ನಡ ಹಸ್ತಪ್ರತಿಗಳಲ್ಲಿ ಸಾಮಾನ್ಯವಾಗಿ ಚಿಕಿತ್ಸೆಗಾಗಿ ಬಳಸಿದ ಶುಂಠಿ, ಸಾಸಿವೆ, ಬೆಳ್ಳುಳ್ಳಿ, ಮೆಂತ್ಯ, ಮೆಣಸು, ಇಂಗು, ಬೆಲ್ಲ, ಕಾಕಂಬಿ, ಅಡಕೆ, ಬಿಲ್ಪತ್ರೆ ಹಣ್ಣು, ಹಿಪ್ಪಲಿ, ಬಜೆ ಉಳಿ ಇತ್ಯಾದಿ ಪದಾರ್ಥಗಳನ್ನು ಗೃಹೋಪಚಾರ ಔಷಧಗಳಾಗಿ ದನಗಳ ರೋಗಗಳಿಗೆ ಬಳಸುವಂತೆ ಆಧುನಿಕ ಪಶುವೈದ್ಯಕೀಯ ವಿಜ್ಞಾನವೂ ನಿರ್ದೇಶಿಸುತ್ತದೆ. ಹಾಗಾಗಿ ಪ್ರಾಚೀನ ಕಾಲದ ಈ ಔಷಧೋಪಚಾರ ಕ್ರಮದಿಂದ ದನಗಳಿಗೆ ತಗಲುವ ರೋಗಗಳಿಗೆ ಬಳಸುವಂತೆ ಆಧುನಿಕ ಪಶುವೈದ್ಯಕೀಯ ವಿಜ್ಞಾನವೂ ನಿರ್ದೇಶಿಸುತ್ತದೆ. ಹಾಗಾಗಿ ಪ್ರಾಚೀನ ಕಾಲದ ಈ ಔಷಧೋಪಚಾರ ಕ್ರಮದಿಂದ ದನಗಳಿಗೆ ತಗಲುವ ಎಲ್ಲಾ ರೋಗಗಳನ್ನು ನಿಯಂತ್ರಿಸಲು ಸಾಧ್ಯ ಎನ್ನಬಹದು. ಹಾಗೂ ಆಧುನಿಕ ವೈದ್ಯವಿಜ್ಞಾನವು ಪ್ರಾಚೀನ ಕಾಲದ ಔಷಧೋಪಚಾರಗಳನ್ನು ಅನುಸರಿಸಿ ಕೆಲ ಪರಿವರ್ತನೆಗಳನ್ನು ಮಾಡಿಕೊಂಡು ಅಭಿವೃದ್ಧಿಹೊಂದಿದೆ ಎಂದು ಹೇಳಬಹುದು.

### ೪.೧.೨.೨.ಅಶ್ವವೈದ್ಯ

ಇದು ಕುದುರೆಗಳ ರೋಗಗಳಿಗೆ ಔಷಧೋಪಚಾರ ಮಾಡುವ ವೈದ್ಯಪದ್ಧತಿ. ಪ್ರಾಚೀನಕಾಲದಲ್ಲಿ ಕುದುರೆಗಳನ್ನು ಯುದ್ಧರಂಗದಲ್ಲಿ ಹೋರಾಡಲು ಮತ್ತು ಸಾಮಾನು ಸಾಗಾಣಿಕೆಗಾಗಿ ಬಳಸುತ್ತಿದ್ದರು. ಅವುಗಳ ಪೋಷಣೆಗಾಗಿ ಪ್ರತ್ಯೇಕವಾದ ವೈದ್ಯರನ್ನೆ ರಾಜರು ನೇಮಿಸುತ್ತಿದ್ದರು ಎಂಬುದಕ್ಕೆ "ಅಶ್ವಪಡೆಯ ಮುಖ್ಯಸ್ಥನಿಗೆ ೮೦೦೦ ಪಣಗಳು, ಮೇಲ್ವಿಚಾರಕರಿಗೆ ೪೦೦೦ ಪಣಗಳು, ವೈದ್ಯರಿಗೆ ೨೦೦೦ಪಣಗಳನ್ನು

ವೇತನವಾಗಿ ಕೊಡುತ್ತಿದ್ದರು"೮೬. ಎಂಬ ಮಾಹಿತಿಯಿಂದ ತಿಳಿಯುತ್ತದೆ. ಮನುಷ್ಯನ ನಂಬಿಗಸ್ಥ ಪ್ರಾಣಿಗಳಲ್ಲಿ ಒಂದಾದ ಕುದುರೆಗೂ ಅನೇಕ ರೋಗಗಳು ತಗುಲುವುದುಂಟು. ಅವುಗಳಿಗೆ ವೈದ್ಯೋಪಚಾರ ಮಾಡುವುದು ಸಹಜವಾಗಿದೆ. ಅಶ್ವವೈದ್ಯ ಕುರಿತು ಕನ್ನಡದಲ್ಲಿ ಪ್ರತ್ಯೇಕವಾದ ಕೃತಿಗಳು ಹೆಚ್ಚು ರಚನೆಯಾಗಿಲ್ಲದಿದ್ದರೂ, ಚಾವುಂಡರಾಯನ ಲೋಕೋಪಕಾರ, ಅಭಿನವಚಂದ್ರನ ಅಶ್ವಶಾಸ್ತ್ರ, ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ ಇತ್ಯಾದಿ ಕೃತಿಗಳಲ್ಲಿ ಕುದುರಿಗೆ ತಗಲುವ ರೋಗ-ಲಕ್ಷಣ ಮತ್ತು ಚಿಕಿತ್ಸಾ ವಿಧಿವಿಧಾನಗಳನ್ನು ಹೇಳಲಾಗಿದೆ. ಕುದುರೆಗಳಿಗೂ ಮನುಷ್ಯರಂತೆಯೇ ತ್ರಿದೋಷಗಳಾದ ವಾತ, ಪಿತ್ತ, ಕಫಗಳಿಂದಲೇ ರೋಗಗಳು ಬರುತ್ತವೆ. ಈ ತ್ರಿದೋಷವುಳ್ಳ ಕುದುರೆಗಳು ಹುಟ್ಟುವ ಸಂದರ್ಭವನ್ನು ಕುರಿತು ಈ ಕೆಳಗಿನಂತೆ ಹೇಳಲಾಗಿದೆ;

ಕುದುರೆಯು ವರುಷಋತು, ಶರತ್‌ಋತುವಿನಲ್ಲಿ ಗರ್ಭವಾದರೆ ಹುಟ್ಟುವ ಮರಿ ಪ್ರಕೃತಿಯು ವಾತ 'ದೇಹವಾಗುವುದು. ಹೇಮಂತ, ಶಿಶಿರ ಋತುವಿನಲ್ಲಿ ಗರ್ಭವಾದರೆ ಪೈತ್ಯದೇಹ. ವಸಂತ, ಗ್ರೀಷ್ಮಋತು ಈ ನಾಲ್ಕು ತಿಂಗಳಲ್ಲಿ ಗರ್ಭನಿಂತರೆ ಕಫ ಪ್ರಕೃತಿಯಾಗಿ ಮರಿ ಹುಟ್ಟುವವು. ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತಿಕ ಈ ನಾಲ್ಕು ತಿಂಗಳಸಲ್ಲಿ ಗರ್ಭವಾದರೆ ವಾತ, ಮಾರ್ಘಶಿರ, ಪುಷ್ಯ, ಮಾಘ, ಫಾಲ್ಗುಣ ಈ ನಾಲ್ಕು ತಿಂಗಳಲ್ಲಿ ಗರ್ಭವಾದರೆ ಪೈತ್ಯ, ಚೈತ್ರ, ವೈಶಾಖ, ಜೇಷ್ಠ, ಆಷಾಢ ಈ ನಾಲ್ಕು ತಿಂಗಳಲ್ಲಿ ಗರ್ಭವಾದರೆ ಶ್ಲೇಷ್ಮ ಪ್ರಕೃತಿಯಾಗಿ ಹುಟ್ಟುವವು. ಭಯ, ಭೀತ, ಬಲಹೀನ, ಚಲನಚಿತ್ತ ಬಡವಾಗಿ ಇದ್ದು ಸುಖಿಯಿಲ್ಲದೆ ಉಪ್ಪು ಹುಳಿಯ ವ್ಯಾಮೋಹವುಳ್ಳ ಈ ತರಹದ ಗುಣಗಳನ್ನು ಹೊಂದಿರುವ ಕುದರೆ ವಾತ ಪ್ರಕೃತಿಯೆಂದ, ನೀರು ನೆಳವಟ್ಟಿಯಾದ ಆಹಾರಗಳು, ಖಾರ, ಕಹಿ, ರಸಾಹಾರಗಳನ್ನು ಸೇವಿಸುವ ಗುಣಗಳನ್ನು ಹೊಂದಿರುವ ಕುದುರೆಯು ಶ್ಲೇಷ್ಮ ಪ್ರಕೃತಿಯೆಂದು, ಮೈಯ ಕೂದಲು ಒತ್ತಲದೆ ಸೂಕ್ಮವಾಗಿ ಇದ್ದು ಹಗಲು ಕಿಚ್ಚು ಇರುಳು ದೀಪವಾದರೆ ಆ ಬೆಳಕಿನಲ್ಲಿ ಹುಲ್ಲನ್ನು ಬಹಳ ತಿನ್ನುವುದು. ಅದಕ್ಕೆ ಪರಶಿಖಾಂಗವೆಂದು, ಕಲಿಕಾರ, ಕಹಿಗೆ ಪ್ರಿಯವಾದದ್ದು, ಸತ್ವವುಳ್ಳ ಅಲ್ಪಾಹಾರ ಮಂದಗಮನ, ಕಾಂತಿಯುಳ್ಳ ಸ್ಯೆರಣೆಯುಳ್ಳ ಬಲಸ್ಥಿರವುಳ್ಳ ಈ ಗುಣದ ಕುದುರೆ ಶ್ಲೇಷ್ಮ ಪ್ರಕೃತಿಯುಳ್ಳ ಪಡುರಸ ಪ್ರೇಮಿಯಾದ ಕುದರೆ ಸಮ ಪ್ರಕೃತಿಯುಳ್ಳದ್ದು ಎಂದು ಹೇಳಲಾಗುತ್ತದೆ.

ಸಕಲಶಾಸ್ತ್ರ ಪಾರಂಗತನಾದ ಚಾವುಂಡರಾಯ ತನ್ನ ಲೋಕೋಪಕಾರ ಕೃತಿಯಲ್ಲಿ ಕುದುರೆಗೆ ಬರುವ ರೋಗಗಳನ್ನು ಕುರಿತು ಪ್ರಸ್ತಾಪಿಸುತ್ತಾ, ಕುದುರೆಗೆ ಬರುವ ಜ್ವರದ ಲಕ್ಷಣ ಕುರಿತು ಹೇಳುತ್ತಾ. ಈ ಕೆಳಗಿನಂತೆ ವಿವರಿಸುತ್ತಾನೆ.

ಒಡೆದಿರೆ ರೋಮಂ ಮೆಯ್‌ಮರ
ವಡೆಬಾಯೊಳ್ ಕೊಳೆನಾಜಿ ಮೇಹುಗೊಳ್ಳದೆ ನಿಲೆನೀ
ರಡಕೆ ಪಿರಿದಾಗೆ ಝೊಂಪಿಸೆ
ನಿಡುಸಯ್ಯೆ ಹಯಂ ಕರಂ ಜ್ವರಾರ್ತನೆನಿಕ್ಕುಂ (೯-೨೩೪)"೮೭

ಕುದುರೆಗಳಿಗೆ ರೋಮ ಎದ್ದಿರುವ ಮೈ ಮರಗಟ್ಟಿರುವ ಬಾಯಿಯು ಕೊನೆನಾರುತ್ತಿರುವ ಮೇವು ತಿನ್ನದೇ ಇರುವ ನೀರಡಿಕೆ ಇಲ್ಲದಿರುವ ತೂಕಡಿಸುತ್ತಿರುವ ಶ್ವಾಸ (ಉಸಿರಾಟ ಹೆಚ್ಚುತ್ತಿರುವ) ಬಿಡುತ್ತಿರುವ ಈ ಎಲ್ಲಾ

ಗುಣಲಕ್ಷಣಗಳು ಕುದುರೆಗಳಿಗೆ ಕಂಡುಬಂದರೆ ಜ್ವರ ಬಂದಿದೆ ಎಂದು ತಿಳಿಯಬೇಕು. ಜ್ವರಕ್ಕೆ ಉಪಚರಿಸುವ ಕ್ರಮವನ್ನು ಕುರಿತು ವಿವರಿಸುತ್ತಾ ಅಭಿನವಚಂದ್ರ;

ಓಳದ ಪಿಪ್ಪಲಿ ದೇವದಾರು ರುಜೆ ನಿಂಬಂ ಚಿತ್ರಕಂ ಪಾಲೆ ನೇ।
ಜಿಲವುಂಗುರ್ನ್ನಲ ಬೇವು ದಂತಿ ಕಟುಕಂ ಛಿನ್ನೇಜಮೆಂಬಿಂತಿವಂ॥
ಜಳದೊಳ್ ಮೂವಡಿಗೂಡಿಕಾಸಿ ಮಧುಮಿಶ್ರಂ ಪೊಯ್ಗೆ ಮೇಣ್ ಬೇವು ಪಿ
ಪ್ಪಲಿ ಜೇನೆಯ್ ಕಟುಕಾಂಬುವಂ ಕುಡಲೊಡಂ ಸರ್ವಜ್ವರ ಪಿಂಗುಗುಂ (೯-೨೩೫)"೮೮

ಭದ್ರಮಸ್ತೆ, ಹಿಪ್ಪಲಿ, ದೇವದಾರು, ರುದಂತಿ, ಬೇವು, ಚಿತ್ರಮೂಲ, ಹಾಲೆಯತಿಗುಡು, ನೇರಲತಿಗಡು, ಅಶ್ವಗಂಧಿ, ನೆಲಬೇವು, ದಂತಿ, ಕಟುಕರೋಹಿಣಿ, ಅಮರದುವಳ್ಳಿ ಇವೆಲ್ಲವನ್ನು ತಂದು ಕುಟ್ಟಿ ಮಡಿಕೆಯೊಳಗಿಟ್ಟು ಹೊಟ್ಟೆಯೊಳಗೆ ಕಷಾಯಮಾಡಿ ಮೂರು ಮಡಿ ನಿರೊಂದುಮಡಿ ಪರ್ಯಂತ ಕಾಸಿ ಆ ಕಷಾಯದ ನೀರನ್ನು ಕೊಂಡು ನಂತರ ಜೇನುತುಪ್ಪದಲ್ಲಿ ಬೆರಸಿ ಕುಡಿಸುವುದು. ಇದರಿಂದ ಜ್ವರ ವಾಸಿಯಾಗುತ್ತದೆ.

ಅಭಿನವಚಂದ್ರ ತನ್ನ ಅಶ್ವಶಾಸ್ತ್ರ ಕೃತಿಯ ಹದಿಮೂರನೆಯ ಅಧ್ಯಾಯದಲ್ಲಿ ಕುದುರೆಗಳಿಗೆ ಬರುವ ರೋಗ ಲಕ್ಷಣ ಮತ್ತು ಪರಿಹಾರ ಕುರಿತು;

ಕೆಂಪುಕ್ಕುಂ ಮೂತ್ರಂ ಮೇಣ
ಸಂಪೋಲ್ಕುಂ ಲದ್ದಿ ಮೇಹುಗೊಳ್ಳದು ಖಾಣ
ಕ್ಕಂ ಪದೆದು ಬಾರದಶ್ರುಜ
ಲಂ ಪಾಯ್ಲುಂ ಜ್ವರವಿಕಾರಮಾದೊಡೆ ತುರಗಂ (೧೩-೧)"೮೯

ಕುದುರೆಯು ಮೂತ್ರವನ್ನು ರಕ್ತದ ಹಾಗೆ ಬಿಡುತ್ತಿರಲು, ಲದ್ದಿಯನ್ನು ಒಣಗಿದಂತೆ ಹಾಕುತ್ತಿರಲು, ಮೇಯದೆ, ನೀರು ಕುಡಿಯದೆ, ಖಾನವನೊಲ್ಲದ ಅದಕ್ಕೆ ಜ್ವರ ಬಂದಿದೆ ಎಂದು ತಿಳಿದುಕೊಳ್ಳಬೇಕು. ನಂತರ ಚಿಕಿತ್ಸೆಯನ್ನು ಮಾಡಲು ಬೇವಿನ ಎಲೆಯನ್ನು ತುಳಿದು ಪಿಂಡವನಿಕ್ಕಿ ಉಪ್ಪುಮುಟ್ಟಲಾರದ ಮೇವನ್ನು ಸ್ವಲ್ಪ ಮೇವನ್ನು ಸ್ವಲ್ಪ ಕರಿಕೆಯ ಹುಲ್ಲನಿಟ್ಟು ಬಿಸಿಲಿನ ಕಾವಿನಲ್ಲಿರಿಸಿದರೆ ಜ್ವರ ಗುಣವಾಗುವುದು ಎಂದಿದೆ.

ಇನ್ನೂ ಅಶ್ವಗಳ ಸರ್ವವ್ಯಾಧಿಗೆ ಪ್ರತಿಕಾರ ಕ್ರಮ ಪರಿಚಯಿಸಿಕೊಡುವ ಸಂಗತಿ ಚಾವುಂಡರಾಯನ ಲೋಕೋಪಕಾರ ಪದ್ಯವೊಂದರಲ್ಲಿ ಹೀಗೆ ಉಕ್ತವಾಗಿದೆ.

ರಸಯಿಸಿರ್ದ ತುರುಂಗಮುಮಂ ನೀರೂಡದಹರ್ನಿಶಮುಂಪ್ರಯೋ
ಗಿಸುಗೆ ತಪ್ಪದೆ ಜಾವದೊಳಿರ್ಪ್ಪತ್ತಯ್ದು ಹರೀತಕಿಯಾಗೆ ಸಂ
ಧಿಸಿ ಶತದ್ವಯಪ್ಪಿನೆಗಂ ಸಿಂದೂದ್ಭವಸಂಯುತಮಾದೊಡು
ರ್ವಿಸುವ ಬೇಸಗೆಯೊಳ್ ಗುಡಮಿಶ್ರಂ ತಾನದು ದೋಷವಿನಾಶನಂ (೯-೨೩೭)"೯೦

"ಕುದುರೆಗಳ್ಗೆ ವಾಯುಕೊಂಡೊಡೆ ಬೇಸಙದೆ ಹಿವದದಿನದೊಳ್ ನೀರಂ ಕುಡಿಯಿಸದೆ ಜಾವ ಜಾವಕ್ಕೆ ಇಪ್ಪತ್ತೈದು (೨೫) ಅಣಿಲೆಯ ಕಾಯ್ಗಳಂ ಚೂರ್ಣಮಾಡಿ ಸೈಂಧವಮಂ ಕಲಸಿ ಹೀಗೆ ಎಂಟು ಜಾವಕ್ಕಂ ತೊಲೆ ಇನ್ನೂಱು (೨೦೦) ಅಣಿಲೆಯ ಕಾಯಹನ್ನ ಬರ ಕವಳಮನಿಕ್ಕುವುದು; ಉಷ್ಣಕಾಲದಲ್ಲಿ ಈ ಮರ್ಯಾದೆಯೊಳ್ ಅಣಲೆಯ ಚೂರ್ಣಮಂ ಬೆಲ್ಲದಲ್ಲಿ ಕಲಸಿ ಕವಳಮನಿಕ್ಕುವುದು. ಇವಱಿಂದೆ ಕುದುರೆಗಳ್ಗೆ

ಸಮಸ್ತರೋಗಂ ಮಾಣ್ಬುದು, ಉಷ್ಣವಾಯು ಸಮಧಾತುವಾಗಿರ್ಪುದು" ಎಂಬುದು ಈ ಪದ್ಯದ ಟೀಕಾರ್ಥ. ಇಲ್ಲಿ 'ಜಾವದೊಳಿರ್ಪ್ಪತ್ತಯ್ದು ಹರೀತಕಿಯಾಗೆ ಸಂಧಿಸಿ ಶತದ್ವಯ ಮಪ್ಪಿನೆಗಂ' ಎಂಬ ಮಾತು ಗಮನಾರ್ಹ. ಚಾವುಂಡರಾಯ ಔಷಧ ಕೊಡುವ ಕಾಲವನ್ನು ಎಲ್ಲಿಯೂ ಪ್ರಧಾನವಾಗಿ ಉಲ್ಲೇಖಿಸಿಲ್ಲ. ಆದರೆ ಇಲ್ಲಿ ಕುದುರೆ ಸರ್ವರೋಗ ನಿವಾರಣೆಗೆ ಜಾವಜಾವಕ್ಕೆ ಇಪ್ಪತ್ತೈದು ಅಣಿಲೆಕಾಯಿಗಳಂತೆ ಇನ್ನೂರು ಅಣಿಲೆಕಾಯಿಗಳನ್ನು ತಿನ್ನಿಸಬೇಕು ಎಂದಿರುವುದು ಬಹಳ ಉಪಯುಕ್ತ ಸಲಹೆಯಾಗಿದೆ.

ಅಶ್ವಗಳಿಗೆ ಅಂಟುವ ಒಂದು ಅಪಾಯಕಾರಿ ಜಾಢ್ಯ ಸಿಂಬಳ ರೋಗ. ಇದರ ಲಕ್ಷಣಗಳು ಹೀಗಿವೆ; "ರೋಗ ತೀವ್ರವಾದಾಗ ಜ್ವರ, ಕೆಮ್ಮು ಬರುತ್ತದೆ. ಮೂಗಿನ ಸೊಳ್ಳೆಗಳಿಂದ ಸಿಂಬಳ ಸುರಿಯುವುದು, ಮೂಗಿನ ಒಳಭಾಗದಲ್ಲಿ ಹುಣ್ಣುಗಳಾಗುತ್ತವೆ ಮತ್ತು ಕಾಲುಗಳ ಕೆಳಭಾಗದಲ್ಲಿ ಅಥವಾ ಹೊಟ್ಟೆಯ ಮೇಲೆ ಗಂಟುಗಳು ತಲೆದೋರುತ್ತವೆ. ಇದರಿಂದಾಗಿ ರೋಗ ದೇಹದಲ್ಲಿ ಪಸರಿಸಿ ಕೆಲವೇ ದಿವಸಗಳಲ್ಲಿ ಪ್ರಾಣಿ ಸಾಯುತ್ತದೆ"[೯೧]. ಚಾವುಂಡರಾಯ ಸಿಂಬಳ ರೋಗವನ್ನು 'ಸೆಂಬ ರೋಗ'ವೆಂದು ಕರೆದು ಆ ರೋಗ ಲಕ್ಷಣವನ್ನು ಹೀಗೆ ಸೂಚಿಸಿದ್ದಾನೆ:

ಅನವರತಚ್ಛಜಳಮರಿ
ಸಿನವರ್ಣಂ ಮೊಸರವರ್ಣಮಾಗೊಸರ್ವೊಡೆ ಮೂ
ಗಿನೊಳನಿಲಪಿತ್ತ ಕಫಸಂ
ಜನಿತಂ ತರುಗಕ್ಕೆ ಸೆಂಬಮೆಂಬುದದಕ್ಕುಂ (೯-೨೨೩)"[೯೨]

ಈ ಪದ್ಯದೊಡನೆ ಮೇಲಿನ ಲಕ್ಷಣಗಳನ್ನು ಹೋಲಿಸಿದರೆ ಚಾವುಂಡರಾಯ ಸೆಂಬರೋಗ ಅರ್ಥಾತ್ ಸಿಂಬಳ ರೋಗದ ಎಲ್ಲ ರೋಗಲಕ್ಷಣಗಳನ್ನು ನಿರೂಪಿಸಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದರೂ ಆ ರೋಗದ ಬಹುಮುಖ್ಯ ಸ್ವರೂಪವನ್ನು ಪ್ರಕೃತ ಪದ್ಯ ಪರಿಚಯಿಸಿಕೊಡುತ್ತದೆ ಎನ್ನುವುದರಲ್ಲಿ ಅಡ್ಡಿಯಿಲ್ಲ. ಈ ರೋಗ ಕುರಿತು ಬೇರೆ ಕೃತಿಯಲ್ಲಿ ಹೇಳಿರುವುದಿಲ್ಲ.

ಮನುಷ್ಯರಂತೆ ಕುದುರೆಗಳಿಗೂ ರೋಗ ತಗುಲಲು ತ್ರಿದೋಷಗಳೇ ಕಾರಣವೆಂದು ಹಿಂದೆ ಹೇಳಿದೆ. ಈ ತ್ರಿದೋಷದಿಂದ ಉಂಟಾಗುವ ತ್ರಿರೋಗಗಳಿಗೆ ಚಿಕಿತ್ಸಾ ಕ್ರಮವನ್ನು ಈ ರೀತಿ ಹೇಳಲಾಗಿದೆ.

**ವಾತಜ್ವರ** : ವಾತಜ್ವರ ಗುಣಮುಖವಾಗಲು ಕುದುರೆಗೆ "ಅಂಟಲೆಕ್ಕಿಯ ಬೇರು, ನುಗ್ಗಿಯ ಬೇರು, ಕೋಲು ಮುಕ್ಕನ ತೊಗಟೆ, ಅತಿಬಜೆ, ವಿಳಂಗ, ಮಂಗುರುಳಿ, ಜೆತಿಸುಡೆ, ಪರ್ಪಾಟಕಿಯ ಕಷ್ಟಾಯವನ್ನು ಕೊಡುವುದರಿಂದ ವಾತ ಜ್ವರ ಉಪಶಮನವಾಗುತ್ತದೆ"[೯೩]

**ಪಿತ್ತಜ್ವರ** : ಪಿತ್ತಜ್ವರ ಕುದುರೆಗೆ ಹೆಚ್ಚಾಗಲು ಬಾಯಿ ಬತ್ತುತ್ತದೆ. ಸುರೆಯಲ್ಲಿ ಅಣಿಲೆಕಾಯಿ, ಹಿಪ್ಪಲಿ, ಇಂಗು, ಸಂವತ್ಸರಲವಣ, ನೊರೆಹಾಲಲ್ಲಿ ಸಕ್ಕರೆ ಪಾನಕಮಾಡಿ ಅದಕ್ಕೆ ಹಾಲಬತ್ತಿಯನ್ನೆರಿಸುವುದರಿಂದ ರಾಜಾನ್ನದಕ್ಕಿಯ ಓಗರವನ್ನು ಜೇನುತುಪ್ಪದಲ್ಲಿ ಕಲಿಸಿ ಕೊಡುವುದರಿಂದ"[೯೪]. ಹಾಗೂ ಕರಿಕೆಯ ಹುಲ್ಲನ್ನು ಹಾಕಿ ಗಾಳಿ, ಬಿಸಿಲು ಇಲ್ಲದ ಸ್ಥಳದಲ್ಲಿ ಕಟ್ಟಿದರೆ ಪಿತ್ತಜ್ವರ ಗುಣಮುಖವಾಗುತ್ತದೆ.

**ಶ್ಲೇಷ್ಮ(ಕಫ)ಜ್ವರ** : ಈ ಜ್ವರ ಬರಲು "ಮುಖದಲ್ಲಿ, ಕಣ್ಣಿನಲ್ಲಿ, ಶ್ಲೇಷ ಆಗಾಗ ಬೀಳುತ್ತಾ ಇರಲು ಮೇವು ತಿನ್ನದೇ ಇರಲು ಶ್ಲೇಷಜ್ವರದ ಲಕ್ಷಣವೆಂದು ಗುರುತಿಸಿ, ಈಶ್ವರಿಯ ಸಮೂಲವನ್ನು ತೊಳಿದು ಜೇನು

ತುಪ್ಪದಲ್ಲಿ ಕಲಸಿ ಕೊಡುವದು. ಸಮೂಲವನ್ನು ಹಾಗೆಯೇ ಕಳವೆಯ (ಜೋಳ) ಊಟವನ್ನು ಹೆಸರಕಟ್ಟನ್ನು ಕಲಿಸಿ ಕೊಡಬೇಕು"[೫]. ಹಾಗೂ ನೆಲಗುಂಬಳ, ದೇವದಾರಿಯ ತೊಗಟೆ, ಕೊತಂಬರಿಯ ಬೀಜ, ತಾವರೆಯ ಗಡ್ಡೆ ಇವುಗಳನ್ನು ಕೂಡಿಸಿ ಕಷಾಯವನ್ನು ಮಾಡಿ ಕೊಡಲು ಶ್ಲೇಷಜ್ವರ ಗುಣವಾಗುವುದು"[೬] ಎಂದು ಹೇಳಲಾಗಿದೆ. ಮುಂದುವರೆದು ಸನ್ನಿಪಾತಜ್ವರ, ಶಂಕರಜ್ವರ, ಲಘುಣಜ್ವರ, ಅಷ್ಟಜ್ವರ, ಮನ್ಮಥಜ್ವರ, ಇತ್ಯಾದಿ ರೋಗಗಳ ಲಕ್ಷಣ ಚಿಕಿತ್ಸಾಕ್ರಮಗಳನ್ನು ಹೇಳಲಾಗಿದೆ. ಅಲ್ಲದೆ ಕುದುರೆಗಳು ಕಾಸ, ಶೂಲೆ, ಹೊಟ್ಟೆಯುಬ್ಬರ, ಕ್ರಿಮಿ, ಅತಿಸಾರ, ರಕ್ತಮೂತ್ರ ಮೊದಲಾದ ರೋಗಗಳು ಬರುವುದುಂಟು. ಇವುಗಳಲ್ಲಿ ಶೂಲಿಯನ್ನು ಕುರಿತು;

ಶೂಲಿ ರೋಗದಲ್ಲಿ ಸುಭೀಕ್ಷೆ ಮತ್ತು ಹೊಟ್ಟೆಶೂಲಿ, ಬುಕ್ಷಾವರ್ತಶೂಲಿ, ಸ್ತನ್ಯಾವರ್ತಶೂಲಿ, ಮೂತ್ರಶೂಲಿ ಸದಾವರ್ತಶೂಲಿ, ಎತ್ತಲ ಅತಿದಾಪಶೂಲಿ, ರಕ್ತಶೂಲಿ, ಕ್ರಿಮಿದೋಷಶೂಲಿ, ವರ್ನಿವೆಸದಾವರ್ತಶೂಲಿ, ಬಿಂಬಾವರ್ತಶೂಲಿ, ತ್ರಿಭ್ರಮಶೂಲಿ, ಖಾಸವರ್ತಶೂಲಿ, ಸುಖಾವರ್ತಶೂಲಿ, ಪ್ರಾಹಿಕದಶೂಲಿ, ಪುರೀಷ ಶೂಲಿ ಪಾನೀಯಶೂಲಿ, ಕ್ಷುಧಾವರ್ತಶೂಲಿ, ಗುಲ್ಮಿಕಾವರ್ತಶೂಲಿ, ರಂಜನಿಶೂಲಿ, ಇತ್ಯಾದಿ ಶೂಲಿಗಳ ಲಕ್ಷಣ ಮತ್ತು ಔಷಧೋಪಚಾರಗಳು ಇವೆ. ಹಿರಿಯಣ್ಣ ಕವಿಯು ಹಯರತ್ನಶ್ರೇಣಿ ಕೃತಿಯಲ್ಲಿ ಶೂಲಿರೋಗಕ್ಕೆ ಔಷಧೋಪಚಾರವನ್ನು ಈ ಕೆಳಗಿನಂತೆ ಹೇಳಿದ್ದಾನೆ;

ನೆಲ ಬೇವು ಇಂದ್ರವಾರುಣಿ ಬ್ರಹ್ಮಿ ಹೆಗ್ಗುಳ(ಂ)
ನೆಲದವರಿಕೆ ಕತ್ತೆ ಗುರಬರಂಜಿಕೆಯರಡು
ನೆಲಗುಳ್ಳ ಪುರುಷರತ್ನಂಗಳ ಸಮೂಲ ಹೆಗ್ಗೂಡಚಿಗಾ
ಹುಲಿಗಲೀ ಅಪಮಾರ್ಗಗಳ ಬೇರು ಬಜೆಯಿಂ
ಗಳ ಕೋಲು ಮಕ್ಕುಗಳ ಸೆಕ್ಕೆ ಆಕಳರಿ
ಸಲೆ ಗಂಟು ಭಾರಂಗಿ ತಿಗಟೆ ಅತಿಬಜೆ ಶುಂಠಿ ಜಾಪಾರದೋವು(೭-೧)

ಚವೆ ಇಂಗು ಪತ್ರಿ ತ್ರಿಕುಟಕ ಯಕ್ಷಕ್ಷಾರ ಸೈಂ
ಧವಲವಣ ಲವಂಗವು ತ್ರಿಫಲೆ ಕರಿಬೇವು ಹೆಬ್ಬೇವು
ಯಿವರ ಮುಗುಳು ಹಾಲೆಯೆಂಬದರ ಬೀಜ ಗಜುಗಿನ ತಿರುಳ ಸಾಸಿವೆಗಳು
ಇವು ನಾಲ್ವತ್ತು ಸಮಗೂಡಿ ಚೂರ್ಣಿಸುತ ಮಾ
ನವ ಮೂತ್ರ ಗೋಮೂತ್ರ ಬಿಸಿ ನೀರೋಳಾದೊಡಂ
ತವಕದಿಂ ಮೂರು ಪಾವನು ಕುಡಿಸಲಾ ಹಯಕೆ ಹದಿನೆಂಟು ಶೂಲಿ ಮಾಣ್ಣು (೭-೨)"[೭]

ನೆಲಬೇವು, ಇಂದ್ರವಾರಣಿ, ಬ್ರಹ್ಮಿ, ಹೆಗ್ಗುಳ, ನೆಲದವರಿಕೆ, ಕತ್ತೆಗುರ, ಬರಂಜಿಕೆಯರಡು, ನೆಲಗುಳ್ಳ, ಪುರುಷರತ್ನ, ಸಮೂಲ, ಹೆಗ್ಗೊಡಚಿಗೆ ಹುಲುಗುಲಿ, ಅಪಾಮಾರ್ಗಗಳಬೇರು, ಬಜೆಗಳಕೋಲು, ಮುಕ್ಕಗಳಸೆಕ್ಕೆ, ಆಕಳಕರಿ, ಸೆಲೆಗಂಟು, ಬಾರಂಗಿ, ತಿಗಟೆ, ಅತಿಬಜೆ, ಶುಂಠಿ, ಜಾಪಾರದೋವು, ಚವೆ, ಇಂಗು, ಪತ್ರಿ, ತ್ರಿಕುಟಕ, ಯಪಕ್ಷಾರ, ಸೈಂದವಲವಣ, ಲವಂಗ, ತ್ರಿಫಲೆ, ಕರಿಬೇವು, ಹೆಬ್ಬೇವು, ಅದರ ಮುಗುಳು, ಹಾಲೆಬೀಜ, ಗಜುಗನ ತಿರಳು, ಸಾಸಿವೆ ಇಂತಹ ನಾಲ್ವತ್ತು ಪ್ರಕಾರದ ಔಷಧ ಜಾತಿಯ ಪ್ರಕಾರಗಳನ್ನು ಸಮಪ್ರಮಾಣದಲ್ಲಿ ಕೂಡಿಸಿ ಚೂರ್ಣಮಾಡಿ

ಮಾನವಮಾತ್ರ, ಗೋಮೂತ್ರ, ಬೀಸಿನೀರೊಳಗೆ ತವಕದಿಂದ ಮೂರು ಪಾವನ್ನು ಕುಡಿಸುವುದರಿಂದ ಹದಿನೆಂಟು ಪ್ರಕಾರದ ಶೂಲಿಗಳು ಗುಣವಾಗುತ್ತವೆ.

ಕುದುರೆಗಳಿಗೆ ಬಾವು, ತುರಿಕಜ್ಜಿ ಹಾಗೂ ವ್ರಣಗಳು ಉಂಟಾದಾಗ ಮಾಡಬೇಕಾದ ವೈದ್ಯೋಪಾಯಗಳು ಅಶ್ವವೈದ್ಯದಲ್ಲಿ ಕೆಲದೃಷ್ಟಿಯಿಂದ ಅರ್ಥಪೂರ್ಣವಾಗಿವೆ. ಇಂದಿಗೂ ನಾವು ಈ ವಿಧಾನಗಳನ್ನು ಅಳವಡಿಸಿಕೊಳ್ಳಬಹುದಾಗಿದೆ. ಅದರಲ್ಲಿ ಬಾವು ನಿವಾರಣೆ ಅನುಸರಿಬೇಕಾದ ಕ್ರಮ ಲೋಕೋಪಕಾರದಲ್ಲಿ ಹೀಗಿದೆ:

ಮ॥ ತರಗಂ ಕೊಳ್ಳುಳಿ ನುಗ್ಗಿ ಕಗ್ಗೊಱಲೆ ತೊಟ್ಟಿಲ್ ಸೂರಣಂ ಶುಂಠಿ ಯ।
ಜ್ಜಗೆಯಯ್ದುಪ್ಪುಗಳೆಕ್ಕೆ ಸಾಸಿವೆ ಹರಿದ್ರಾದ್ವಂದ್ವ ಮಿಾ ಪೇಟ್ದಿ ಮ।
ರ್ದುಗಳಂ ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯಾವ ಬಾ।
ವುಗಳಂ ತೀರ್ಚುಗುಮಲ್ಲದಂದೆಱೆಗೆ ಸದ್ಯಃಕ್ಷಾರಮಂ ತುಪ್ಪದೊಳ್ ॥೨೪೦॥

ಕಂ॥ ಹಯನಿಕರದ ಕಜ್ಜಿಗೆ ಕ।
ಳ್ಳಿಯ ಮಸಿಯಂ ತುಪ್ಪದೊಡನೆ ಪೂಸುಗೆ ಮುಂಡುಂ॥
ಗಿಯ ಮಸಿಯೊಡನಿರದೆಳ್ಳೆ।
ಣ್ಣೆಯನಱೆ ತಱೆಯಿಸುಮಿಲ್ಲದಂತಿರೆ ಪೋಕುಂ।೨೪೧॥

ಹರಣಿ॥ ಬೆರಸಿ ಭರದಿಂ ಮುನ್ನಂ ಗೋಮೂತ್ರದಿಂ ಬಟಿಕುಪ್ಪು ಸಿಂ।
ಧುರವರಿಸಿನಂ ಸದ್ಯಃಕ್ಷಾರಂಗಳೆಂಬಿವನಟ್ಟು ಸಿಂ॥
ಧುರುಹಸಿಹಿತಂ ಮೇಣ್ ಲೋಕೇಶ್ವರ ಶರಮುಂಖಿಯೆಂ।
ಬೆರಡಱೊಳಮಂತೊಂದ ತಂದಿಕ್ಕೆ ಕಜ್ಜಿಯನೋಡಿಕುಂ।೨೪೨॥

ಮ॥ ಅರಿದಾಳಂ ಪೊಸಸುಣ್ಣ ಮಿಂದ್ರಯ ವೆಕೇರ್ಗಂಧೋಜಳಂ (ಳಂ)? ದಾರು ಸಿಂ।
ಧುರಮಯ್ದುಪ್ಪು ಕಟುತ್ರಯಂ ರಜನಿ ಪದ್ಯಃ ಕ್ಷಾರಮೆಂಬಿಂತಿಮಂ ॥
ಸರಿಗೊಂಡಾಡಿನ ದುಗ್ಧದಿಂ ಸಮನೆ ಪೊಯ್ದೆಳ್ಳೆಣ್ಣೆಯಿಂದಟ್ಟನಂ।
ತರಮಿಂಬಾಗಿರೆ ಪೊಸೆ ಕಜ್ಜಿ ಮೊದಲಾದ ಶ್ವವ್ರಣ ಪಿಂಗುಗಂ ॥೨೪೩॥"[೮]

ತಗರ, ಕೊಳುಗಳಿಕೆ, ನುಗ್ಗೆ, ಕಗ್ಗೊರಲೆ, ತೊಟ್ಟಿಲ ಸಸ್ಯಗಳ ಸಮೂಲ, ಸೂರಣಗೆಡ್ಡೆ, ಶುಂಠಿ, ಅಜ್ಜಗೆ, ಪಂಚಲವಣ, ಎಕ್ಕೆಎಲೆ, ಸಾಸಿವೆ, ಅರಿಸಿನ, ಮರದರಿಸನ, ಈ ಔಷಧಗಳನ್ನು ಅರೆದು ಹುತ್ತದ ಮಣ್ಣಿನೊಂದಿಗೆ ನೀರಿನಲ್ಲಿ ಕದಡಿ ಬೇಯಿಸಬೇಕು. ಬಳಿಕ ಅದನ್ನು ಹದವರಿತು ಕುದರೆಗಾದ ಬಾಯುವಿಕೆಯ ಮೇಲೆ ಹೊಯ್ದು ಸೇಕ ಕೊಟ್ಟರೆ ಎಲ್ಲ ತೆರನಾದ ಬಾವುಗಳು ಇಂಗುವವು ಎಂದಿದೆ. ಈ ವಿಧಾನವನ್ನು ಈಗಲೂ ನಮ್ಮ ಊರಿನಲ್ಲಿ ಬಳಸುವುದನ್ನು ಕಂಡಿದ್ದೇನೆ. ಮತ್ತು ಸದ್ಯಕ್ಷಾರ ಪುಡಿಯನ್ನು ತುಪ್ಪದಲ್ಲಿ ಬೆರಸಿ ಬಾವುಗೆ ತೊಡೆವುದು ಕೂಡ ಅಷ್ಟೆ ಪರಿಣಾಮಕಾರಿ. ಅಶ್ವಗಳ ಕಜ್ಜಿಗೆ, ಕಳ್ಳಿಯ ಬೂದಿಯನ್ನು ತುಪ್ಪದಲ್ಲಿ ಕಲಸಿ ಹಚ್ಚುವುದು. ಹಾಗೆಯೇ ಉಪ್ಪುಸಿಂಧುರ, ಅರಿಶಿನ,

ಸದ್ಯಕ್ಷಾರಗಳ ಪುಡಿಯನ್ನು ಗೋಮೂತ್ರದಲ್ಲಿ ಅರೆದು ಅದಕ್ಕೆ ಸೈಂಧವಲವಣ, ಲೋಳೆಸರ, ಮುಳ್ಳುನುಗ್ಗೆ ಇವುಗಳಲ್ಲೊಂದರ ಚೂರ್ಣಗಳನ್ನು ಸೇರಿಸಿ ಕುದಿಸಿ ಹದವರಿತು ಹಚ್ಚುವುದರಿಂದ ತುರಿಕಜ್ಜಿಗಳು ಮಾಯುತ್ತವೆ. ಅರಿದಾಳ, ಹೊಸಸುಣ್ಣ, ಕೊಡಸಿಗನ ಬೀಜ, ಗಂಧಕ, ಮರದರಿಸಿನ, ಸಿಂಧುರ, ಪಂಚಲವಣ, ತ್ರಿಕುಟುಕ, ಅರಿಸಿನ, ಸರ್ಧ್ಯಕ್ಷಾರ ಇವುಗಳ ಚೂರ್ಣವನ್ನು ಸಮವಾಗಿ ತಗೆದುಕೊಂಡು ಆಡಿನ ಹಾಲಿನಲ್ಲಿ ಕಲಸಿ ಕುದುರೆಗಳ ತುರಿ ಹುಣ್ಣುಗಳಿಗೆ ಹಚ್ಚುವುದರಿಂದ ಅವು ಇಂಗುವವು ಎಂದಿದೆ.

ಜದುದತ್ತ ಕೃತ 'ಅಶ್ವವೈದ್ಯಕ' ಕೃತಿಯಲ್ಲಿ "ವಿವೇಕಿ ವೈದ್ಯನು ಮೊದಲು ಆಮ್ಲದಲ್ಲಿ ಸಂರಕ್ಷಿಸಿಡಲಾದ ಮುಲ್ಲಂಗಿಯಂಥ ಖಾದ್ಯ ಬೇರುಗಳಿಂದ ಹುಣ್ಣಿನಿಂದ ಕೆಟ್ಟರಕ್ತ ಹೊರಹೋಗುವಂತೆ ಶಾಖ ಕೊಡಬೇಕು. ಅನಂತರ ಅದರ ಮೇಲೆ ಜೇನು ಮತ್ತು ತುಪ್ಪಗಳೊಡನೆ ಬೆರಸಿದ ಮಧೂಕ ಪುಡಿಯನ್ನು ಹಾಕಿ ಪಟ್ಟಿಕಟ್ಟಿ ಅದರ ಮೇಲೆ ತುಪ್ಪ ಸುರಿಯಬೇಕು. ಅನಂತರ ಪಂಚವೃಕ್ಷಗಳು ತೊಗಟೆಯ ಪುಡಿಯನ್ನು ತುಪ್ಪದಲ್ಲಿ ಬೆರಸಿ ಹಚ್ಚುವುದು ಯುಕ್ತ"[೯೯] ಎಂದು ಹೇಳಿದೆ.

**ಮುಷ್ಕ (ಅಂಡಬೀಜ) ಅಥವಾ ಚಾಲೀರೋಗ :** ಮುಷ್ಕವು ಮೇಲೆ ಅಥವಾ ಕೆಳಗೆ ಹೋಗಿ ಸಿಕ್ಕಿಕೊಂಡಿದ್ದರೆ ಆಗ ಬಹಳ ನೋವನ್ನುಂಟು ಮಾಡುತ್ತದೆ. ಮುಷ್ಕವು ಯಾವ ಭಾಗಕ್ಕೆ ಚಲಿಸುತ್ತದೆಯೋ ಕುದರೆಯು ನಡೆಯುವಾಗ ಆ ಭಾಗದ ಕಾಲು ಕುಂಟುತ್ತದೆ. ಮುಷ್ಕದ ಚಲನದಿಂದ ಉಂಟಾಗುವ ಈ ವ್ಯಾಧಿಗೆ ಔಲೀ ಎಂದು ಕರೆಯುವರು. ಆಗ ಮುಷ್ಕವಿರುವ ಭಾಗಕ್ಕೆ ತೈಲದಿಂದ ಅಭ್ಯಂಗ ಮಾಡಿಸಿ, ಧ್ಯಾನದಿಂದ ಸ್ವೆದನ ಮಾಡಬೇಕು. ಆ ಕುದರೆಯನ್ನು ನಿರ್ವಾತ ಪ್ರದೇಶದಲ್ಲಿಟ್ಟು ಬಿಸಿಯಾದ ಆಹಾರವನ್ನು ಕೊಡಬೇಕು. ಅಂಡದ ಸಮೀಪದಲ್ಲಿರುವ ಸಿರೆಯನ್ನು ಛೇದನ ಮಾಡಿ ವೈದ್ಯನು ರಕ್ತಮೋಕ್ಷಣ ಮಾಡಿಸಬೇಕು. ಇದರಿಂದಲೂ ಕುದರೆಯು ಸ್ವಸ್ಥವಾಗದಿದ್ದರೆ ನಿರೂಹಬಸ್ತಿ ಮತ್ತು ಅನುವಾಸನ ಬಸ್ತಿಗಳನ್ನು ಕೊಡಬೇಕು. ನಿಪುಣನಾದ ವೈದ್ಯನು ಯಾವ ಕಡೆಗೆ ಚೌಲೀವ್ಯಾದಿ ಇದೆಯೋ ಆ ಭಾಗದ ತಿಕಪ್ರದೇಶದಲ್ಲಿ ಬರೆ ಹಾಕಬೇಕು"[೧೦೦].

**ಉತ್ಕರ್ಣ ರೋಗ :** ವಾತದೋಷದಿಂದ ಉಂಟಾಗುವ ಉತ್ಕರ್ಣಕ ಎಂಬ ರೋಗದಿಂದ ಕುದುರೆಯ ಕಿವಿಗಳೆರಡೂ ಶಂಕುಗಳಂತೆ ನೇರವಾಗಿ ನಿಂತಿರುತ್ತವೆ. ಕಣ್ಣುಗುಡ್ಡೆಗಳು ತಿರುಗುತ್ತಿರುತ್ತವೆ. ಶರೀರದಲ್ಲೆಲ್ಲ ಸ್ತಂಭನ ಸೆಟೆಯುವಿಕೆ ಉಂಟಾಗುತ್ತದೆ. ಆಗ ಕರ್ಣ ಮೂಲಗಳಿಂದ ಆರಂಭಿಸಿ ಸ್ಕಂದಗಳ ಪಾರ್ಶ್ವದಲ್ಲಿ (ಹೆಗಲಿನ ಪಕ್ಕ) ಹಾದು ಬೆನ್ನೆಲುಬಿನ ಅಕ್ಕಪಕ್ಕಗಳಲ್ಲಿ ಸಾಗಿ, ತಿಕಪ್ರದೇಶದ ಮಧ್ಯಭಾಗಕ್ಕೆ ಸೇರುವಂತೆ ಸ್ಥೂನದವರೆಗೆ ಎರಡು ರೇಖೆಗಳನ್ನು ಕಾದ ಶಲಾಕೆಯಿಂದ ಎಳೆಯಬೇಕು. ಮೂರು ದಿನ ತುಪ್ಪದಿಂದ ಅಭ್ಯಂಗ ಮಾಡಿಸಿ, ಬಿಸಿ ನೀರನ್ನು ಯವಕ್ಷಾರ ಮತ್ತು ಎಳ್ಳೆಣ್ಣೆ ಸೇರಿಸಿ ಕುಡಿಸಬೇಕು. ಮನ್ಯಾಸ್ತಂಭ (ಹೆಕ್ಕತ್ತಿನ ಜಾಗದಲ್ಲಿ ಹಿಡಿದುಕೊಳ್ಳುವುದು) ಉಂಟಾದರೆ ಸ್ನೇಹ ಸ್ವೇದನಗಳನ್ನು ಮಾಡಿ ಮನ್ಯಾ ಪ್ರದೇಶದಲ್ಲಿರುವ ಪೃಷ್ಠವಂಶದ ಅಕ್ಕಪಕ್ಕ ಇರುವ ಎರಡು ಸೀರೆಗಳನ್ನು ಛೇದಿಸಿ ರಕ್ತಸ್ರಾವಮಾಡಿಸಿ ನಂತರ ನಸ್ಯ ಕರ್ಮವನ್ನು ಸಹ ಮಾಡಬೇಕು.

ಆಕಳಕರಿ, ಶುಂಠೀ, ಅರಿಶಿನ, ಸಣ್ಣರಾಸ್ಮೆ, ಇಂಗು, ಚಂಗಲ್‌ಕೋಷ್ಠ, ರಸಾಂಜನ, ಹಿಪ್ಲಿ, ನವಣೆ ಇವುಗಳ ಚೂರ್ಣವನ್ನು ಸಣ್ಣರಾಶ್ಮೆಯ ಕಷಾಯದಲ್ಲಿ ಭಾವನೆಮಾಡಬೇಕು. ಹಸುವಿನ ಕೊಂಬು, ನವಿಲುಗರಿ, ಬಿಳಿ ಕರಡಿಯ ಕೂದಲು, ಉಗುರು ಮತ್ತು ಹಲ್ಲುಗಳು, ಹಾಗೆಯೇ ಆನೆಯ ಕೂದಲು, ಉಗರು ಮತ್ತು ಬಿಳಿ

ಸಾಸಿವೆ ಇವುಗಳ ಕುಟ್ಟಿ ಚೂರ್ಣ ಮಾಡಿಕೊಂಡು ಮೇಲೆ ಹೇಳಿದ ಎಲ್ಲ ಚೂರ್ಣಗಳನ್ನು ಬೆರಸಿ ಕುದುರೆ ಲಾಯಗಳಲ್ಲಿ ಧೂಪವನ್ನು ಹಾಕುವುದರಿಂದ ಕುದುರೆಯ ಶರೀರದಲ್ಲಿ ಪ್ರವೇಶಿಸುವ ಎಲ್ಲ ವಿಧವಾದ ಗ್ರಹಗಳೂ ಉಚ್ಚಾಟಿಸಲ್ಪಡುತ್ತವೆ"[೧೦೯]. ಹೀಗೆ ಸರ್ವಜ್ಞ ಸೋಮೇಶ್ವರ ಅನೇಕ ಗಿಡಮೂಲಿಕೆಗಳಿಂದ ಔಷಧವನ್ನು ತಯಾರಿಸಿ ಉಪಯುಕ್ತವಾದ ರೀತಿಯಲ್ಲಿ ಕುದುರೆಗೆ ಬರುವ ಲಕ್ಷಣಗಳನ್ನು ಅರಿತು ಅವು ಮಾಡುವ ವರ್ತನೆಗಳನ್ನು ಗಮನಿಸಿ ವಿವಿಧ ಬಗೆಯಾಗಿ ಉಪಚರಿಸಿದ ಕ್ರಮಗಳನ್ನು ತನ್ನ ಕೃತಿಯಲ್ಲಿ ಹೇಳಿದ್ದಾನೆ. ಒಬ್ಬ ಶ್ರೇಷ್ಠ ಚಕ್ರವರ್ತಿ ಅಷ್ಟೇ ಅಲ್ಲ ಒಬ್ಬ ಸಮರ್ಥ ವೈದ್ಯನಂತೆ ನಮಗೆ ಗೋಚರಿಸುತ್ತಾರೆ. ಸಮಾಜದ ಕಷ್ಟ ಕಾರ್ಪಣ್ಯಗಳ ಜೊತೆಗೆ ಒಂದು ಪ್ರಾಣಿಯ ಆರೈಕೆ, ಉಪಚಾರ, ಪಳಗಿಸುವ ಕ್ರಮ, ಸೈನ್ಯದ ವ್ಯವಸ್ಥೆ ಜೊತೆಗೆ ಜೋತಿಷ್ಯಶಾಸ್ತ್ರ, ವೈದ್ಯಶಾಸ್ತ್ರ ಮುಂತಾದವುಗಳ ಜ್ಞಾನ ಸಾಗರವನ್ನು ಹೊಂದಿರುವುದು ಈತನ ಕೃತಿಯಿಂದ ತಿಳಿದುಬರುವ ಪ್ರಮುಖ ಅಂಶಗಳಲ್ಲೊಂದು.

ರಾಮಚಂದ್ರ ಕವಿಯ ಅಶ್ವಶಾಸ್ತ್ರದ ಟೀಕು ಅಪ್ರಕಟಿತ ಹಸ್ತಪ್ರತಿಯಲ್ಲಿ ಕುದುರೆಗಳಿಗೆ ಬರುವ ಕೆಲವು ರೋಗಗಳ ಕುರಿತಂತೆ ಚಿಕಿತ್ಸೋಪಾಯಗಳು ಈ ಕೆಳಗಿನಂತಿವೆ;

**ಮೈಬಡವಾದರೆ :** ಕುದುರೆಗೆ ಉದಯ ಕಾಲದಲ್ಲಿ ಹಸುವಿನ ಹಾಲನ್ನು ಕುಡಿಸುವುದು. ಮಧ್ಯಾಹ್ನದಲ್ಲಿ ಸುರೆಯನ್ನು ಕುಡಿಸುವುದು. ಸಂಜೆಯ ಸಮಯದಲ್ಲಿ ಗೋಮೂತ್ರಬೆರಸಿದ ಕವಳ ಮೊದಲಾದ ಆಹಾರವನ್ನು ಕೊಡುವುದು. ಸಾಸಿವೆ, ಶುಂಠಿ, ಹಿಪ್ಪಲಿ, ಸೈಂಧವಲವಣ ಇದನ್ನು ಜೇನುತುಪ್ಪ ಹಸುವಿನ ತುಪ್ಪದಲ್ಲಿಯಾದರೂ ಕಲಸಿ ಅಳಲೆಕಾಯಿ, ನೆಲ್ಲಿಯಚೆಟ್ಟು, ಕಾರೆಯಕಾಯಿ ಇದರ ರಸದಲ್ಲಿ ಕಲಸಿ ಅಳಲೆಕಾಯಿ, ನೆಲ್ಲಿಯಚೆಟ್ಟು, ಕಾರೆಯ ೨ಬಗೆಯ ಜೋಳ, ಇಷ್ಟ ಮದುಕ, ಸರಳದೇವದಾರು, ಶ್ರೀಗಂಧ, ದೇವದಾರು ನೈದಲೆಗಡ್ಡೆ ಇದನ್ನು ಸುಗಂಧಿ ರಸದಲ್ಲಿ ಅರೆದು ಹಾಲಿನಲ್ಲಿ ಕಲಸಿ ಮೈಗೆ ಲೇಪಿಸುವುದು.

**ಬಡಮರಿಗೆ :** ಒಂದು ವರುಷದ ಮರಿಗೆ ಒಂದು ಬಳ್ಳ ಜೇನು ತುಪ್ಪವನ್ನು ಕುಡಿಸುವುದು. ಕುದುರೆಯ ಮೈಯ್ಯ ಬಡಮನರಿತು ಒಂದು ಬಳ್ಳ ಸುರೆಯನು ಕುದುರೆಯತಕ್ಕಂತೆ ಕುಡಿಸುವುದು. ಕುದುರೆಯ ಶಿಶ್ನದ ತುದಿಯಲ್ಲಿ ಮೂತ್ರಬರುವ ಕಡಿಯ ಆಸನದಲ್ಲಿ, ಬೆರಳುದ್ದದ ಪ್ರಮಾಣದಲ್ಲಿ ಎಣ್ಣೆಯ ಬತ್ತಿಯ ಮಾಡಿ ೩ದಿವಸ, ಮೂರು ವೇಳೆಯಲ್ಲಿ ಏರಿಸುವುದು.

**ಸನ್ನಿಪಾತ :** ತೊಳಚಿಯ ಸೊಪ್ಪು, ನುಗ್ಗೆಯ ಸೊಪ್ಪು, ಲೊಕ್ಕಿಯಸೊಪ್ಪು ಇವನ್ನು ತಂದು ಕುದುರೆಗೆ ಶಾಖವನ್ನು ಕೊಡಲು ಸನ್ನಿಪಾತ ಮೊದಲಾದ ವ್ಯಾದಿಗಳು ಗುಣವಾಗುತ್ತವೆ. ಈ ಸೊಪ್ಪುಗಳನ್ನು ತಂದು ಕಡುಬೆಯ್ಯುವ ಹಾಗೆ ಹುರಿದು ನೆನೆದ ಪಾವುಡೆಯಲ್ಲಿ ಹಾಕಿ ಮೈಗೆ ಸೊಗಯಿಸುವಂತೆ ಶಾಖವನ್ನು ಕೊಡುವುದು ಉತ್ತಮ.

**ಮೈಬಾವು :** ಕಡುಮಳೆಯಲ್ಲಿ, ಕಡುಗಾಳಿಯಲ್ಲಿ ಬಿಡದೆ ಸುರಿಯುವ ಸೊನೆಯಲ್ಲಿ ಮೈಬಾತ ಕಡೆಯಲ್ಲಿ ಕರ್ಪುರವನ್ನು ತಂದು ಸುಟ್ಟು ಶಾಖವನ್ನು ಕೊಡಬೇಕು. ಹೀಗೆ ದಿನಕ್ಕೆ ಮೂರು ವೇಳೆಯಲ್ಲಿ ಶಾಖವನ್ನು ಕೊಟ್ಟರೆ ಶೋಭೆಯು ಉಂಟಾಗುವುದು.

**ಸನ್ನಿಬಾವು :** ಆನೆಯ, ಒಂಟೆಯ, ಕುದರೆಯ, ಕತ್ತೆಯ ಲದ್ದಿಯನ್ನು ತಂದು ಗತ್ತವನು ಮಾಡಿ ಇವುಗಳನ್ನು ಕೂಡಿಸಿ ಇದರ ಜೊತೆಗೆ ಮಂದನೆಯ ಹೆಸರನ್ನು ಕೂಡಿಸಿ ಕಲಸಿ ಕುದುರೆಯ ಮೈಗೆ

ಲೇಪಿಸುವುದು. ನಂತರ ಶಾಖವನ್ನು ಕೊಡುವುದು. ಸನ್ನಿಬಾವು ಮುಂತಾದ ರೋಗಗಳು ಮಾಯುವವು. ಹಾಗೆಯೇ ಜ್ವರವು ಕಾಯುತ್ತಿರುವ, ಅತಿಸಾರವಾಗಿರಲು, ಮೈಯಲ್ಲಿ ಹೂವು ಹೆಚ್ಚುತ್ತಿರಲು, ದೊಡ್ಡ ಭಾರವ ಹೊತ್ತು ಬೆನ್ನಲ್ಲಿ ಬೆಂದಿರಲು, ಮೈಲುಬ್ಬಸವಾಗಿರಲು ಮೇಲೆ ಹೇಳಿದ ಶಾಖವನ್ನು ಕೊಡುವುದು.

**ಬಾವುರೋಗ :** ಶುಂಠಿ, ಹಿಪ್ಪಲಿ, ಮೆಣಸು, ಬಜೆ, ಬೆಲ್ಲ, ಸುಣ್ಣ, ಕಪ್ಪೆಯಸೊಪ್ಪು, ಜಟಾಮಾಂಸಿ, ಈ ಎಲ್ಲ ಎಂಟು ಔಷಧಗಳನ್ನು ಸಮಭಾಗ ಮಾಡಿ, ಒಂದು ಭಾಗ ಸೋಮನಾಥನ ಇಂಗಿನ ಪುಡಿ, ಹಾಕಿ ಅದಕ್ಕೆ ಹವಣದಷ್ಟು ಎಣ್ಣೆಯ ಕೂಡಿಟ್ಟು, ಆ ಎಣ್ಣೆಯನ್ನು ಕುದುರೆಯ ಮೈಗೆ ಹಚ್ಚುವುದು ಮತ್ತು ಕೊಡುವುದು. ತೊಡೆಗಳು, ಮೊಳಕಾಲ ಕೆಳಗಡೆ, ತಲೆ, ಕಿಬ್ಬೊಟ್ಟೆ, ವೃಕ್ಷಣಗಳು, ಹೊಕ್ಕಳು, ಹೊಟ್ಟೆ ಕಿವಿ ಮೊದಲಾದವು ಬಾತರೆ ಆ ಎಣ್ಣೆಯ ಕೊಡುವುದು. ತೊಡೆಯಲ್ಲಿ ಮತ್ತು ತೊಡೆಯಿಂದ ಕೆಳಗಡೆಯಲ್ಲಿ ಈ ಎಣ್ಣೆಯ ಕೊಟ್ಟ ಕೆಸರು ಬಳಿಯಲು ಬಾವು ಗುಣವಾಗುವದು. ವಾಕ್‌ದೋಷ ಸಹ ನಾಶವಾಗುತ್ತದೆ. ಕಗ್ಗಲಿಯ ತಪ್ಪಲು ತಳಿದು ರಸ ಮಾಡಿಕೊಂಡು ಆ ರಸವನ್ನು ವೃಕ್ಷಣಗಳಲ್ಲಿ ಬಳಿಯುವದು. ಅದರಿಂದ ಬಾವು ಗುಣವಾಗುತ್ತದೆ. ತಲೆಯಲ್ಲಿ ಕೊಂಬು ಬಂದಂತೆ ಎಬ್ಬಿಕೊಂಡಿರಲು ಆ ರಸವನ್ನು ಕೊಡುವುದರಿಂದ ಕುಗ್ಗುವದು. ಕಗ್ಗಲಿಸೊಪ್ಪು ತಳಿದು ಅಂಬಿಲದಲ್ಲಿ ಕವಳವಿಡಲು ವೃಷಣ ಬಾವು ಗುಣಹೊಂದುತ್ತದೆ. ಒಂದು ಬೀಜ ಮೇಲಕ್ಕೇರಿರಲು, ಒಂದು ಕೆಲಕ್ಕೆ ಇಳಿದಿರಲು ಇದು ವಾಕ್‌ದೋಷದಿಂದ ವೃಕ್ಷಣಗಳಲ್ಲಿ ಶೂಲಿಯೆಂದು ತಿಳಿದುಕೊಳ್ಳಬೇಕು"[೧೦೨].

ಬೇರೆ ಕೃತಿಯಲ್ಲಿ ಬೇರೆ ಬೇರೆ ತೆರನಾದ ಔಷಧೋಪಚಾರವನ್ನು ಅತ್ಯಂತ ಸರಳವಾಗಿ ದೊರೆಯುವ ಮೂಲಿಕೆಗಳಿಂದ ಬಾಹುವ್ಯಾದಿ ನಿವಾರಣಾ ಉಪಾಯವನ್ನು ಹೇಳಿದ್ದಾರೆ.

**ಮೂತ್ರ ಕೃಚ್ಛಕ ರಕ್ತಮೂತ್ರ** : ರಾಮಚಂದ್ರ ಕವಿಯು ಅಶ್ವಶಾಸ್ತ್ರ ಟೀಕು ಕೃತಿಯಲ್ಲಿ ರಕ್ತ ಮೂತ್ರಕ್ಕೆ ಉಪಚಾರದ ವಿವರಗಳನ್ನು ತಿಳಿಸುತ್ತಾ ಈ ರೀತಿ ಹೇಳುತ್ತಾನೆ. "ಕಡು ಬಿಸಿಲಕಾದರೆ. ಕಡುಬಾಯಾರಿ ನೀರು ಕುಡಿಯದಿದ್ದರೆ ಮೂತ್ರ ಕೃಚ್ಛೆವ್ಯಾದಿ. ಕುದುರೆಯು ಪಡೆಯ ಸಂಗಡ ಹೋಗಿ ದೂಡಿಸಿ ಬೀಳುವುದು ಏಳುವುದು, ಬೆವರು ಮೈಯಲ್ಲಿ ಹೊರಹೊಮ್ಮುವುದು ಇದರಿಂದ ವೃಷಣಬಾಯಿವುದು, ಅದಕ್ಕೆ ಮೂತ್ರಕೃಚೆ ಎನ್ನುವರು. ಹಿಪ್ಪಲಿ, ಮೆಣಸು, ಸೈಂಧವಲವಣ, ಶುಂಠಿ, ಗರುಗ, ಇಂಗು, ಸಾಸಿವೆ, ಇವನ್ನು ಸಮಭಾಗಮಾಡಿ ಅರೆದು ನೀರಲ್ಲಿ ಕಲಸಿ ಕುದುರೆಗೆ ಕೊಡುವುದು. ತಿಗದಲ್ಲಿ ವೃಷಣಂಗಳಲ್ಲಿ ಹಚ್ಚುವುದು. ಮೂತ್ರ ಚೆನ್ನಾಗಿ ಬೀಳುವುದಕ್ಕೆ ಶುಂಠಿಯನ್ನು ನೀರಿನಲ್ಲಿ ಅರೆದು ಮರ್ದಿಸಿ ಕುದುರೆಯ ಕಣ್ಣಿಗೆ ಹಚ್ಚುವುದು. ಮೂಗಿನೊಳಗೆ ನಸ್ಯವನ್ನು ಮಾಡಿಸುವುದು"[೧೦೩] ಎನ್ನಲಾಗಿದೆ.

ಈ ಮೇಲೆ ವಿಷದಪಡಿಸಿದ ರೋಗ-ಲಕ್ಷಣ-ವಿಧಿವಿಧಾನಗಳು ಮಾತ್ರವಲ್ಲದೆ ಇನ್ನೂ ಅನೇಕ ರೊಗಗಳಾದ ಶೋಣುಕ ಮೋಹ, ವಜ್ರಕೀಟ, ಸಿಮ್ಲಾವೇಣು, ಗೂಷ್ಮಗೋಷ್ಠ, ಉಷ್ಣರೋಗ, ವಾಯುರೋಗ, ತಳರೋಗ, ಹರಿಣರೋಗ, ತಾಳುರೋಗ, ವಾಯುರೋಗ, ತಳರೋಗ, ನಾಲಗೆರೋಗ, ಕೂರ್ಚರೋಗ, ಶೋಭೆರೋಗ, ಅತಿಸಾರ ಇದರಲ್ಲಿ ವಾತ ಅತಿಸಾರ, ರಕ್ತಾತಿಸಾರ, ಶ್ಲೇಷ್ಮಾತಿಸಾರ, ಅಂಡಬಾಹು, ಮುಷ್ಕನಾಳ, ಉಳೂಕ, ತದ್ದು ರಸದೋಷ, ರಕ್ತಮೇಹ, ಸಿಂಹ್ವಾಣರೊಗ, ರಕ್ತ ಸಿಂಹ್ವಾಣ, ಜಲಗರರೋಗ, ನಾಳೀವ್ರಣ ಇತ್ಯಾದಿ ರೋಗಗಳಿಗೆ ಲೋಕೋಪಕಾರ, ಅಭಿನವಚಂದ್ರನ ಅಶ್ವಶಾಸ್ತ್ರ, ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ, ಇತ್ಯಾದಿ ಕೃತಿಗಳಲ್ಲಿ ಪ್ರಕಟಗೊಂಡಿವೆ. ಅವುಗಳನ್ನು ಪರಿಶೀಲಿಸಬಹುದು.

ಪ್ರಾಚೀನ ಕಾಲದಲ್ಲಿ ಕುದುರೆಗಳಿಗೆ ಶಸ್ತ್ರ ಚಿಕಿತ್ಸೆಯನ್ನು ಮಾಡುವ ಮೂಲಕ ಪ್ರಾಣಿರಸ ಗಂಟುಗಳು, ಮಧುಪಂಕಜ ಗಂಟುಗಳು, ಗತಿ, ಭಂಗರಸದ ಗಂಟು, ಇತ್ಯಾದಿಗಳನ್ನು ಗುಣಪಡಿಸಿದ ವಿವರಗಳು ಕಂಡುಬರುತ್ತವೆ. ಈ ತೆರನಾಗಿ ಗಿಡಮೂಲಿಕೆಗಳಿಂದ ತಯಾರಿಸಿದ ದೇಸೀ ವೈದ್ಯ ಪದ್ಧತಿ ಹೆಚ್ಚು ಮನ್ನಣೆಯನ್ನು ಹಿಂದಿನಿಂದ ಹಿಡಿದು ಇಂದಿನವರೆಗೆ ನಡೆದುಕೊಂಡು ಬಂದಿದೆ. ಶಾಲಿಹೋತ್ರನನ್ನು ಅನುಸರಿಸಿ ಬರೆದು ಎಲ್ಲಾ ಶಾಸ್ತ್ರಕಾರರು ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು ತಮಗೆ ಹೊಳೆದ ಹೊಸ ಆಲೋಚನೆಗಳನ್ನು ಪ್ರಯೋಗ ಮಾಡಿ ಅದರಿಂದ ರೋಗಗಳಿಗೆ ಚಿಕಿತ್ಸೆ ಕಂಡುಕೊಂಡಿದ್ದಾರೆ. ಚಾವುಂಡರಾಯ ಕೊಡುವ ಮತ್ತು ಅನಂತರ ಬಂದ ಶಾಸ್ತ್ರಕಾರರ ಪಟ್ಟಿಗೂ ಬದಲಾವಣೆ ಕಂಡುಬರುತ್ತದೆ. ಔಷಧ ಕೊಡುವ ವಿಧಾನದಲ್ಲಿಯೂ ಸಹ ಭಿನ್ನತೆಯನ್ನು ಕಾಣುತ್ತೇವೆ. ಇದಕ್ಕೆ ಕಾರಣ ಈ ವೈದ್ಯಪದ್ಧತಿ ಪ್ರಕೃತಿ ಆಧಾರಿತವಾದ್ದರಿಂದ ಪ್ರಾದೇಶಿಕತೆಗೆ ತಕ್ಕಂತೆ ದೊರೆಯುವ ಸಸ್ಯ ಸಂಪತ್ತನ್ನು ಉಪಯೋಗಿಸಿಕೊಂಡು ನಮ್ಮ ಜನಪದರು ತಮ್ಮ ಸುತ್ತಮುತ್ತಲು ಸಿಗುವ ವಸ್ತು ಮತ್ತು ಸಸ್ಯಗಳನ್ನೆ ಉಪಯೋಗಿಸಿಕೊಂಡು ತಮಗೆ ಮತ್ತು ತಮ್ಮ ಪ್ರಾಣಿಗಳಿಗೆ ತಗುಲಿದ ರೋಗಗಳಿಗೆ ಚಿಕಿತ್ಸಾ ಕ್ರಮಗಳನ್ನು ಕಂಡುಕೊಂಡಿದ್ದಾರೆ. ಇದು ಈಗಲೂ ಮುಂದುವರಿದುಕೊಂಡು ಬಂದಿದೆ. ಹೀಗೆ ಅಶ್ವಶಾಸ್ತ್ರಜ್ಞರು ತಮ್ಮ ಗ್ರಂಥಗಳಲ್ಲಿ ಕುದುರೆಯ ಪ್ರಾಮುಖ್ಯತೆಯನ್ನು ಅರಿತು ವೈದ್ಯೋಪಚಾರದ ಕಡೆಗೆ ಹೆಚ್ಚು ಒಲವು ತೋರಿದಂತೆ ಕಂಡುಬರುತ್ತದೆ.

### ೪.೧.೨.೩. ಗಜವೈದ್ಯ

ಗಜ ಎಂದರೆ ಆನೆ. ಆನೆಗಳಿಗೆ ಚಿಕಿತ್ಸಾ ವಿದಿವಿಧಾನಗಳನ್ನು ಮಾಡುವ ವೈದ್ಯವೇ ಗಜವೈದ್ಯ. ಗಜ ಅಥವಾ ಆನೆಯು ಮನುಷ್ಯ ನಂಬಿಗಸ್ತ ಪ್ರಾಣಿಗಳಲ್ಲಿ ಒಂದು. ಪ್ರಾಚೀನ ಕಾಲದಲ್ಲಿ ಆನೆಗಳನ್ನು ಯುದ್ಧಸಂದರ್ಭದಲ್ಲಿ ಗಜಸೇನೆಯೆಂದೆ ಬಳಸುತ್ತಿದ್ದರು. ಗಜಯುದ್ಧ, ಗಜವೇಂಟೆಗಳಲ್ಲಿ ಕನ್ನಡಿಗರಿಗೆ ಪ್ರಾಚೀನಕಾಲದಿಂದಲೂ ಆಸಕ್ತಿ. ಗಂಗರಸರಾದ ದುರ್ವಿನೀತ, ವಿಕ್ರಮ ಮುಂತಾದ ಅರಸರು ಆನೆಗಳ ಬಗ್ಗೆ ತೀವ್ರ ಆಸಕ್ತಿಯನ್ನು ಹೊಂದಿದ್ದರು ಎಂಬುದು ತಿಳಿದುಬರುತ್ತದೆ. ಅವರು ಆನೆಯನ್ನು ತಮ್ಮ ರಾಜ ಚಿಹ್ನೆಯನ್ನಾಗಿ ಇಟ್ಟುಕೊಂಡಿದ್ದನ್ನು ಇಲ್ಲಿ ಸ್ಮರಿಸಬಹುದು. ಹೀಗಾಗಿ ಆನೆಗಳನ್ನು ಸಾಕಿ ಸಲುಹುವುದು ಬಹುಮುಖ್ಯವಾಗಿತ್ತು. ಆನೆಗಳು ರೋಗಕ್ಕೆ ತುತ್ತಾದಾಗ ಮತ್ತು ಗಾಯಗಳಾದಾಗ ಅವುಗಳಿಗೆ ಚಿಕಿತ್ಸೆ ಮಾಡುವುದು ಅನಿವಾರ್ಯವಾಗಿತ್ತು. ಅದಕ್ಕಾಗಿ ಗಜವೈದ್ಯಕ್ಕೆ ಸಂಬಂಧಿಸಿದ ಕೃತಿಗಳು ರಚನೆಯಾಗಿವೆ. ಈ ಕೃತಿಗಳಲ್ಲಿ ಗಜಗಳ ಕಾಯಿಲೆಗಳು, ಅವುಗಳ ಗುಣಲಕ್ಷಣಗಳು, ಚಿಕಿತ್ಸಾ ವಿಧಿವಿಧಾನಗಳನ್ನು ಒಳಗೊಂಡಿವೆ.

ಗಜವೈದ್ಯ ಎಂದು ಪ್ರತ್ಯೇಕ ಕೃತಿಗಳು ಕನ್ನಡದಲ್ಲಿ ಲಭ್ಯವಾಗಿರುವುದಿಲ್ಲ. 'ಗಜಾಷ್ಟಕ' ಎಂಬ ಕೃತಿ ಸೈಗೊಟ್ಟ ಶಿವಮಾರನಿಂದ ರಚಿತವಾಗಿದ್ದು ತಿಳಿದುಬರುತ್ತದೆ. ಆದರೆ ಅದು ಅನುಪಲಬ್ದ ಕೃತಿಯಾಗಿದೆ. ಶಿವಮಾರನ ಈ 'ಗಜಾಷ್ಟಕ'ವು ನಾಡಿನಲ್ಲಿ ಒನಕೆವಾಡಾಗಿ ಪರಿಣಮಿಸುವಷ್ಟು ಜನಪ್ರಿಯವಾಗಿತ್ತೆಂದು ಹುಮ್ಮಚ ಶಾಸನದಲ್ಲಿ ಹೇಳಲಾಗಿದೆ. ಮೊದಲನೆಯ ಶಿವಮಾರನನ್ನು 'ಗಜದಾನಮನರ್ಥಿಗಿತ್ತುಚಾಗಿ' ಎನಿಸಿದ ಮಹಾದಾನಿ ಎಂದೂ ಈತನ ಮೊಮ್ಮಗ ಶ್ರೀಪುರುಷ 'ಗಜಶಾಸ್ತ್ರಕರ್ತೃ' ಎಂದು ಉಲ್ಲೇಖಿಸಲಾಗಿದೆ. ಈ ಶ್ರೀಪುರುಷನ ಮಗನೆ ಎರಡನೇ ಶಿವಮಾರನಾಗಿದ್ದು. ಈತನೆ 'ಗಜಮತ ಕಲ್ಪನಾ' ಹಾಗೂ ಕನ್ನಡದ 'ಶಿವಮಾರಮತದ' ಕರ್ತೃ ಎಂದು ಡಾ.ಎಂ.ಎಂ. ಕಲಬುರ್ಗಿಯವರು 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ' ಕೃತಿಯಲ್ಲಿ

ಅಭಿಪ್ರಾಯಪಡುತ್ತಾರೆ. ನೃಸಿಂಹ ವೀರರಾಂಚಿಯರ ಪುತ್ರನಾದ ವೀರಭದ್ರರಾಜನು (೧೬೦೦) ಪಾಲಕಾಪ್ಯನ ಸಂಸ್ಕೃತ ಹಸ್ತಾಯುರ್ವೇದ ಕೃತಿಗೆ ಟೀಕು ಬರೆದು ಪಾಲಕಾಪ್ಯ ಕೃತಿ 'ಹಸ್ತಾಯುರ್ವೇದ ಟೀಕೆ' ಎಂಬ ಹೆಸರಿನ ಕೃತಿ ರಚಿಸಿದ್ದಾನೆ. ಇದರಲ್ಲಿ ಗಜವೈದ್ಯಕ್ಕೆ ಸಂಬಂಧಿಸಿದ ರೋಗಗಳು ಹಾಗೂ ಚಿಕಿತ್ಸೆಗಳ ಕೆಲವು ವಿಚಾರಗಳನ್ನು ನಿರೂಪಿಸಲಾಗಿದೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕ್ರಮಾಂಕ ಕೆ.೧೫೮೫ ನಂಬರಿನಲ್ಲಿ ದೊರೆಯುತ್ತದೆ. ಆದರೆ ಈ ಹಸ್ತಪ್ರತಿ ತೃಟಿತವಾಗಿದ್ದು ಅಸ್ಪಷ್ಟವಾಗಿದ್ದರಿಂದ ವಿಷಯ ಗ್ರಹಿಸುವುದು ಕಷ್ಟಸಾಧ್ಯವಾಗಿದೆ.

ಹೀಗೆ ಪ್ರತ್ಯೇಕ ಗಜವೈದ್ಯ ಕೃತಿಗಳನ್ನು ಹೊರತುಡಿಸಿದರೆ ಕನ್ನಡದಲ್ಲಿ ಚಾವುಂಡರಾಯನ ಲೋಕೋಪಕಾರ ಕೃತಿಯಲ್ಲಿ ಕೆಲವು ಗಿಡಮೂಲಿಕೆಗಳನ್ನು ಕುಟ್ಟಿ ಅದರ ರಸ ತೆಗೆದು ಆನೆಗಳಿಗೆ ಕುಡಿಸುವುದರಿಂದ ಸರ್ವರೋಗಗಳು ಗುಣವಾಗುತ್ತವೆ ಎಂದು ಈ ಕೆಳಗಿನಂತೆ ಹೇಳಿದೆ.

ಮರಿಚಂ ಚವ್ಯಂ ವಿಡಂಗಂ ಕಳವಿಗೆ ಮಗಧ ಪ್ರೋದ್ಭವಂ[ಚಿತ್ರಕಂ]ನು।
ಗ್ಗಿರಸಾ(ಜ್ಯಂ) ೦ ತಂ ರಾಶ್ಮೆ ಕಷ್ಠಂ ಬಜೆ ಪುಲಿಗಿಲಬೇರ್ ಹಿಪ್ಪಲೀ ಮೂಲಮಯ್ದು॥
ಪ್ಪೆರಡೋವಂ ಪಾಲೆ ಬೇವಿಂಗತಿಬಜೆ ಪಟಲಂ ಸರ್ಷಪಂ ಜೀರಕಂನಾ।
ಗರಮಕ್ಷಂ ನೆಲ್ಲಿ ನೇಜಿಲ್ ತವಸಿ ಶಿವೆ ಯವಕ್ಷಾರಮೆಂದಿಂತಿವೆಲ್ಲಂ॥(೯-೨೪೫)

ಸಮನಾಗಿ ಕೂಡಿ ಕಟಿವೆರ।
ಸುಮತಂಗಜಕಿಕ್ಕೆ ಶೂಲೆ ಗುಲ್ಮಂ ಜಾಡ್ಯಂ॥
ಕ್ರಿಮಿವಿಷಂಭಂ ಕಷವ।
ಗ್ನಿ ಮಾಂದ್ಯಮರುಚಿತ್ವವೆಂಬಿವಂ ಮಾಣಿಸುಗುಂ॥(೯-೨೪೬)"[೧೦೪]

ಮೆಣಸು, ವಿಳಂಗ, ಕಳವಿಗೆ, ಚಿತ್ರಮೂಲ, ನೀಲಾಂಜನ, ರಾಶ್ಮೆ, ಕೊಷ್ಠ, ಬಜೆ, ಓಮ, ಇಂಗು, ಅತಿಬಜೆ, ಪಂಚಲವಣ, ಸಾಸಿವೆ, ಜೀರಿಗೆ, ಶುಂಠಿ, ತ್ರಿಫಲಾ, ನೇರಳೆತೊಗಟೆ, ತಪಸಿ, ಮೆಣಸಿನ ಬಳ್ಳಿ, ಹಿಪ್ಪಲಿ ಮೂಲ, ಹುಲಗಿಲ ಬೇರು, ಹಾಲೆಮರದ ಬೇರು, ಕಹಿಪಡುವಲದ ಸಮೂಲ, ಯುವಕ್ಷಾರ ಇವುಗಳನ್ನು ಸಮನಾಗಿ ಕೂಡಿಸಿಕೊಂಡು ಕುಟ್ಟಿ ಚೂರ್ಣವನ್ನು ಮಾಡಿ ನೀರಿನಲ್ಲಿ ಕದಡಿ ಆನೆಗಳಿಗೆ ಕುಡಿಸಿದರೆ ಶೂಲೆ, ಗುಲ್ಮ, ಕಿಮಿ, ಕೆಮ್ಮು, ಅರುಂಚಿ, ಜಡತೆ ಮೊದಲಾದ ರೋಗಗಳು ಮತ್ತು ಸರ್ವರೋಗಗಳು ವಾಸಿಯಾಗುತ್ತವೆ ಎಂದು ಹೇಳಿದ್ದಾನೆ. ಆನೆ ತುಂಬ ಬಲಿಷ್ಠ ಪ್ರಾಣಿಯಾದ್ದರಿಂದ ಚಾವುಂಡರಾಯ ಈ ಪ್ರಾಣಿಯ ರೋಗ ನಿವಾರಣೆಗೆ ಮೂವತ್ತಕ್ಕಿಂತಲೂ ಅಧಿಕ ಮೂಲಿಕೆಗಳನ್ನು ಔಷಧವಾಗಿ ಬಳಸುವಂತೆ ನಿರ್ದೇಶಿಸಿದ್ದಾನೆಂಬುದು ಗಮನಾರ್ಹ. ಆದರೆ ಈ ಔಷಧವನ್ನು ರೋಗಗ್ರಸ್ತ ಆನೆಗಳಿಗೆ ಎಷ್ಟು ದಿವಸ ಮತ್ತು ಯಾವ ಪ್ರಮಾಣದಲ್ಲಿ ಕುಡಿಸಬೇಕೆಂಬುದನ್ನು ಉಲ್ಲೇಖಿಸದಿರುವುದು ಪ್ರಯೋಗಕ್ಕೆ ಅನುಭವಸ್ತರೆ ಬಳಸಬೇಕಾಗುತ್ತದೆ.

ಇದುವರೆಗೂ ವಿಷದಪಡಿಸಿದ ಮನುಷ್ಯ ವೈದ್ಯದಲ್ಲಿ : ಸಾಮಾನ್ಯವೈದ್ಯ, ಸ್ತ್ರೀವೈದ್ಯ, ಬಾಲವೈದ್ಯ ಮತ್ತು ವಿಷವೈದ್ಯ ಹಾಗೂ ಪ್ರಾಣಿ ವೈದ್ಯದಲ್ಲಿ : ಗೋವೈದ್ಯ, ಅಶ್ವವೈದ್ಯ ಮತ್ತು ಗಜವೈದ್ಯ. ಇವುಗಳಲ್ಲಿ ಮನುಷ್ಯ ಮತ್ತು ಪ್ರಾಣಿಗಳಿಗೆ ಬರುವ ವಿವಿಧ ಬಗೆಯ ರೋಗಗಳಿಗೆ ಪ್ರಾಚೀನ ವೈದ್ಯಶಾಸ್ತ್ರಜ್ಞರು ಹಲವು ಪ್ರತೀಕಾರೋಪಾಯಗಳನ್ನು ಕೊಟ್ಟಿದ್ದಾರೆ. ಅವರು ಹೀಗೆ ಕೊಟ್ಟಿರುವ ಔಷಧ ದ್ರವ್ಯಗಳು ಒಂದಲ್ಲ ಹಲವು; ಅವುಗಳಲ್ಲಿ ಯಾವುದು ಮುಖ್ಯ ಯಾವುದು ಅಮುಖ್ಯವೆಂದು ಹೇಳುವಂತಿಲ್ಲ. ಗಿಡಮೂಲಿಕೆಗಳ ಬೇರು, ಕಾಂಡ, ನಾರು, ತೊಗಟೆ, ಎಲೆ,

ಹೂ, ಕಾಯಿ, ಹಣ್ಣು, ಬೀಜ, ಎಣ್ಣೆ ಮೊದಲಾದ ವನೌಷಧಿಗಳು ಹಾಗೂ ಲವಣ, ಮೂತ್ರ, ಕ್ಷೀರ, ದಧಿ, ಘೃತಗಳಿಗೆ ಸಂಬಂಧಿಸಿದ ಔಷಧೋಪಚಾರ ಕ್ರಮವೇ ಇಲ್ಲಿ ಮುಖ್ಯ. ಅಲ್ಲೊಂದು ಇಲ್ಲೊಂದು ಖನಿಜ ಪದಾರ್ಥಗಳೂ ಯಂತ್ರ, ಮಂತ್ರಗಳೂ ಉಲ್ಲೇಖಗೊಂಡಿವೆ. ಆದರೂ ಇಲ್ಲಿ ಗಿಡಮೂಲಿಕೆಗಳದೇ ಪ್ರಧಾನ.

ಸಾಮಾನ್ಯವಾಗಿ ಯಾವುದೇ ಒಂದು ರೋಗಕ್ಕೆ ಚಿಕಿತ್ಸೆಯನ್ನು ಪ್ರಾರಂಭಿಸುವ ಮೊದಲು ಆ ರೋಗದ ನಿಧಾನವನ್ನು ಮಾಡಬೇಕಾಗುತ್ತದೆ. ರೋಗೋತ್ಪತ್ತಿಗೆ ಮೂಲ ಕಾರಣಗಳನ್ನು ಕಂಡುಹಿಡಿಯುವ ಮೂಲಕ ರೋಗವನ್ನು ನಿರ್ದಿಷ್ಟವಾಗಿ ಗುರುತಿಸುವಿಕೆಗೆ 'ನಿಧಾನ' ವೆನ್ನುತ್ತಾರೆ. ಇದಕ್ಕೆ ನಿಮಿತ್ತ, ಹೇತು, ಆಯತನ, ಪ್ರತ್ಯಯ, ಉತ್ಥಾನ, ಕಾರಣ ಎಂಬ ಪರ್ಯಾಯ ಶಬ್ದಗಳು ಆಯುರ್ವೇದದಲ್ಲಿ ಕಂಡುಬರುತ್ತವೆ. ಈ ರೋಗನಿಧಾನವನ್ನನುಸರಿಸಿ ಕೊಟ್ಟ ಚಿಕಿತ್ಸೆ ಮಾತ್ರ ಫಲಕಾರಿಯಾಗಬಲ್ಲದು"[೧೦೫]. ಆದ್ದರಿಂದ ಚಿಕಿತ್ಸೆಯಲ್ಲಿ ರೋಗನಿಧಾನ ಒಂದು ಮಹತ್ವದ ಘಟ್ಟ. "ರೋಗಮದೌ ಪರೀಕ್ಷೇತ ತತೋ ನಂತರಮೌಷಧಮ್ । ತತಃ ಕರ್ಮಭಿಷಕ್ ಪಶ್ಚಾತ್ ಜ್ಞಾನಪೂರ್ವಂ ಸಮಾಚರೇತ್"[೧೦೬] ಎಂಬೋಕ್ತಿಯಂತೆ ವೈದ್ಯರಾದವರು ಮೊದಲು ರೋಗದ ಪರೀಕ್ಷೆಯನ್ನು ಮಾಡಿ ನಂತರ ಔಷಧಿಯನ್ನು ಕೊಡಬೇಕಾಗುತ್ತದೆ. ಅಲ್ಲದೆ ರೋಗದ ಸಂಪೂರ್ಣ ಜ್ಞಾನಕ್ಕಾಗಿ ರೋಗಿಯನ್ನು ಸ್ವತಃ ವೈದ್ಯರೇ ಪರೀಕ್ಷಿಸಬೇಕು. ಹೀಗೆ ರೋಗಿಯನ್ನು ಅನೇಕ ವಿಧದ ಪರೀಕ್ಷೆಗಳಿಂದ ತಪಾಸಣೆ ಮಾಡಿದ ಬಳಿಕ ಆಯಾ ರೋಗದ ಸಾಧ್ಯಾಸಾಧ್ಯತೆಯನ್ನು ಅರಿತು ಚಿಕಿತ್ಸೆ ಕೈಗೊಳ್ಳಬೇಕು. ಆದ್ದರಿಂದಲೇ ದೇಶಿ ವೈದ್ಯಪದ್ಧತಿಯಲ್ಲಿ ಪ್ರತಿರೋಗಗಳ ವಿವರಣೆಯಲ್ಲಿ ಅದರ ಸಾಧ್ಯಸಾಧ್ಯತೆಯನ್ನು ಕುರಿತು ಹೇಳಿದ ಈ ಅಂಶಗಳನ್ನು ಗಮನಿಸದೇ ಚಿಕಿತ್ಸೆ ಮುಂದುವರಿಸಿದರೆ ರೋಗವಿರುವುದೊಂದು ಔಷಧ ಕೊಡುವುದೊಂದು ಆಗುತ್ತದೆ. ಇದರಿಂದ ವೈದ್ಯನು ಚಿಕಿತ್ಸೆಯಲ್ಲಿ ಅಸಫಲನಾಗುವ ಸಂಭವ ಇರುತ್ತದೆ. ಹಾಗಿರುವಾಗ ಕೆಲ ವೈದ್ಯಶಾಸ್ತ್ರಜ್ಞರು ರೋಗ ಚಿಕಿತ್ಸೆಯಲ್ಲಿ ಇಂಥ ಮಹತ್ವದ ಕೆಲವು ವಿಚಾರಗಳನ್ನು ಪರಿಗಣನೆಗೆ ತಂದುಕೊಳ್ಳದೇ ಕೇವಲ ಔಷಧದ ಪ್ರಯೋಗವನ್ನು ನಿರೂಪಿಸಿದ್ದಾರೆ. ಆದ್ದರಿಂದ ಜನಸಾಮಾನ್ಯರು ಇಂಥ ಔಷಧ ದ್ರವ್ಯಗಳನ್ನು ನೇರವಾಗಿ (ಸ್ವಯಂ ವೈದ್ಯ) ಮಾಡಿಕೊಂಡು ಅವುಗಳ ಮಹತ್ತ್ವವನ್ನು ಮುಕ್ತವಾಗಿ ಮನಗಾಣಲು ಸಾಧ್ಯವಾಗುವುದಿಲ್ಲ.

ಎಲ್ಲಾ ದ್ರವ್ಯಗಳ ಬಳಕೆಯಲ್ಲಿಯೂ ಶಾಸ್ತ್ರಕಾರರು ಪ್ರಮಾಣವನ್ನು ಹೇಳಿರುವುದಿಲ್ಲ. ಕೆಲ ದ್ರವ್ಯಗಳ ಬಳಕೆಯಲ್ಲಿ ಮಾತ್ರ ಹೇಳಿದ್ದಾರೆ. ಆದ ಪ್ರಯುಕ್ತ ಯಾವ ಯಾವ ರೋಗಕ್ಕೆ ಎಷ್ಟೆಷ್ಟು ಪ್ರಮಾಣದಲ್ಲಿ ಮೂಲಿಕೆಗಳನ್ನು ಔಷಧಿಗಳ ಯುಕ್ತಾಯುಕ್ತ ವಿಚಾರಗಳನ್ನು ಸಹ ಶಾಸ್ತ್ರಕಾರರು ನೀಡಿಲ್ಲ. ಹಾಗೂ 'ಔಷಧದಲ್ಲಿ ಉಪಯೋಗಿಸಿರುವ ಪದಾರ್ಥಗಳೆಲ್ಲವೂ ಹೊಸತೇ ಇರಬೇಕು. ಆದರೆ ವಾಯುವಿಳಂಬ, ಹಿಪ್ಪಲಿ, ಬೆಲ್ಲ, ಕೊತ್ತುಂಬರಿ, ತುಪ್ಪ, ಜೇನುತುಪ್ಪ ಇವುಗಳು ಮಾತ್ರ ಒಂದು ವರ್ಷದಷ್ಟು ಹಳೆಯದಾಗಿದ್ದರೆ ಒಳ್ಳೆಯದು. ಅಮೃತಬಳ್ಳಿ, ಕೊಡಸಿಗೆ, ಆಡುಸೋಗೆ, ಕುಂಬಳಕಾಯಿ, ಗೋರಂಟಿ ಈ ಮೊದಲಾದ ದ್ರವ್ಯಗಳನ್ನು ಹಸಿಯಾಗಿಯೇ ಉಪಯೋಗಿಸಬೇಕು. ಔಷಧಗಳಲ್ಲಿ ಒಣಗಿದ ವಸ್ತುಗಳನ್ನು ಉಪಯೋಗಿಸುವಾಗ ಹೊಸತಾಗಿರುವುದನ್ನೆ ಉಪಯೋಗಿಸಬೇಕು. ಅವುಗಳ ಜೊತೆಗೆ ಹಸಿಯಾದವುಗಳನ್ನು ಸೇರಿಸಬೇಕಾಗಿದ್ದಲ್ಲಿ ಒಣಗಿರುವುದರ ಎರಡು ಪಟ್ಟು ಸೇರಿಸಬೇಕು ಸಾಮಾನ್ಯವಾಗಿ ಔಷಧ ಸಿದ್ಧಪಡಿಸಲು ತಂದಿಟ್ಟ ಮೂಲಿಕೆಗಳು ಒಂದು ವರ್ಷದವರೆಗೆ ರೋಗನಿರೋಧಕ ಶಕ್ತಿಯನ್ನು ಹೊಂದಿರುತ್ತವೆ. ಘೃತ ಹಾಗೂ ತೈಲಗಳು ನಾಲ್ಕು ತಿಂಗಳುಗಳವರೆಗೆ ವೀರ್ಯಶಕ್ತಿಯನ್ನು

ಪಡೆದಿರುತ್ತವೆ. ಅನಂತರ ಅವು ತಮ್ಮ ಗುಣಶಕ್ತಿಯನ್ನು ಕಳೆದುಕೊಂಡು ಔಷಧಿಗಾಗಿ ಉಪಯೋಗಿಸಲು ಅನರ್ಹವಾಗಿರುತ್ತವೆ. ಆದ್ದರಿಂದ ಔಷಧ ತಯಾರಿಕೆಯಲ್ಲಿ ಈ ಅಂಶಗಳನ್ನು ಎಚ್ಚರಿಕೆಯಿಂದ ಪಾಲಿಸಬೇಕು ಅದರಲ್ಲಿನ ನಂಜಿನ ಅಂಶಗಳನ್ನು ಹೊರಹಾಕಿ ಔಷಧವನ್ನು ಹದಗೊಳಿಸಿ ಬಳಸಲಾಗುತ್ತದೆ". ಎಂದೆಲ್ಲ ಹೇಳಲಾಗಿದೆ. ಉದಾಹರಣೆಗೆ : ಚಿತ್ರಮೂಲದ ಬೇರನ್ನು ಸೀಳಿ ಮಧ್ಯದ ನೀರನ್ನು ತೆಗೆದು ಉಳಿದದ್ದನ್ನು ಕತ್ತರಿಸಿ ಅದನ್ನು ಸುಣ್ಣದ ತಿಳಿನೀರಿನಲ್ಲಿ ಒಂದು ರಾತ್ರಿ ನೆನೆಸಿ ಅನಂತರ ಒಳ್ಳೆಯ ನೀರಿನಲ್ಲಿ ತೊಳೆಯುತ್ತಾರೆ. ಆಗ ಅದು ಔಷಧವಾಗಿ ಬಳಸಲು ಯೋಗ್ಯವಾಗಿರುತ್ತದೆ. ಕಾಳುಮೆಣಸನ್ನು ಹಸುವಿನ ಹುಳಿಮಜ್ಜಿಗೆಯಲ್ಲಿ ಸ್ವಲ್ಪ ಕಾಲ ನೆನಸಿ ಅನಂತರ ಹೊರಗೆ ತೆಗೆದು ಒಣಗಿಸಬೇಕು. ಶುಂಠಿಯನ್ನು ಸಹ ಸುಣ್ಣದ ತಿಳಿನೀರಿನಲ್ಲಿ ನೆನೆಸಿ ತರುವಾಯ ಧಾನ್ಯಾಮ್ಲದಲ್ಲಿ ತೊಳೆದು ಸುಡು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿದರೆ ಔಷಧಿಯಾಗಿ ಬಳಸಲು ಹದಗೊಳ್ಳುತ್ತದೆ. ಇದೇರೀತಿ ಓಮವನ್ನು ಸಹ ಆಡಿನ ಹಾಲಿನಲ್ಲಿ ನೆನೆಸಿ ತೊಳೆದು ಸುಡು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಬೇಕು. ಇಂತಹ ವಿಧಾನಗಳು ಆಯುರ್ವೇದದಲ್ಲಿ ಯಥೇಚ್ಛವಾಗಿ ಕಂಡು ಬರುತ್ತವೆ"[೧೦೭].

ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಈ ಬಗೆಯ ಔಷಧ ತಯಾರಿಕೆ, ಪರಿಷ್ಕರಣ ಹಾಗೂ ಶುದ್ಧೀಕರಣದಂತಹ ಅಂಶಗಳನ್ನು ತಿಳಿಯಪಡಿಸಿಲ್ಲ. ಕೆಲವು ಔಷದ ದ್ರವ್ಯಗಳಲ್ಲಿ ವಿಷದ ಅಂಶ ಅಡಕವಾಗಿರುವುದರಿಂದ ಅವುಗಳ ನೇರವಾದ ಔಷಧ ಬಳಕೆ ಶರೀರಕ್ಕೆ ಅಪಾಯ ತಂದೊಡ್ಡುವ ಅವಕಾಶವನ್ನು ಇರುತ್ತದೆ ಎಂಬುದನ್ನು ಮರೆಯುವಂತಿಲ್ಲ. ಹಾಗೆಯೇ ದೇಶಿ ವೈದ್ಯದಲ್ಲಿ ಔಷಧಿಯನ್ನು ಕೊಡುವುದಕ್ಕೂ ಸೇವಿಸುವುದಕ್ಕೂ ಒಂದು ಮಹತ್ವದ ಸ್ಥಾನವಿದೆ. "ಸಾಮಾನ್ಯವಾಗಿ ಔಷಧಿಯನ್ನು ಬೆಳಗಿನ ಹೊತ್ತಿನಲ್ಲಿಯೇ ಕೊಡುವ ರೂಢಿ ಇದೆ. 'ಸ್ವರಸ–ಕ್ವಾಥ'ಗಳೆಂಬ ಐದು ವಿಧವಾದ ಕಷಾಯಗಳನ್ನು ಕುಡಿಸುವಾಗಲೂ ಖಂಡಿತವಾಗಿಯೂ ಬೆಳಗಿನ ವೇಳೆಯೇ ಪ್ರಶಸ್ತವಾದದ್ದು. ಇದಲ್ಲದೆ ಬೇರೆ ಬೇರೆ ಕಾಲಗಳಲ್ಲಿ ದೋಷಗಳಿಗನುಗುಣವಾಗಿ ಔಷಧಗಳನ್ನು ಕೊಡುವ ಪ್ರಯತ್ನವೂ ಜಾರಿಯಲ್ಲಿದೆ. ಸೂರ್ಯೋದಯ ಕಾಲ ಹಗಲು ಭೋಜನ ಕಾಲ. ಸಾಯಂಕಾಲ ಭೋಜನಕಾಲ, ರಾತ್ರಿಯಲ್ಲಿ, ದಿವಸದಲ್ಲಿ ಅನೇಕ ಸಲ ಹೀಗೆ ಔಷಧವನ್ನು ಐದು ವಿಧವಾಗಿ ಕೊಡುವುದು ಸಾಮಾನ್ಯ. ಆದರೂ ಕೆಲವೊಂದು ಔಷಧಿಗಳನ್ನು ರೋಗಕ್ಕನುಸಾರವಾಗಿ ಅಥವಾ ಔಷದದ ತೀಕ್ಷ್ಣತೆ ಇಲ್ಲವೇ ಸೌಮ್ಯತೆಗಾಗಿ ಹೆಚ್ಚು ಕಡಿಮೆ ಮಾಡಬೇಕಾಗುವುದು. ಉದಾಹರಣೆಗೆ, ಜ್ವರವನ್ನು ನಿಲ್ಲಿಸುವ ಔಷಧಿಯನ್ನು ದಿನಕ್ಕೆ ಮೂರು ಬಾರಿ ಕೊಡಬೇಕು. ಆದರೆ 'ವರಸೆ ಜ್ವರ'ದಲ್ಲಿ ಅದು ಬರುವ ಆರುಗಂಟೆಗೆ, ಮೊದಲು ಎರಡೆರಡು ಗಂಟೆಗಳಿಗೊಮ್ಮೆ ಮೂರು ಸಾರಿ ಕೊಡಬೇಕು. ಅಂತೆಯೇ ಸನ್ನಿಪಾತ ಜ್ವರದಲ್ಲಿ ಎರಡೆರಡು ಗಂಟೆಗೊಂದು ಸಲ ಔಷಧ ಕೊಡುವುದು ಹಿತಕರ. ಕಾಲರಾದ ತೀಕ್ಷ್ಣಾವಸ್ಥೆಯಲ್ಲಿ ಅರ್ಧಗಂಟೆಗೊಂದು ಸಾರಿ ಔಷಧ ಕೊಡಬೇಕೆಂಬುದನ್ನು ಆಯುರ್ವೇದ ಮನಗಾಣಿಸುತ್ತದೆ"[೧೦೮].

ಔಷಧವನ್ನು ಸೇವಿಸುವ ಕಾಲದಲ್ಲಿ ರೋಗ ಮತ್ತು ಔಷಧಾನುಸಾರವಾಗಿ ಪಥ್ಯವನ್ನು ಪಾಲಿಸುವುದರ ಬಗೆಗೆ ಈ ಶಾಸ್ತ್ರ ಹೆಚ್ಚು ಒತ್ತು ಕೊಡುತ್ತದೆ. ಹಾಗೆ ನೋಡಿದರೆ ದೇಶಿ (ಆಯುರ್ವೇದ) ವೈದ್ಯ ಪದ್ಧತಿಯಲ್ಲಿ ಪಥ್ಯವಿಲ್ಲದ ರೋಗ ಔಪಧೋಪಚಾರ ಕ್ರಮವೇ ಇಲ್ಲ. ಇಂತಿರುವಾಗ ಕನ್ನಡ ವೈದ್ಯಶಾಸ್ತ್ರ ಎಲ್ಲಾ ಹಸ್ತಪ್ರತಿಗಳಲ್ಲಿ ಎಲ್ಲಾ ಸಂದರ್ಭದಲ್ಲಿ ಕ್ರಮಬದ್ಧವಾಗಿ ಹೇಳಿರುವುದಿಲ್ಲ. ಹಾಗೂ ಔಷಧ ಸೇವನೆಯ ಕಾಲ, ಪ್ರಮಾಣ

ಕುರಿತಾದರೂ ಸೂಕ್ತವಾದ ಪ್ರತಿ ಸಂದರ್ಭದಲ್ಲೂ (ಕೆಲ ಸಂದರ್ಭದಲ್ಲಿ ಮಾತ್ರ ನೀಡಲಾಗಿದೆ) ಮಾಹಿತಿಗಳನ್ನು ಒದಗಿಸಿರುವುದಿಲ್ಲ. ಆದ್ದರಿಂದ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿರುವ ಚಿಕಿತ್ಸಾ ತತ್ವಗಳನ್ನು ಸಾರ್ವತ್ರಿಕವಾಗಿ ಅನುಕರಿಸುವುದಕ್ಕೆ ಸಾಧ್ಯವಿಲ್ಲ. ಹಾಗಾಗಿ ಕನ್ನಡ ವೈದ್ಯವಿಧಾನಗಳನ್ನು ಹಾಗೂ ನನ್ನ ಮಹಾಪ್ರಬಂಧದಲ್ಲಿ ಚಿಕಿತ್ಸಾ ವಿಧಿವಿಧಾನಗಳನ್ನು ಸ್ವಯಂವೈದ್ಯ ಮಾಡಿಕೊಳ್ಳದೇ ಅನಭವಿಕ ವೈದ್ಯರಿಂದಲೇ ಇದರ ಉಪಯೋಗ ನಡೆಯಬೇಕೆಂಬುದೇ ನನ್ನ ಅಭಿಲಾಷೆಯಾಗಿದೆ. ಆದರೆ ದಿನಚರ್ಯೆ, ಋತುಚರ್ಯೆ, ಮತ್ತು ಇತರ ಸಣ್ಣ ಪುಟ್ಟ ಔಷಧಗಳನ್ನು ಇತರರೂ ಮಾಡಿಕೊಳ್ಳಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಉದ್ಧೃತ : ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ; ೧೯೯೯, ಡಾ.ಅಂಬಳಿಕೆ ಹಿರಿಯಣ್ಣ, ಪು.೩೦೨

೨. ಉದ್ಧೃತ : ಸಾಹಿತ್ಯ ಭಾರತಿ; ೧೯೭೦, ಎನ್. ಅನಂತರಂಗಾಚಾರ್, ಪು.೧೬೫

೩. ಕನ್ನಡ ನಾಡಿನಲ್ಲಿ ಆಯುರ್ವೇದ; ೧೯೮೦, ಎಸ್.ಕೆ.ರಾಮಚಂದ್ರನ್, ಪು.೮

೪. ವೈದ್ಯಕಂದ; ೧೯೮೧, (ಸಂ) ಬಿ.ಎಸ್.ಸಣ್ಣಯ್ಯ, ಪು.೩

೫. ನಿತ್ಯದೊಳೇಳುಂ ದಿವಸದೊಳ್ ರಸಸಾಂಜನ (ನೇತ್ರಕ್ರಿಮಿ)ಗಿವು ಸಂಜೀವನ ವೆಂ[ಬು]ದು ಬಾಹಟ[ನಾ]ಮತವುಂ, ಪದ್ಯ ೧-೧೬

೬. ವೈದ್ಯಕಂದ; ೧೯೯೧, (ಸಂ) ಬಿ.ಎಸ್. ಸಣ್ಣಯ್ಯ, ಪು. ೪,೫

೭. ಅದೇ, ಪು.೩೬

೮. ಅದೇ, ಪು.೯

೯. ಅದೇ, ಪು.೯,೧೦

೧೦. ಅದೇ, ಪು.೧೧

೧೧. ಅದೇ, ಪು.೧೧

೧೨. ಅದೇ, ಪು.೧೩

೧೩. ವೈದ್ಯಸಾರ ಸಂಗ್ರಹ; ೧೯೫೧, (ಸಂ) ಡಾ. ಜಿ. ಶ್ರೀನಿವಾಸಮೂರ್ತಿ, ಪು.೩

೧೪. ವೈದ್ಯಾಮೃತ; ಕನ್ನಡ.ವಿವಿ. ಹಸ್ತಪ್ರತಿ ಭಂಡಾರ; ಹಸ್ತಪ್ರತಿ ಸಂಖ್ಯೆ.೩೧೧೪

೧೫. ವೈದ್ಯಸಾರ ಸಂಗ್ರಹ ಭಾಗ-೧; ೧೯೫೧, (ಸಂ) ಶ್ರೀನಿವಾಸಮೂರ್ತಿ, ಪು.೫

೧೬. ಅದೇ, ಪು.೧೦

೧೭. ವೈದ್ಯಪುಸ್ತಕ; ಕನ್ನಡ ವಿವಿ ಹಸ್ತಪ್ರತಿ ಭಂಡಾರ, ಹಸ್ತಪ್ರತಿ ಸಂಖ್ಯೆ.೪೬

೧೮. ಚಿಕಿತ್ಸಾ ತತ್ವ ದೀಪಿಕಾ; ೧೯೯೯, ಮೋಟಗಾನಹಳ್ಳಿ ಮಹಾದೇವ ಶಾಸ್ತ್ರೀ, ಪು.೬೫

೧೯. ವೈದ್ಯಶಾಸ್ತ; ಕನ್ನಡ.ವಿವಿ. ಹಸ್ತಪ್ರತಿ ಭಂಡಾರ, ಹಸ್ತಪ್ರತಿ ಸಂಖ್ಯೆ.೬೧೫

೨೦. ಚಿಕಿತ್ಸಾ ತತ್ವ ದೀಪಿಕಾ; ೧೯೯೯, ಮೋಟಗಾನಹಳ್ಳಿ ಮಹಾದೇವಶಾಸ್ತ್ರೀ. ಪು.೩

೨೧. ವೈದ್ಯಕಂದ; ೧೯೯೧, (ಸಂ) ಬಿ.ಎಸ್.ಸಣ್ಣಯ್ಯ. ಪು.೧೨೦

೨೨. ವೈದ್ಯಶಾಸ್ತ್ರ; ಕನ್ನಡ ವಿ.ವಿ. ಹಸ್ತಪ್ರತಿ ಭಂಡಾರ, ಹ.ಸಂಖ್ಯೆ.೬೧೫

೨೩. ವೈದ್ಯಶಾಸ್ತ್ರ; ಕನ್ನಡ ವಿ.ವಿ. ಹಸ್ತಪ್ರತಿ ಭಂಡಾರ, ಹ.ಸಂಖ್ಯೆ. ೬೦೭

೨೪. ಸಕಲವೈದ್ಯ ಸಂಹಿತಾಸಾರಾರ್ಣವಂ ಭಾಗ-೨; ೧೯೮೪, (ಸಂ) ಬಿ.ಎಸ್. ಸಣ್ಣಯ್ಯ, ಪು.೨೭೩

೨೫. ವೈದ್ಯಕಂದ; ೧೯೯೧, (ಸಂ) ಬಿ.ಎಸ್.ಸಣ್ಣಯ್ಯ, ಪು.೧೬೧

೨೬. ಕರ್ನಾಟಕ ಜನಪದವೈದ್ಯ; ೧೯೭೯, ಮಳಲಿ ವಸಂತಕುಮಾರ್, ಪು.೪೮,೪೯

೨೭. ಚಿಕ್ಕುಪಾಧ್ಯಾಯನ ಆರೋಗ್ಯಾಮೃತ; ಕನ್ನಡ ವಿ.ವಿ. ಹಸ್ತಪ್ರತಿ ಭಂಡಾರ. ಹಸ್ತಪ್ರತಿ. ಸಂಖ್ಯೆ. ಕೆ ೯೮೫

೨೮. ವೈದ್ಯಶಾಸ್ತ್ರ; ಕನ್ನಡ.ವಿವಿ. ಹಸ್ತಪ್ರತಿ ಭಂಡಾರ, ಹ.ಸಂ.೬೧೬

೨೯. ಸಕಲವೈದ್ಯ ಸಂಹಿತಾಸಾರಾರ್ಣವಂ ಭಾಗ-೨; ೧೯೮೪, (ಸಂ) ಬಿ.ಎಸ್.ಸಣ್ಣಯ್ಯ, ಪು.೧೩೬

೩೦. ಚಾವುಂಡರಾಯನ ಲೋಕೋಪಕಾರಂ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು.೧೭೮

೩೧. ವೈದ್ಯಶಾಸ್ತ್ರ; ಕನ್ನಡ.ವಿವಿ. ಹಸ್ತಪ್ರತಿಭಂಡಾರ, ಹ.ಸಂ.೬೧೬

೩೨. ವೈದ್ಯಪುಸ್ತಕ; ಕನ್ನಡ.ವಿವಿ.ಹಸ್ತಪ್ರತಿಭಂಡಾರ, ಹ.ಸಂ.೪೩೬

೩೩. ವೈದ್ಯಪುಸ್ತಕ; ಕನ್ನಡ.ವಿವಿ. ಹಸ್ತಪ್ರತಿಭಂಡಾರ, ಹ.ಸಂ.೪೬

೩೪. ಉಪಯುಕ್ತ ಗಿಡಮೂಲಿಕೆಗಳು; ೧೯೭೪, ಎಂ. ಗೋಪಾಲಕೃಷ್ಣರಾವ್, ಪು.೧೩೦-೧೩೧

೩೫. ವೈದ್ಯಶಾಸ್ತ್ರ; ಕನ್ನಡ.ವಿವಿ. ಹಸ್ತಪ್ರತಿ ಭಂಡಾರ, ಹಸ್ತಪ್ರತಿ ಸಂಖ್ಯೆ.೬೧೫

೩೬. ವೈದ್ಯಶಾಸ್ತ್ರ; ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಭಂಡಾರ, ಹ.ಸಂ.೧೬೧

೩೭. ವೈದ್ಯಶಾಸ್ತ್ರ; ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಭಂಡಾರ, ಹ.ಸಂ.೬೦೭

೩೮. ವೈದ್ಯಸಾರ ಸಂಗ್ರಹ ಭಾಗ-೧; ೧೯೫೧, (ಸಂ) ಶ್ರೀನಿವಾಸಮೂರ್ತಿ, ಪು.೪೬೧

೩೯. ಲೋಕೋಪಕಾರ; ೧೯೯೬, (ಸಂ) ಹೆಚ್.ಶೇಷ ಅಯ್ಯಂಗಾರ್, ಪು.೧೯೬

೪೦. ಅದೇ, ಪು.೧೯೮

೪೧. ಆಯುರ್ವೇದದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ; ೧೯೮೧, ಬಿ.ಎಲ್.ದೇವರಾಜ, ಪು.೨೫೮,೨೫೯

೪೨. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್ ಪು.೧೯೮

೪೩. ಬಾಲಗ್ರಹ ಚಿಕಿತ್ಸೆ; ರಾ.ಪ್ರಾ.ಅ.ಸಂ. ಶ್ರವಣಬೆಳಗೊಳ, ಹಸ್ತಪ್ರತಿ ಸಂಖ್ಯೆ.೩೫೦

೪೪. ಅದೇ, ಹ.ಸಂಖ್ಯೆ.೩೫೮

೪೫. ಬಾಲವೈದ್ಯ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ ಸಂಖ್ಯೆ. ಕೆ೧೭೨೩

೪೬. ವೈದ್ಯಸಾರ ಸಂಗ್ರಹ ಭಾಗ-೧; ೧೯೫೧, (ಸಂ) ಶ್ರೀನಿವಾಸಮೂರ್ತಿ, ೮-೩೯೦, ೩೯೧

೪೭. ವೈದ್ಯಸಾರ ಸಂಗ್ರಹ ಭಾಗ-೧; ೧೯೫೧, (ಸ) ಶ್ರೀನಿವಾಸಮೂರ್ತಿ, ಪು. ೪೭೯

೪೮. ಅದೇ, ಪು. ೪೮೧

೪೯. ವಿಷವೈದ್ಯಶಾಸ್ತ್ರ; ೧೯೭೭, ಎಂ.ಎಂ. ಭಟ್, ಪುಟ. ೨

೫೦. ವಿಷವೈದ್ಯ ಮಹಾತ್ಮ; ಸತ್ಯನಾರಾಯಣ ಭಟ್.ಪಿ, ವಿಜಯ ಕರ್ನಾಟಕ, ೬.೬.೨೦೦೮.

೫೧. ಚಾವುಂಡರಾಯನ ಲೋಕೋಪಕಾರ ಒಂದು ಅಧ್ಯಯನ; ೧೯೯೬, ಡಾ.ಎ.ರಂಗಸ್ವಾಮಿ. ಪು.೩೩೦

೫೨. ಖಗೇಂದ್ರಮಣಿಮಣಿ ದರ್ಪಣಂ; ೨೦೦೪, (ಸಂ) ಬಿ. ಎಸ್. ಸಣ್ಣಯ್ಯ, ಪು.೨೦

೫೩. ಅದೇ, ಪು. ೨೦,೨೧

೫೪. ಅದೇ, ಪು. ೨೧

೫೫. ಹಲಗೆ ಬಳಪ; ೨೦೦೫, ಡಾ. ವೀರೇಶ ಬಡಿಗೇರ, ಪು. ೯೦

೫೬. ಖಗೇಂದ್ರಮಣಿಮಣಿ ದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೨೧

೫೭. ಅದೇ, ಪು.೨೫,೨೬,೨೭

೫೮. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು.೨೨೦

೫೯. ಖಗೇಂದ್ರಮಣಿದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೫೩

೬೦. ಅದೇ, ಪು.೫೪

೬೧. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು.೨೨೩

೬೨. ಖಗೇಂದ್ರಮಣಿದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೬೩,೬೪

೬೩. ವಿಷವೈದ್ಯಶಾಸ್ತ್ರ; ೧೯೭೭, ಎಂ.ಎಂ.ಭಟ್, ಪು.೧೩೦,೧೩೧.

೬೪. ಸ್ವಯಂವೈದ್ಯ; ೧೯೯೪, ತಿರುಕ, ಪು.೫೧೦

೬೫. ಲೋಕೋಪಕಾರಂ; ೧೯೯೬, (ಸಂ) ಹೆಚ್.ಶೇಷ ಅಯ್ಯಂಗಾರ್, ಪು.೨೨೭

೬೬. ಅದೇ, ಪು.೨೨೬

೬೭. ಖಗೇಂದ್ರಮಣಿದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ. ಪು.೧೭೬, ೧೭೭

೬೮. ಅದೇ, ಪು.೧೭೮

೬೯. ಅದೇ, ಪು.೧೭೯

೭೦. ಅದೇ, ಪು.೨೦೯

೭೧. ಜನಪದ ವೈದ್ಯ : ಕರ್ನಾಟಕ ಜಾನಪದ; ೧೯೮೯, ಶಿವರಾಮ ವಿ.ಎಸ್. ಪು.೨೯೩

೭೨. ಜಾನಪದ ಕೆಲವು ಅಧ್ಯಯನಗಳು; ೧೯೯೪, ಡಾ.ಅಂಬಳಿಕೆ ಹಿರಿಯಣ್ಣ, ಪು.೩೭

೭೩. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೨; ಪು.೩೦೩,೩೦೪

೭೪. ಲೋಕೋಪಕಾರ; ೧೯೯೬, (ಸಂ) ಹೆಚ್.ಶೇಷ ಅಯ್ಯಂಗಾರ್, ಪು.೨೦೫

೭೫. ಅದೇ, ಪು.೨೦೫,೨೦೬

೭೬. ಗೋವೈದ್ಯ; ಕನ್ನಡ ವಿಶ್ವವಿದ್ಯಾಲಯ, ಹಸ್ತಪ್ರತಿ ಭಂಡಾರ, ಕ್ರಮಾಂಕ.೮೬೫೩

೭೭. ಲೋಕೋಪಕಾರ; ೧೯೯೬, (ಸಂ) ಹೆಚ್.ಶೇಷ ಅಯ್ಯಂಗಾರ್, ಪು.೨೦೬

೭೮. ದನಗಳ ರೋಗಗಳು ಮತ್ತು ನಿವಾರಣೋಪಾಯಗಳು; ೧೯೮೯, ರಾಮರಾವ್ ಎಸ್. ಜ್ಯೋತಿ, ಪು.೧೮

೭೯. ಕರ್ನಾಟಕ ಜನಪದ ವೈದ್ಯ; ೧೯೭೯, (ಸಂ) ಮಳಲಿ ವಸಂತಕುಮಾರ್, ಪು.೮೯

೮೦. ಗೋವೈದ್ಯ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿವಿ, ಹಸ್ತಪ್ರತಿ ಸಂಖ್ಯೆ ೧೫೭೪.೩

೮೧. ಲೋಕೋಪಕಾರ; ೧೯೯೬, (ಸಂ) ಹೆಚ್.ಶೇಷ ಅಯ್ಯಂಗಾರ್, ಪುಟ.೨೦೩

೮೨. ಪಶುವೈದ್ಯಕೀಯ ವಿಜ್ಞಾನ; ೧೯೭೪, ಕೆ.ಆರ್. ಆಲೂರ್, ಪುಟ.೨೬

೮೩. ಗೋವೈದ್ಯ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ, ಹಸ್ತಪ್ರತಿ ಸಂದೆ.೨೦೨.೩

೮೪. ಲೋಕೋಪಕಾರಂ; ೧೯೯೬, (ಸಂ) ಹೆಚ್. ಶೇಷ್. ಅಯ್ಯಂಗಾರ್, ಪುಟ.೨೦೨

೮೫. ಪಶುವೈದ್ಯಕೀಯ ವಿಜ್ಞಾನ; ೧೯೭೪, ಕೆ.ಆರ್. ಆಲೂರು, ಪು.೨೬

೮೬. ಅಶ್ವಶಾಸ್ತ್ರ; ೧೯೮೭, (ಸಂ) ಜಿ.ಜಿ. ಮಂಜುನಾಥನ್, ಪು.೨

೮೭. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು. ೨೧೪

೮೮. ಅಭಿನವ ಚಂದ್ರನ ಅಶ್ವಶಾಸ್ತ್ರ; ೧೯೮೭, (ಸಂ) ಜಿ.ಜಿ. ಮಂಜುನಾಥನ್, ಪು.೨೫೧

೮೯. ಅದೇ ಪು.೧೫೬

೯೦. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು. ೨೧೫

೯೧. ಕನ್ನಡ ವಿಶ್ವ ಕೋಶ ಸಂ-೪; ಪು.೮೫೬

೯೨. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು. ೨೧೧

೯೩. ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ; ೨೦೦೩, (ಸಂ) ಎಫ್.ಟಿ.ಹಳ್ಳಿಕೇರಿ, ಪು.೪೨

೯೪. ಅಭಿನವಚಂದ್ರ ವಿರಚಿತ ಅಶ್ವಶಾಸ್ತ್ರ; ೧೯೮೭, (ಸಂ) ಜಿ.ಜಿ. ಮಂಜುನಾಥನ್ ಪು.೨೫೧

೯೫. ಅದೇ, ಪು. ೨೫೧

೯೬. ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ; (ಸಂ) ಎಫ್.ಟಿ.ಹಳ್ಳಿಕೇರಿ, ಪು.೪೨

೯೭. ಅದೇ, ಪು.೯೮

೯೮. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು. ೨೧೬, ೨೧೭

೯೯. ಉದ್ಧೃತ : ಪ್ರಾಚೀನ ಭಾರತದಲ್ಲಿ ಬೇಸಾಯ; ೧೯೮೨, (ಅನು) ಸಿ.ಕೆ.ಕುಮುದಿನಿ, ಪು.೨೫೬

೧೦೦. ಸರ್ವಜ್ಞ ಸೋಮೇಶ್ವರ ವಿರಚಿತ ಮಾನಸೋಲ್ಲಾಸ ಸ-೧; ೧೯೯೬, (ಸಂ) ಎಂ. ಎಂ. ಕಲಬುರ್ಗಿ, ಪು.೯೮,೯೯

೧೦೧. ಅದೇ, ಪು.೯೯

೧೦೨. ರಾಮಚಂದ್ರ ಕವಿಯ ಅಶ್ವಶಾಸ್ತ್ರಟೀಕು; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಹಸ್ತಪ್ರತಿ ಕ್ರಮಾಂಕ, ಕೆಬಿ೨೨೭

೧೦೩. ಅದೇ, ಕೆಬಿ೨೨೭

೧೦೪. ಲೋಕೋಪಕಾರ; ೧೯೯೬, (ಸಂ) ಹೆಚ್. ಶೇಷ ಅಯ್ಯಂಗಾರ್, ಪು. ೨೧೮,೨೧೯

೧೦೫. ಲೋಕೋಪಕಾರ ಒಂದು ಅಧ್ಯಯನ; ೧೯೯೬, ಡಾ.ಎ.ರಂಗಸ್ವಾಮಿ, ಪುಟ.೩೨೨

೧೦೬. ಆಯುರ್ವೇದ ವಿಜ್ಞಾನ; ೧೯೭೦, ಧನ್ಯಕುಮಾರ ಇಜಾರಿ, ಪು.೨೬೩

೧೦೭. ಆರೋಗ್ಯ ಸಾಧನ; ಪ.ಶಂಕರನಾರಾಯಣಭಟ್ಟ, ಪುಟ.೬೧,೬೩

೧೦೮. ಆಯುರ್ವೇದ ವಿಜ್ಞಾನ; ೧೯೭೦, ಧನ್ಯಕುಮಾರ ಇಜಾರಿ, ಪು.೩೬೨

❑❑❑

ಅಧ್ಯಾಯ -ಐದು

# ವೈದ್ಯಶಾಸ್ತ್ರ ಮತ್ತು ಇತರ ಶಾಸ್ತ್ರಗಳಿಗಿರುವ ಅಂತಃಸಂಬಂಧ

೫.೧. ವೈದ್ಯಶಾಸ್ತ್ರ-ಯೋಗಶಾಸ್ತ್ರ

೫.೨. ವೈದ್ಯಶಾಸ್ತ್ರ - ಸೂಪಶಾಸ್ತ್ರ

೫.೩. ವೈದ್ಯಶಾಸ್ತ್ರ-ಸಸ್ಯಶಾಸ್ತ್ರ

೫.೪. ವೈದ್ಯಶಾಸ್ತ್ರ-ಮನಶ್ಶಾಸ್ತ್ರ

ಶ್ರೀ

# ವೈದ್ಯಶಾಸ್ತ್ರ ಮತ್ತು ಇತರ ಶಾಸ್ತ್ರಗಳಿಗಿರುವ ಅಂತಃಸಂಬಂಧ

ಕನ್ನಡ ವೈದ್ಯಶಾಸ್ತ್ರ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ವೈದ್ಯಶಾಸ್ತ್ರವು ಮನುಷ್ಯ ಮತ್ತು ಪ್ರಾಣಿಗಳ ರೋಗ ಕಾರಣ-ಲಕ್ಷಣ-ಚಿಕಿತ್ಸಾ ವಿಧಿವಿಧಾನಗಳನ್ನು ತಿಳಿಸಿಕೊಡುವುದಕ್ಕಾಗಿ ರೂಪಿಸಿದ ಶಾಸ್ತ್ರವಾಗಿ ಕಂಡುಬರುತ್ತದೆ. ಆದರೆ ಇಲ್ಲಿ ಕೇವಲ ಈ ಮೇಲಿನ ವಿಷಯವನ್ನು ಪ್ರತಿಪಾದಿಸಿದ್ದರೂ ಮನುಷ್ಯನ ರೋಗ ನಿವಾರಣೆಗೆ ಆ ಚಿಕಿತ್ಸಾ ಕ್ರಮಗಳಲ್ಲಿ ಪ್ರತಿಪಾದಿಸಿದ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ರೋಗಬಾರದಂತೆ ಮುನ್ನೆಚ್ಚರಿಕೆಯ ಕ್ರಮಗಳಾದ ದಿನಚರ್ಯ ಋತುಚರ್ಯದಲ್ಲಿ ಯೋಗಾಸನ, ಗುರುಧ್ಯಾನ, ಆಹಾರ ಕ್ರಮಗಳು ನಂಬಿಕೆ ಆಚರಣೆ ಇತ್ಯಾದಿ ಪಾಲಿಸಬೇಕಾದ ನಿಯಮಗಳನ್ನು ಪ್ರತಿಪಾದಿಸಲಾಗಿದೆ. ಜೊತೆಗೆ ಇಡೀ ನಮ್ಮ ದೇಶಿ ವೈದ್ಯಶಾಸ್ತ್ರವು ಸಸ್ಯಮೂಲ ಔಷಧಿ ಕ್ರಮವನ್ನೆ ಒಳಗೊಂಡಿದೆ. ಹಾಗೂ ಅಲ್ಲಲ್ಲಿ ಚಿಕಿತ್ಸಾ ಕ್ರಮವಾಗಿ ಮಾಟ-ಮಂತ್ರ-ಯಂತ್ರಕ್ಕೆ ಸಂಬಂಧಿಸಿದ ವಿಷಯಗಳು ಉಕ್ತವಾಗಿವೆ. ಈ ಎಲ್ಲಾ ವಿಷಯಗಳನ್ನು ಗಮನಿಸಲಾಗಿ ವೈದ್ಯಶಾಸ್ತ್ರವು ಕೇವಲ ಒಂದೇ ನೆಲೆಯಿಂದ ಅಧ್ಯಯನ ಮಾಡುವ ಶಾಸ್ತ್ರವಾಗಿರದೇ ವಿಭಿನ್ನ ನೆಲೆಯಲ್ಲಿ ಅಧ್ಯಯನ ಮಾಡುವ ಬಹುಶಾಸ್ತ್ರೀಯ ಶಿಸ್ತು ಆಗಿದೆ ಎಂಬುದು ಗಮನಾರ್ಹ.

ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ವಿವಿಧ ದೃಷ್ಟಿಯಿಂದ ಅಧ್ಯಯನ ಮಾಡುವ ಸಂಬಂಧ ಕಲ್ಪಿಸುವ ವಿಷಯವನ್ನು ಪ್ರತ್ಯಕ್ಷವಾಗಿ ಪ್ರಸ್ತಾಪಿಸಿಲ್ಲ. ಆದರೆ ವಿಷಯಕ್ಕೆ ತನ್ನದೇ ಆದ ಮಹತ್ವವಿರುವುದನ್ನು ಅನುಲಕ್ಷಿಸಿ, ಪ್ರಸ್ತುತ ಅಧ್ಯಾಯವನ್ನು ರೂಪಿಸಿಕೊಳ್ಳಲಾಗಿದೆ. ಉದಾಹರಣೆಗೆ ಇಲ್ಲಿಯ ಔಷಧೋಪಚಾರ ಮಾಡುವ ಪ್ರಕ್ರಿಯೆಯನ್ನು ಗಮನಿಸಿದರೆ ಏಕವ್ಯಕ್ತಿ ಮಾಡಿ ಮುಗಿಸಬಹುದಾದ ಸಾಧ್ಯತೆ ತೀರಾ ಕಡಿಮೆ. ಅವಿಭಕ್ತ ಪ್ರಜ್ಞೆ, ಸಮೂಹನಿಷ್ಟ ಬದುಕು ಮಾನವೀಯ ಸಹಾಯ ಇಲ್ಲಿ ಮಹತ್ವದ ಅಂಶಗಳಾಗಿವೆ. ವೈದ್ಯಶಾಸ್ತ್ರ ಮತ್ತು ಇತರ ಶಾಸ್ತ್ರಗಳಿಗಿರುವ ಅಂತರಸಂಬಂಧ ಕುರಿತು ಅಧ್ಯಯನ ಮಾಡುವಾಗ ಸೂಪಶಾಸ್ತ್ರ ಯೋಗಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಮನಶಾಸ್ತ್ರಗಳನ್ನು ಪ್ರಧಾನವಾಗಿಟ್ಟು

ಕೊಳ್ಳಲಾಗಿದೆ. ಇಡೀ ವೈದ್ಯಪದ್ಧತಿ ಪ್ರಕೃತಿ ಹಾಗೂ ಋತುಮಾನಗಳ ಚಲನೆಯನ್ನಾಧರಿಸಿದೆ. ಸಾಮಾಜಿಕ ಹಾಗೂ ಭೌಗೋಳಿಕ ವೈವಿಧ್ಯತೆಯನ್ನು ಪ್ರಧಾಒನವಾಗಿ ನೆಚ್ಚಿಕೊಂಡಿದೆ. ಹೀಗಾಗಿ ಅದೊಂದು ಬಹು ಆಯಾಮವುಳ್ಳ ಪರಸ್ಪರ ಅಂತರ್‌ಸಂಬಂಧವುಳ್ಳ ತಿಳುವಳಿಕೆಯ ಶಾಸ್ತ್ರವಾಗಿದೆ ಎಂಬುದು ಮುಖ್ಯವಿಚಾರ. ಹೀಗಾಗಿ ಸಂಸ್ಕೃತಿ ಅಧ್ಯಯನ ದೃಷ್ಟಿಯಿಂದ ಕುತೂಹಲ ಭರಿತವಾದ ಜ್ಞಾನಶಾಖೆ ಇದಾಗಿದೆ ಎನ್ನುವುದು ಗಮನಾರ್ಹ.

## ೫.೧. ವೈದ್ಯಶಾಸ್ತ್ರ-ಯೋಗಶಾಸ್ತ್ರ

ಯೋಗ ವಿದ್ಯೆಗೆ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಮಹತ್ವದ ಸ್ಥಾನವಿದೆ. ಭಾರತೀಯ ತತ್ವಜ್ಞಾನವನ್ನು ಮನಗಾಣಿಸುವ ಆರು ದರ್ಶನಗಳಲ್ಲಿ ಯೋಗವು ಒಂದು. 'ಯೋಗ' ಎಂದರೆ ಐಕ್ಯವಾಗು ಎಂಬುದಾಗಿ ಅರ್ಥೈಸಲಾಗಿದೆ. ಅಂದರೆ ಪರಮಾತ್ಮನನ್ನು ಕೂಡಿಕೊಳ್ಳುವುದು ಆತನೊಡನೆ ಐಕ್ಯವಾಗುವುದು ಎಂದರ್ಥ"[೧], ಯೋಗಾಸನದಿಂದ ಆರೋಗ್ಯ, ದೃಢವಾದ ಮಾಂಸಖಂಡಗಳು, ಕಷ್ಟ ಸಹಿಷ್ಣುತೆ, ದೀರ್ಘಕಾಲ ಕೆಲಸಮಾಡಬಲ್ಲ ಸ್ಥಿತಿ, ಶಿಸ್ತು, ರೋಗನಿರೋಧಕ ಶಕ್ತಿ ಪ್ರವರ್ಧಮಾನಕ್ಕೆ ಬರುತ್ತವೆ. ದೇಹದ ಸದೃಢ ಬೆಳವಣಿಗೆ, ಚಲನಶೀಲತೆ ಕೌಶಲ್ಯ ಮತ್ತು ಸದಭ್ಯಾಸಾದಿಗಳನ್ನು ರೂಢಿಸಲು ನೆರವಾಗುವಂಥ ವಿಶೇಷ ಜ್ಞಾನವೆಂದು ಹೇಳಬಹುದು. ಮನುಷ್ಯ ಸ್ವಸ್ಥ್ಯ ಮನಸ್ಸಿನಿಂದ ದೀರ್ಘಾಯುಸಿಯಾಗಿ ಬದುಕಬೇಕೆಂದರೆ ಯೋಗಶಾಸ್ತ್ರವು ನೆರವಾಗುತ್ತದೆ. ನಮ್ಮ ದೇಶಿ ವೈದ್ಯಶಾಸ್ತ್ರ ರೋಗಿಯನ್ನು ನಿರೋಗಿಯನ್ನಾಗಿಸುವ ಮತ್ತು ರೋಗಬಾರದಂತೆ ಮಾಡುವ ಗುರಿಯನ್ನು ಹೊಂದಿದಂತೆ ಯೋಗಶಾಸ್ತ್ರವು ಮನುಷ್ಯ ರೋಗಕ್ಕೆ ತುತ್ತಾಗದಂತೆ ಮುನ್ನೆಚ್ಚರಿಕೆಯ ಕಾರ್ಯವಿಧಾನವನ್ನು ತಿಳಿಸಿಕೊಡುತ್ತದೆ. ಆದ್ದರಿಂದ ಯೋಗಶಾಸ್ತ್ರಕ್ಕೂ ಮತ್ತು ವೈದ್ಯಶಾಸ್ತ್ರಕ್ಕೂ ನಿಕಟ ಸಂಬಂಧವಿದೆ. ದೇಹಸ್ವಾಸ್ಥ್ಯವು ಅರ್ಥಾತ್ ರೋಗವನ್ನು ಪರಿಹರಿಸಿ ರೋಗಿಯನ್ನು ನಿರೋಗಿಯನ್ನಾಗಿಸುವುದೇ ವೈದ್ಯಶಾಸ್ತ್ರದ ಮೂಲಗುರಿಯಾದರೆ ಯೋಗಶಾಸ್ತ್ರವು ತನ್ನ ಗುರಿಯಾದ ಆತ್ಮಸಾಕ್ಷಾತ್ಕಾರಕ್ಕೆ ನಿರೋಗತ್ವವೇ ತಳಹದಿ ಎನ್ನುತ್ತದೆ. ಆರೋಗ್ಯವನ್ನು ಪಡೆಯಲು ವೈದ್ಯಶಾಸ್ತ್ರದಲ್ಲಿ ಚಿಕಿತ್ಸೆಯನ್ನು ಹೇಳಿದರೆ ಯೋಗದಲ್ಲಿ ಯಮನಿಯಮಯುಕ್ತವಾದ ಆಸನ ಪ್ರಾಣಾಯಾಮಾದಿ ಶಾಸ್ತ್ರ ಸಾಧನೆಗಳನ್ನು ಹೇಳಿದೆ.

ಯೋಗಸಾಧನೆಯಲ್ಲಿ ಪ್ರಾಣಾಯಾಮಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಇದು ದೇಹಸ್ವಾಸ್ಥ್ಯವನ್ನು ನೀಡುವುದಲ್ಲದೆ ಆತ್ಮಸಾಕ್ಷಾತ್ಕಾರಕ್ಕೂ ದೇಹವನ್ನು ಹದಗೊಳಿಸಿ ಜೀವನಿಗೆ ಬ್ರಹ್ಮಪ್ರಾಪ್ತಿಗೂ ಬಹುಮಟ್ಟಿಗೆ ಸಹಾಯಕವಾಗುತ್ತದೆ. ದೇಶಿ ವೈದ್ಯಪದ್ಧತಿಯಲ್ಲಿ ಅನೇಕ ನಿಯಮ ಪಥ್ಯಗಳಿವೆ. ಅವುಗಳು ಬೇಕು. ಏಕೆಂದರೆ "ನೆಟ್ಟಗಿಡಗಳು ಚಿಕ್ಕವಿರುವಾಗ ಅದಕ್ಕೆ ಸುತ್ತಲೂ ರಕ್ಷಣೆಗೆ ಮುಳ್ಳಿನ ಬೇಲಿಯು ಬೇಕು. ಆದರೆ ಅದೇ ಗಿಡ ಬಲಿತು ಮರವಾಗಿ ಬೆಳೆದು ನಿಂತಾಗ ಅದಕ್ಕೆ ಆನೆಯನ್ನೆ ಕಟ್ಟಬಹದು" ಎಂಬ ಮಾತಿದೆ. ಅದರಂತೆಯೇ ರೋಗದಿಂದ ನಿರುಕ್ತಿ ಹೊಂದಲು ಮೊದಲು ಬಹುಕಟ್ಟುನಿಟ್ಟಾದ ವಿಧಿ ನಿಯಮಗಳು ಅಗತ್ಯ. ಆದರೆ ದೇಹ ಸದೃಢವಾದಾಗ ರೋಗ ನಿರೋಧಕ ಶಕ್ತಿ ಪಡೆದಾಗ ಚಿಕ್ಕಪುಟ್ಟ ವ್ಯಾದಿಗಳು ತನ್ನಿಂದ ತಾನೇ ಕರಗಿ ಕಳಚಿ ಬೀಳುತ್ತವೆ.

ಪ್ರಾಣಾಯಾಮಗಳ ಸಾಧನೆಯಿಂದ ಕ್ಷಯ, ದಮ್ಮು, ಕೆಮ್ಮು, ಮದುಮೇಹ, ಹೃದಯ ದೌರ್ಬಲ್ಯ, ಗುಲ್ಮ, ಅಪಚನ, ಮಂದಾಗ್ನಿ ಮೊದಲಾದ ಅನೇಕ ರೋಗಗಳನ್ನು ಗುಣಪಡಿಸಲು ಸಾಧ್ಯ. ಎಂದು ಹೇಳಲಾಗುತ್ತದೆ. ಇಂತಹ ಪ್ರಾಣಾಯಾಮಗಳನ್ನು ಜನಸಾಮಾನ್ಯರು ನಿತ್ಯನಿಯಮಿತವಾಗಿ ಆಚರಿಸಿದಲ್ಲಿ ಇದರಿಂದ ಸಂಪೂರ್ಣ ದೇಹ ಸ್ವಾಸ್ಥ್ಯವು ಲಭಿಸುವುದಲ್ಲದೆ ಆಯುಷ್ಯವು ವೃದ್ಧಿಯಾಗುತ್ತದೆ. ಹೇಗೆಂದರೆ ಒಬ್ಬ ಆರೋಗ್ಯವಂತನಾದ ಮನುಷ್ಯನು ದಿನಕ್ಕೆ ೨೧,೬೦೦ ಬಾರಿ ಉಚ್ಛ್ವಾಸ ನಿಶ್ವಾಸಗಳನ್ನು ಮಾಡುತ್ತಾನೆ. ಆದರೆ ಪ್ರಾಣಾಯಾಮದ ಅಭ್ಯಾಸದಲ್ಲಿ ಈ ಉಚ್ಛ್ವಾಸ ನಿಶ್ವಾಸಗಳು ದೀರ್ಘವಾಗಿ ನಡೆಯುವುದರಿಂದ ಸಹಜವಾಗಿಯೇ ಆತನ ಉಚ್ಛ್ವಾಸ ನಿಶ್ವಾಸಗಳ ಸಂಖ್ಯೆಯೂ ತಗ್ಗುತ್ತದೆ. ಕಾಲವೂ ಹೆಚ್ಚುತ್ತದೆ. ಇದರಿಂದ ಆಯುಸ್ಸಿನ ವೃದ್ಧಿಯಾಗುತ್ತದೆ"[೨]. ಎಂದು ತಿರುಕ ಅವರು ಪ್ರತಿಪಾದಿಸಿದ್ದಾರೆ. ವ್ಯಕ್ತಿಯಲ್ಲಿ ಶಾರೀರಕ, ಮಾನಸಿಕ, ನೈತಿಕ ಹಾಗೂ ಆಧ್ಯಾತ್ಮಿಕ ಪರಿವರ್ತನೆ ಮೂಡಿಸಿ, ತನ್ಮೂಲಕ ವ್ಯಕ್ತಿ ಹಾಗೂ ಸಮಾಜದ ಸಾಂಸ್ಕೃತಿಕ ಪಾತಳಿಯನ್ನು ಉನ್ನತ ಮಟ್ಟಕೇರಿಸುವ ಸತ್ವ ಈ ಶಾಸ್ತ್ರಕ್ಕಿದೆ. ಅವಸರ, ಒತ್ತಡ, ಗೊಂದಲ, ವೇಗ, ಪ್ರಕ್ಷುಬ್ಧತೆ ಇವುಗಳ ಪ್ರವಾಹದಿಂದ ಚಿಂತೆ ಹಾಗೂ ನಿರಾಶೆಗಳಿಂದ ಹೃದಯರೋಗ, ರಕ್ತದ ಒತ್ತಡ ಹಾಗೂ ಸಿಹಿಮೂತ್ರ ರೋಗಗಳ ಕೂಪದೆಡೆ ಸೆಳೆಯುತ್ತಿವೆ. ಕೆಲಸದ ಸ್ಥಳದಲ್ಲಿ ಸತತವಾಗಿ ನಿಂತು ಅಥವಾ ಒಂದೇ ಕಡೆ ಕುರ್ಚಿಯಲ್ಲಿ ಕುಳಿತು ಕೆಲಸ ಮಾಡುವುದರಿಂದ ಶರೀರದ ಮುಕ್ತ ಸಂಚಲನೆಗೆ ಅವಕಾಶ ಇಲ್ಲವಾಗಿ ಮಂಡಿಗಳ ನೋವು, ಸಂಧಿವಾತ, ವಾತ, ಮೈ-ಕೈ ನೋವುಗಳು ಹೆಚ್ಚಾಗುತ್ತವೆ. ಬೌದ್ಧಿಕ ಚಟುವಟಿಕೆಗಳಲ್ಲಿ ಸತತ ನಿರತರಾದವರಿಗೆ ತಲೆನೋವು, ಮಾನಸಿಕ ವಿಕಾರತೆ ಮುಂತಾದ ತೊಂದರೆಗಳು ಬಂದೊದಗುತ್ತವೆ. ಇಂತಹ ತೊಂದರೆಗಳನ್ನು ಹೋಗಲಾಡಿಸಿ ಆರೋಗ್ಯ ಜೀವನ ಸಾಗಿಸಲು ಸಹಕಾರಿಯಾಗುವುದು ಯೋಗಶಾಸ್ತ್ರ.

ದೇಶಿ ವೈದ್ಯಶಾಸ್ತ್ರವು ಶಾರೀರಿಕ ಕ್ರಿಯೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಿದೆ. ಚಲನ, ಪಚನ ಹಾಗೂ ಲೇಪನ, ಇವು ಅನುಕ್ರಮವಾಗಿ ಮೂರು ಚಿತ್ತವೃತ್ತಿಗಳನ್ನು ಹೋಲುತ್ತವೆ. ವಾತ ಪಿತ್ತ ಹಾಗೂ ಕಫ(ಶ್ಲೇಷ್ಮ) ಮೇಲ್ಕಾಣಿಸಿದ ಕ್ರಿಯೆಗಳನ್ನು ಮಾಡುತ್ತ ಶರೀರವು ಆರೋಗ್ಯದಿಂದ ಇರುವಾಗ ಈ ಮೂರು ಚಿತ್ತವೃತ್ತಿಗಳು ತಮ್ಮದೇ ಆದ ಪ್ರಮಾಣವನ್ನು ಕಾಯ್ದುಕೊಳ್ಳುತ್ತವೆ. ತ್ರಿದೋಷಗಳು ಶರೀರದಲ್ಲಿ ಏರಿಳಿತ ಉಂಟುಮಾಡುವಂತೆ ರಜೋ ಹಾಗೂ ತಮೋ ಗುಣಗಳು ಮಾನಸಿಕ ಏರಿಳಿತಗಳನ್ನು ಉಂಟುಮಾಡುತ್ತವೆ. ಮನುಷ್ಯರಲ್ಲಿ ಕಂಡುಬರುವ ಭಾವೋದ್ರೇಕಕ್ಕೆ ರಜೋಗುಣ ಕಾರಣವಾಗಿರುತ್ತದೆ. ತಮೋಗುಣ ಮನುಷ್ಯನನ್ನು ದುಃಖ ಅಜ್ಞಾನ ಮುಂತಾದ ಅಂಧಕಾರದ ಕೂಪಕ್ಕೆ ತಳ್ಳುತ್ತದೆ. ಸಜ್ಜನಿಕೆ ಹಾಗೂ ಪರಿಶುದ್ಧತೆಯಿಂದ ಕೂಡಿದ ಸತ್ವಗುಣದ ಮೇಲೆ ರಜೋ ಹಾಗೂ ತಮೋ ಗುಣಗಳು ಅಚ್ಛಾದಿತವಾದಾಗ ಅಥವಾ ಪ್ರಭುತ್ವ ಸಾಧಿಸಿದಾಗ ಮನುಸ್ಸು ರೋಗಗಳ ನೆಲೆಯಾಗುತ್ತದೆ. ಆದುದರಿಂದ ಶರೀರ ಹಾಗೂ ಮನಸ್ಸುಗಳೆರಡನ್ನು ಬುದ್ಧಿವಂತಿಕೆಯಿಂದ ಸಂರಕ್ಷಿಸಬೇಕಾಗುತ್ತದೆ"[೩].

ವೈದ್ಯಶಾಸ್ತ್ರದಂತೆ ಯೋಗವೂ ಮೂರು ಬಗೆಯ ಕ್ಲೇಶಗಳನ್ನು ಗುರುತಿಸಿದೆ; ಆಧ್ಯಾತ್ಮಿಕ, ಆದಿದೈವಿಕಶಾಸ್ತ್ರ ಹಾಗೂ ಆದಿಭೌತಿಕ, ಆಧ್ಯಾತ್ಮಿಕವು ಶರೀರ ಹಾಗೂ ಮನಸ್ಸುಗಳೆರಡನ್ನೂ ಕುರಿತದ್ದಾಗಿದೆ ಎಂದರೆ ದೈಹಿಕ ಹಾಗೂ ಮಾನಸಿಕ ಅನಾರೋಗ್ಯಗಳು. ಆದಿಜೈವಿಕಕ್ಲೇಶ ಎಂದರೆ ಮತಿಭ್ರಮಣೆ,

ಕಾಡುಮೃಗ, ನೀರು, ಬೆಂಕಿ, ಅಪಘಾತಗಳು ಮುಂತಾದವುಗಳಿಂದ ಒದಗುವ ಅಸಹಜ ಸಾವು. ನೈಸರ್ಗಿಕ ವಿಕೋಪಗಳಾದಂಥ ಚಂಡಮಾರುತ, ಬಿರುಗಾಳಿ, ಪ್ರಖರ ಬಿಸಿಲಿನ ಹೊಡೆತ, ಪ್ರವಾಹಗಳಿಂದಾಗುವ ಉಧ್ವಸ್ತತೆ ಮುಂತಾದವು ಆದಿದೈವಿಕ ಕ್ಲೇಶಗಳಾಗಿವೆ. ಇಲ್ಲಿ ಯೋಗವು ಆರೋಗ್ಯದ ವ್ಯಾಖ್ಯೆಗೆ ಹೆಚ್ಚಿನದನ್ನು ಸೇರಿಸಿ ಅದನ್ನು ಸಮಗ್ರವಾಗಿಸಿದೆ"೪. ಯೋಗಶಾಸ್ತ್ರದ ಅನುಸಾರ ಆತ್ಮಸಾಕ್ಷಾತ್ಕಾರಕ್ಕೆ ಅಡ್ಡಿಯುಂಟು ಮಾಡುವವುಗಳೆಲ್ಲ ಶಾರೀರಕ ರೋಗಗಳಾಗಿವೆ. ಇವು ಚಿತ್ತವೃತ್ತಿಯಲ್ಲಿ ಬದಲಾವಣೆಯನ್ನುಂಟು ಮಾಡುತ್ತವೆ. ಹಾಗೂ ದೇಹ ಮತ್ತು ಮನಸ್ಸುಗಳ ನಡುವೆ ಅಸಮತೋಲನ ಉಂಟುಮಾಡುತ್ತದೆ. ಅದು ಮನಸ್ಸಿನೊಂದಿಗೆ ಸಹಕರಿಸುವಂತಹ ಆರೋಗ್ಯವನ್ನು ನೀಡುವುದರಿಂದ ಸ್ಥಿರತೆ, ಶಾಂತತೆ ಹಾಗೂ ಸದೃಢತೆಗಳು ಮೂಡುತ್ತವೆ. ಮುಂಬರುವ ನೋವುಗಳನ್ನು ನಿವಾರಿಸುವ ಸಾಮರ್ಥ್ಯವನ್ನು ಯೋಗಶಾಸ್ತ್ರ ದೊರಕಿಸಿಕೊಡುತ್ತದೆ. ಆದುದರಿಂದ ಯೋಗಾಭ್ಯಾಸವು ಕೇವಲ ಶಾರೀರಿಕ ಆರೋಗ್ಯವನ್ನಷ್ಟೇ ಅಲ್ಲ ಮಾನಸಿಕ ಆರೋಗ್ಯವನ್ನೂ ತಂದುಕೊಡುತ್ತದೆ.

ಸಾಮಾನ್ಯವಾಗಿ ಆರೋಗ್ಯ ಈ ಶಬ್ದವನ್ನು ಶರೀರದ ಸ್ಥಿತಿಗೆ ಸಂಬಂಧಿಸಿದಂತೆ ಬಳಸಲಾಗುತ್ತದೆ. ಯಾರಲ್ಲಿ ಸ್ನಾಯುಬಲ ಹೆಚ್ಚಾಗಿದೆಯೋ ಅವರು ಆರೋಗ್ಯವಂತರು ಎಂದು ಪರಿಗಣಿಸಲಾಗುತ್ತದೆ. ಆದರೆ ಯೋಗಶಾಸ್ತ್ರದಲ್ಲಿ 'ಆರೋಗ್ಯ' ಈ ಶಬ್ದದ ವ್ಯಾಪ್ತಿ ಇನ್ನೂ ವಿಶಾಲವಾಗಿದೆ.

ಭಾರತೀಯ ಶಾಸ್ತ್ರಗಳಲ್ಲಿ ಮಾನವನ ಶರೀರದಲ್ಲಿನ ಸ್ನಾಯುಗಳು ಇಂದ್ರಿಯಗಳೊಂದಿಗೆ ಮನಸ್ಸಿನ ಅಸ್ತಿತ್ವವನ್ನು ಮಾನ್ಯ ಮಾಡಲಾಗಿದೆ. ಅದನ್ನು ಸೂಕ್ಷ್ಮೇಂದ್ರಿಯ ಎಂದೆನ್ನುವರು. ಮನಸ್ಸು ಹಾಗೂ ಶರೀರಗಳಲ್ಲಿನ ಸಂಬಂಧ ನಿಷ್ಠವಾದದ್ದು. ಒಂದು ಇನ್ನೊಂದರ ಮೇಲೆ ಪರಿಣಾಮ ಬೀರುತ್ತಲಿರುತ್ತದೆ. ಹೀಗಾಗಿ ವ್ಯಕ್ತಿಯ ಆರೋಗ್ಯದ ಕುರಿತು ಯೋಚಿಸುವಾಗ ಕೇವಲ ಶರೀರದ ಸ್ಥಿತಿಗತಿಯನ್ನು ಮಾತ್ರ ಪರಿಗಣಿಸಿದರೆ ಸಾಲದು, ಜತೆಜತೆಗೇ ಮನಸ್ಸಿನ ಸ್ಥಿತಿಯನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಶರೀರ ಹಾಗೂ ಮನಸ್ಸಿನ ಸ್ಥಿತಿಗಳೆರಡನ್ನೂ ಉತ್ತಮ ಇರಿಸಿಕೊಂಡಿರುವ ವ್ಯಕ್ತಿಯೇ ಆರೋಗ್ಯವಂತ ವ್ಯಕ್ತಿ ಎಂದು ಹೇಳಬಹುದಾಗಿದೆ. ಯೋಗಶಾಸ್ತ್ರದಲ್ಲಿ ಶರೀರಸ್ವಾಸ್ಥ್ಯಕ್ಕೆ ಇರುವಷ್ಟೇ ಮಹತ್ವ ಮನಃಸ್ವಾಸ್ಥ್ಯಕ್ಕೂ ನೀಡಲಾಗಿದೆ. ಕೇವಲ ರೋಗಮುಕ್ತ ಸ್ಥಿತಿಯೇ ಆರೋಗ್ಯ ಎಂದು ತಿಳಿಯದೆ ದುಃಖರಹಿತ ಶರೀರ ಹಾಗೂ ಮನಸ್ಸು ಇದೇ ಆರೋಗ್ಯ ಎಂದು ಮಾನ್ಯ ಮಾಡಲಾಗಿದೆ. ಶಾರೀರಿಕ, ಮಾನಸಿಕ, ಬೌದ್ಧಿಕ, ನೈತಿಕ, ಆಧ್ಯಾತ್ಮಿಕ ಇತ್ಯಾದಿ ಸ್ಥರಗಳ ನಡುವೆ ಸುಯೋಗ್ಯ ಸಾಮರಸ್ಯ, ಲಯ ಹಾಗೂ ಸುಸಂವಾದ ಹೊಂದಿರುವುದೇ ಆರೋಗ್ಯ. ಒಬ್ಬ ವ್ಯಕ್ತಿಯ ಆರೋಗ್ಯವು ಒಂದಷ್ಟು ಪ್ರಮಾಣದಲ್ಲಿ ಅನುವಂಶಿಕ, ಕೌಟುಂಬಿಕ, ಸಾಮಾಜಿಕ ಇತ್ಯಾದಿ ಬಾಹ್ಯಸಂಗತಿಗಳನ್ನು ಅವಲಂಬಿಸಿರುತ್ತದೆಯಾದರೂ ಇದೆಲ್ಲವನ್ನು ದಾಟಿ ಮುಂದೆ ನಡೆಯುವ ಸಾಮರ್ಥ್ಯ ನಮ್ಮ ಕೈಯಲ್ಲಿದೆ. ಅದೇ ಯೋಗಾಸನಗಳ ಮೂಲಕ ಶರೀರ, ಮನಸ್ಸು, ಬುದ್ಧಿ ಇವುಗಳನ್ನು ಶುದ್ಧಿಗೊಳಿಸಿ ಆರೋಗ್ಯವನ್ನು ಸಂಪಾದಿಸುವುದು ಸಾಧ್ಯವಿದೆ.

ಆರೋಗ್ಯಕ್ಕಾಗಿ ವಿವಿಧ ಪ್ರಕಾರದ ವ್ಯಾಯಾಮಗಳನ್ನು ಮಾಡಲಾಗುತ್ತದೆ. ವ್ಯಾಯಾಮ ಎಂದರೆ ಶರೀರದ ಸ್ನಾಯುಗಳ ಚಲನೆಯನ್ನು ಯುಕ್ತಗೊಳಿಸುವುದೇ. ಇದರಿಂದ ಅವುಗಳಲ್ಲಿ ರಕ್ತಚಲನೆ ಹೆಚ್ಚುತ್ತದೆ. ಶುದ್ಧಗಾಳಿ ದೊರಕಿ ಸ್ನಾಯುಗಳು ಸದೃಢವಾಗುತ್ತವೆ. ಯೋಗಾಸನದ ಪ್ರತಿಯೊಂದು ಭಂಗಿ(ಆಸನ)

ಉದ್ದೇಶಪೂರಿತ ಆಗಿದ್ದು ಅದನ್ನು ಬುದ್ಧಿಪೂರ್ವಕ, ಕೌಶಲ್ಯದಿಂದ ಹಾಗೂ ಪ್ರಯತ್ನಪೂರ್ವಕ ಮಾಡಲಾಗುತ್ತದೆ. ಅಭ್ಯಾಸದಿಂದ ಈ ಪ್ರಯತ್ನಕ್ಕೆ ಪರಿಪೂರ್ಣತೆ ದೊರಕುತ್ತದೆ. ಹಾಗೂ ಸಹಜತೆ ಪ್ರಾಪ್ತಿಯಾಗುತ್ತದೆ ಮತ್ತು ಕೊನೆಗೆ ಶರೀರವು ಒಂದು ಸುಖಮಯ ಸ್ಥಿತಿಯಲ್ಲಿ ಸ್ಥಿರಗೊಳ್ಳುತ್ತದೆ. ದೇಹದೊಂದಿಗೆ ಶರೀರ ಹಾಗೂ ಬುದ್ಧಿಗಳು ಸ್ಥಿರಗೊಂಡು ಶಾಂತವಾಗುತ್ತವೆ. ಆಸನದ ಈ ಅನುಭವ ಆರಂಭದಲ್ಲಿ ಆಗುವುದಿಲ್ಲವಾದ್ದರಿಂದ ಆಗ ಆಸನವೂ ಒಂದು ಪ್ರಕಾರದ ವ್ಯಾಯಾಮ ಎಂದು ಅನಿಸುವುದು. ಅಂತೆಯೇ ಯೋಗಾಸನವು ಒಂದು ವ್ಯಾಯಾಮದ ಪ್ರಕಾರವಾಗಿಯೇ ಜನಜನಿತವಾಗಿದೆ. ಯೋಗಾಸನಗಳಿಂದ ಶರೀರದಲ್ಲಿನ ಎಲ್ಲ ಸ್ನಾಯುಗಳು, ಒಳಭಾಗದಲ್ಲಿನ ಇಂದ್ರಿಯಗಳು, ಗ್ರಂಥಿ ಇವೆಲ್ಲವುಗಳಿಗೂ ವ್ಯಾಯಾಮ ದೊರಕುತ್ತದೆ. ವಿಶೇಷವಾಗಿ ಗ್ರಂಥಿಗಳಿಗೆ ವ್ಯಾಯಾಮ ಯೋಗಾಸನಗಳಿಂದ ಮಾತ್ರ ಸಾಧ್ಯ. ಸ್ಥಿರ ಮತ್ತು ಸುಖಮಯ ಆಸನಗಳಿಂದ ಆರೋಗ್ಯ ಪ್ರಾಪ್ತಿಯಾಗುತ್ತದೆ. ಅವಯವಗಳು ಚಟುವಟಿಕೆಗಳಿಂದ ತುಂಬುತ್ತವೆ. ಸ್ಥಿರತ್ವ ಬರುತ್ತದೆ.ಶರೀರ ಹಗುರವಾಗುತ್ತದೆ. ಮನಸ್ಸಿನ ಚಂಚಲತೆಗೆ ಪ್ರತಿಬಂಧತೆ ಬರುತ್ತದೆ. ಶರೀರದೊಂದಿಗೆ ಮನಸ್ಸಿಗೂ ತಿರುವು ದೊರಕುತ್ತದೆ.

ಯೋಗಾಸನಗಳ ಮೂಲಕ ಆರೋಗ್ಯ ದೊರಕಬೇಕಾದರೆ ಶ್ರದ್ಧಾಪೂರ್ವಕ ಪರಿಶ್ರಮ ಹಾಗೂ ಸಾತತ್ಯತೆ ಅತ್ಯಗತ್ಯ. ಯೋಗಾಸನಗಳಿಂದ ಆರೋಗ್ಯಭಾಗ್ಯ ದೊರಕುವಂತೆ ರೋಗಗಳ ಹಾಗೂ ದುಃಖದ ನಿವಾರಣೆಗೂ ಯೋಗಾಸನಗಳು ಉಪಯುಕ್ತ ಆಗಿವೆ. "ಭೂತಕಾಲದ ನೆನಪುಗಳು ಹಾಗೂ ಹಗಲು ಕನಸುಗಳಿಂದಲೇ ಹೆಚ್ಚಿನ ಪಾಲು ದುಃಖ ಉಗಮವಾಗುತ್ತದೆ. ಯೋಗಾಸನ ಮಾಡುವಾಗ ಸಾಧಕನ ಮನಸ್ಸು ವರ್ತಮಾನದಲ್ಲಿ ಇರುತ್ತದೆ. ಸಾಧನೆ ಹೆಚ್ಚುತ್ತ ಹೋದಂತೆ ವರ್ತಮಾನದಲ್ಲಿ ಬದುಕುವ ಅವಧಿ ಅಧಿಕವಾಗುತ್ತ ಹೋಗುತ್ತದೆ. ಹಾಗೂ ವಾಸ್ತವ ವರ್ತಮಾನದ ಪ್ರಜ್ಞೆ ಅಧಿಕವಾಗುತ್ತದೆ. ಇದುವೆ ದುಃಖ ನಿವಾರಣೆಗೆ ಸಹಾಯವಾಗುತ್ತದೆ. ಇಂದಿನ ಸ್ಥಿತಿಯನ್ನು ಗಮನಿಸಿದಾಗ "ಯೋಗಃಶ್ಚಿತ್ತವೃತ್ತಿನಿರೋಧಃ" ಎಂದೆನ್ನುವ ಬದಲು 'ಯೋಗಃದುಃಖವೃತ್ತಿನಿರೋಧಃ' ಎಂದು ಹೇಳಿದ್ದರೆ ತಪ್ಪು ಎನಿಸುತ್ತಿರಲಿಲ್ಲ. ಯೋಗ್ಯ ಮಾರ್ಗದರ್ಶನದಡಿ ಮಾಡುವ ಯೋಗಾಸನಗಳಿಂದ ವಿವಿಧ ಪ್ರಕಾರದ ರೋಗಗಳು ನಿವಾರಣೆಯಾಗುತ್ತವೆ ಹಾಗೂ ಅಶಕ್ತರನ್ನು ಸಶಕ್ತರನ್ನಾಗಿ ಮಾಡಲು ಉಪಯೋಗವಾಗುತ್ತವೆ. "ಹೇಯಂ ದುಃಖ ಅನಾಗತಮ್ ಎಂಬುದಾಗಿ ಪಾತಂಜಲಿ ಯೋಗಸೂತ್ರದ ಸಾಧನಾ ಅಥವಾ ದ್ವಿತೀಯ ಪಾದದ ಹದಿನಾರನೆ ಸೂತ್ರದಲ್ಲಿ ಹೇಳಲಾಗಿದೆ. ಭವಿಷ್ಯದಲ್ಲಿ ಬಂದೊದಗುವ ದುಃಖಗಳೂ ಶಮನಗೊಳ್ಳುತ್ತವೆ ಎಂಬುದು ಇದರ ಅರ್ಥವಾಗಿದೆ. ಈ ಅರ್ಥದಲ್ಲಿ ಯೋಗವು ಒಂದು ಪ್ರತಿಬಂಧಕ ಶಾಸ್ತ್ರವಾಗಿದೆ"[೫].

ಪ್ರತಿಯೊಬ್ಬರಿಗೂ ದೈನಂದಿನ ಜೀವನದಲ್ಲಿ ಬಂದೊದಗುವ ಸಣ್ಣಪುಟ್ಟ ಆತಂಕಗಳನ್ನು ದೂರಗೊಳಿಸುವಲ್ಲಿ ಯೋಗಾಸನಗಳು ಉಪಯುಕ್ತ ಎನಿಸಿವೆ. ಅತಿಶ್ರಮದ ಕೆಲಸದಿಂದ ಉಂಟಾಗುವ ದಣಿವನ್ನು ಯೋಗಾಸನಗಳಿಂದ ನಿವಾರಿಸಬಹುದಾಗಿದೆ. ಬೆನ್ನು ನೋವಿನಂಥ ಚಿಕ್ಕಪುಟ್ಟ ನೋವು, ತೀವ್ರ ನೋವುಗಳಿಗೆ ಯೋಗಾಸನ ಒಂದು ಮನೆಯೌಷಧಿಯಾಗಿದೆ ಯೋಗಶಾಸ್ತ್ರದಲ್ಲಿ ಆರೋಗ್ಯ ಕುರಿತು ವ್ಯಾಪಕ ಕಲ್ಪನೆ ಆರೋಗ್ಯ ಹಾಗೂ ಯೋಗ ವಿಷಯಗಳ ಸಂಬಂಧ ಆಸನಗಳ ಮೂಲಕ ದೊರಕುವ ದೈಹಿಕ ಹಾಗೂ ಮಾನಸಿಕ ಆರೋಗ್ಯ, ಆರೋಗ್ಯ ಪ್ರಾಪ್ತಿಗಾಗಿ ಇರುವ ಇತರ

ಮಾರ್ಗಗಳಿಗಿಂತ ಯೋಗಾಸನ ಹೊಂದಿರುವ ಭಿನ್ನ ಸ್ವರೂಪ ಹಾಗೂ ವೈಶಿಷ್ಟತೆ, ಶರೀರದ ಆರೋಗ್ಯದ ಜತೆಜತೆಗೆ ಸಾಧಕನಿಗೆ ದೊರಕುವ ಸರ್ವಾಂಗೀಣ ಉನ್ನತಿ, ವ್ಯಾವಹಾರಿಕ ಜೀವನದ ಸಮಸ್ಯೆಗಳನ್ನು ಎದುರಿಸಲು ಯೋಗಾಸನದ ಮೂಲಕ ದೊರಕುವ ಕ್ಷಮತೆ ಇವುಗಳ ವಿಚಾರ ತಿಳಿಸಲಾಗಿದೆ. ವೈದ್ಯಶಾಸ್ತ್ರವೂ ಕೂಡ ಮನುಷ್ಯ ದೇಹಸ್ವಾಸ್ಥ್ಯದ ಜೊತೆಗೆ ಮನಸ್ವಾಸ್ಥ್ಯವನ್ನು ಕಾಪಾಡುವ ಮೂಲಕ ದೀರ್ಘಾಯುವನ್ನು ಪಡೆಯಲು ಮಾರ್ಗದರ್ಶನ ಮಾಡುತ್ತದೆ. ಆದ್ದರಿಂದ ಈ ಎರಡು ಶಾಸ್ತ್ರಗಳ ಗುರಿಯೂ ಒಂದೇ ಆಗಿದೆ.

### ೫.೨. ವೈದ್ಯಶಾಸ್ತ್ರ–ಸೂಪಶಾಸ್ತ್ರ

"Good food is good health" ಎಂಬ ಗಾದೆಮಾತಿನಂತೆ ಸದೃಢವಾದ ಆರೋಗ್ಯಕ್ಕೆ ಪೌಷ್ಟಿಕ ಆಹಾರದ ಅಗತ್ಯವಿದೆ ಎಂಬುದನ್ನು ನಮ್ಮ ಪೂರ್ವಜರು ಎಂದಿನಿಂದಲೂ ಬಲ್ಲವರಾಗಿದ್ದರು. "ಎಲ್ಲವನ್ನು ತಿನ್ನುವವರು ಪಾಶ್ಚಾತ್ಯರು ಆರಿಸಿ ತಿನ್ನುವವರು ಭಾರತೀಯರು" ಎಂಬ ಸ್ವಾಮಿ ವಿವೇಕಾನಂದರ ಮಾತು ನಮ್ಮ ಜನಪದರ ಆಹಾರ ಪದ್ಧತಿಯ ಪರಂಪರೆಯನ್ನು ಕುರಿತೇ ಹೇಳಿದಂತಿದೆ. ಇಲ್ಲಿ ಸೂಪಶಾಸ್ತ್ರ ಎಂದರೆ ಎಸ್.ಎನ್.ಕೃಷ್ಣಜೋಯಿಸ್ ಅವರು "ಮನುಷ್ಯನ ಅಸ್ತಿತ್ವಕ್ಕೆ ಕಾರಣವಾದ ಮತ್ತು ವಿಚಾರಗಳನ್ನು ಶಾಸ್ತ್ರರೂಪವಾಗಿ ತಿಳಿಸುವುದೇ ಸೂಪಶಾಸ್ತ್ರ"[೬] ಎಂದಿದ್ದಾರೆ. ಅಂದರೆ ಆರೋಗ್ಯ ರಕ್ಷಣೆಗೆ ಮನುಷ್ಯ ಸೇವಿಸಬೇಕಾದ ಆಹಾರ ಪದಾರ್ಥಗಳನ್ನು ತಯಾರಿಸುವ ಹಾಗೂ ಸೇವಿಸುವ ವಿಧಾನವನ್ನು ತಿಳಿಸುವುದಾಗಿದೆ. ನಮ್ಮ ವೈದ್ಯಶಾಸ್ತ್ರದಲ್ಲಿ ಆಯುಷ್ಯವನ್ನು ಕಾಪಾಡಿಕೊಳ್ಳಲೋಸುಗ ಋತುಮಾನಕ್ಕೆ ತಕ್ಕಂತೆ ಶಿಶಿರ ವಸಂತ ಗ್ರೀಷ್ಮಋತುಗಳಲ್ಲಿ ಖಾರ ಒಗರು ಕಹಿಪದಾರ್ಥಗಳನ್ನು ವರ್ಷ ಶರತ್ ಹೇಮಂತ ಋತುಗಳಲ್ಲಿ ಹುಳಿ ಉಪ್ಪು ಸಿಹಿರಸಗಳನ್ನು ಉಪಯೋಗಿಸಬೇಕೆಂದು ಹೇಳಲಾಗಿದೆ. ಈ ರೀತಿ ಆಹಾರ ಸೇವನೆಯಿಂದ ಆರೋಗ್ಯ ರಕ್ಷಣೆಗೆ ಸಹಾಯಕವಾಗುತ್ತದೆ. ಆ ಹಿನ್ನೆಲೆಯಲ್ಲೆ ಸೂಪಶಾಸ್ತ್ರದಲ್ಲಿ ಉತ್ತಮವಾದ ಆಹಾರವನ್ನು ತಯಾರಿಸುವುದರ ಜೊತೆಗೆ ಆರೋಗ್ಯ ರಕ್ಷಣೆಯ ಕ್ರಮವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

ಆರೋಗ್ಯವನ್ನು ರಕ್ಷಿಸಲು ಯಾವ ಆಹಾರವು ಸ್ವೀಕಾರಕ್ಕೆ ಯೋಗ್ಯ, ಯಾವುದು ಯೋಗ್ಯವಲ್ಲ ಎಂಬುದನ್ನು ಪ್ರಾಚೀನ ಕಾಲದಿಂದಲೂ ಜನಪದರು ಜೀವನದ ಅನುಭವದಿಂದಲೇ ತಮ್ಮ ಆಹಾರ ಪದ್ಧತಿಯನ್ನು ರೂಢಿಸಿಕೊಂಡಿದ್ದರು. ಜೊತೆಗೆ ತಮ್ಮ ಆಹಾರ ಸ್ವೀಕಾರದಿಂದ ಕಾಯಿಲೆಗಳು ಬಾರದಂತೆ ಮುನ್ನೆಚ್ಚರಿಕೆಯನ್ನು ವಹಿಸಿದ್ದರು. ಶಾಂತಿನಾಯಕರು ಈ ಕುರಿತು ಹೀಗೆ ಹೇಳುತ್ತಾರೆ. "ಕಾಡಿನ ಬಳಿ ಬದುಕುವವರು ತಮ್ಮ ಆಹಾರವನ್ನೇ ಔಷಧಿಯಾಗಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಹೀಗಾಗಿ ಯಾವ ವನಸ್ಪತಿ, ಪ್ರಾಣಿ ಪಕ್ಷಿಗಳಲ್ಲಿ ರೋಗನಿವಾರಕ ಗುಣವಿದೆಯೆಂಬುದರ ಬಗ್ಗೆ ಆಸಕ್ತರಾಗಿಯೇ ಇರುತ್ತಾರೆ. ಊಟ ಮಾಡುವಾಗ ಇದು ಆರೋಗ್ಯಕ್ಕೆ ಒಳ್ಳೆಯದು ಇದು ಒಳ್ಳೆಯದಲ್ಲ. ಇದು ಇಂತಿಂತಹ ರೋಗಕ್ಕೆ ಒಳ್ಳೆಯದು ಎಂದೆಲ್ಲ ಹೇಳುತ್ತಿರುತ್ತಾರೆ. ಅನೇಕ ಹಬ್ಬಗಳಲ್ಲಿ ಕಹಿ ತಿನ್ನುವುದನ್ನು ಕಡ್ಡಾಯವಾಗಿಸಿದ್ದಾರೆ. ಸಂಕ್ರಾಂತಿ, ದೀಪಾವಳಿ, ಯುಗಾದಿಗಳಲ್ಲಿ ಔಷಧಿ ವನಸ್ಪತಿಗಳನ್ನು ಸೇವಿಸಲು ನಿಗದಿಪಡಿಸಿದ ದಿನಗಳಾಗಿವೆ". ಜನಪದರ ಈ ಬಗೆಯ ವೈದ್ಯಕೀಯ ಹಿನ್ನೆಲೆಯಿಂದ ಕೂಡಿದ ಅಡಿಗೆ ಪರಂಪರೆಯನ್ನು ಮಾದರಿಯಾಗಿಟ್ಟುಕೊಂಡು

ಶಾಸ್ತ್ರಕಾರರು ವೈದ್ಯಕೀಯ ದೃಷ್ಟಿಯಿಂದ ಅಂದರೆ ಆರೋಗ್ಯ ರಕ್ಷಣೆಯ ದೃಷ್ಟಿಯಿಂದ ಸೂಪಶಾಸ್ತ್ರದಲ್ಲಿ ಕಟ್ಟಿಕೊಟ್ಟಿದ್ದಾರೆ.

ಭೀಮಸೇನಕೃತ ಸೂಪಶಾಸ್ತ್ರದ ಗ್ರಂಥೋಪಸಂಹಾರದಲ್ಲಿ ಕೃತಿಕಾನ ಹೇಳಿಕೆಯನ್ನು ಗಮನಿಸಬೇಕು. ಅದು ರೀತಿಯಾಗಿದೆ.

ಇದಂ ಸಮೀರಣಸುತಃ ಸಕತಾಷಧೀನಾಂ।
(ಸಾರಂ) ವಿಚಾರ್ಯ ರಸವೀರ್ಯ ವಿಪಾಕಯೋಗಂ॥
ರಾಜಾನ ಮನ್ವಹಮತೋಷಯದತ್ಯಪೂರ್ವೈ।
ರಥೈರ್ಯಥಾಮತಿ ಚಕಾರ ಚ ಸೂಪತಂತ್ರಂ"[೭]

ಎಂದು ಹೇಳಿರುವಲ್ಲಿ ಸೂಪಶಾಸ್ತ್ರದ ಧ್ಯೇಯವು ಜನರ ಆರೋಗ್ಯ ಪರಿಪಾಲನೆಯೆಂಬುದನ್ನು ತಿಳಿಸುವುದಾಗಿದೆ. ಇದಕ್ಕೆ ಪೂರಕವಾಗಿಯೂ. ಸೀತಾರಾಮಾಚಾರ್ಯ ಅವರು ಪರಿಶಿಷ್ಟ ಭಾಗದಲ್ಲಿ ಈ ರೀತಿ ಹೇಳಿದ್ದಾರೆ. "ಹಿಂದಿನ ಕಾಲದಲ್ಲಿ ಅಡಿಗೆ ಊಟಗಳೆಲ್ಲ ದೇಹಾರೋಗ್ಯದ ಅಭಿವೃದ್ಧಿಗಾಗಿ ನಡೆಯುತ್ತಿದ್ದವಲ್ಲದೆ, ಜಿಹ್ವಾಚಾಪಲ್ಯ ನಿವೃತ್ತಿಗಾಗಿರಲಿಲ್ಲ. ಭೀಮಸೇನಕೃತ ಸೂಪಶಾಸ್ತ್ರದಲ್ಲಿ ಹೇಳಿದವುಗಳೆಲ್ಲ ಜನರ ಆರೋಗ್ಯಭಿವೃದ್ಧಿಗಾಗಿಯೇ ರಚಿತವಾಗಿದೆಯೆಂದು ಹೇಳಬಹುದು. ಇಲ್ಲವಾದರೆ ಬೇವಿನ ಸೊಪ್ಪಿನಪಲ್ಯ, ಉಮ್ಮತ್ತಿನ ಸೊಪ್ಪಿನಪಲ್ಯ ಮುಂತಾದವುಗಳಲ್ಲಿ ನಾಲಗೆಯಿಂದ ಅನುಭವಿಸಲಿಕ್ಕೆ ತಕ್ಕುದಾದ ರುಚಿಗಳಿರಬಹುದೆಂದು ಹೇಳಲಿಕ್ಕೆ ಸಾಧ್ಯವೇ. ಕೇವಲ ರುಚಿಗಾಗಿ, ರಸನೇಂದ್ರಿಯದ ಪ್ರೀತಿಯೇ ಮುಖ್ಯವೆಂದು ಸ್ವೀಕರಿಸಿದ್ದಲ್ಲಿ ಬೇವು, ಉಮ್ಮತ್ತಿನಂಥ ಸೊಪ್ಪಿನ ಪಾಕಗಳ ಪ್ರಸ್ತಾಪವೇ ಇರುತ್ತಿರಲಿಲ್ಲ"[೮]. ಎಂಬ ಅಭಿಪ್ರಾಯದಲ್ಲಿ ಆರೋಗ್ಯ ಅಭಿವೃದ್ಧಿಗೆ ಹೆಚ್ಚು ಒತ್ತು ಕೊಟ್ಟ ನಮ್ಮ ಪೂರ್ವಜರು ಈ ಎಲ್ಲವನ್ನು ಸ್ವೀಕರಿಸುತ್ತಿದ್ದರು ಎಂಬುದಾಗಿದೆ.

ಬೇವಿನ ಸೊಪ್ಪಿನ ಪಲ್ಯ, ಉಮ್ಮತ್ತಿನ ಸೋಪ್ಪಿನಪಲ್ಯ ಇವು ವೈದ್ಯಶಾಸ್ತ್ರದಲ್ಲಿ ಕ್ರಿಮಿನಾಶಕಗಳಾಗಿ ಅತ್ಯಂತ ಉಪಯುಕ್ತ ಔಷಧಿ ಮೂಲಿಕೆಗಳಾಗಿ ಬಳಕೆಗೊಂಡಿವೆ. ಇಂಥ ಪಲ್ಯಗಳನ್ನು ಆಹಾರದ ರೂಪದಲ್ಲಿ ಬಳಸುವ ಹಿನ್ನೆಲೆ ಆರೋಗ್ಯದ ದೃಷ್ಟಿಯಿಂದಲ್ಲದೆ ಬೇರೆನೂ ಇಲ್ಲ. ಸೂಪಶಾಸ್ತ್ರ ಕೃತಿಗಳಾಗಲಿ ವೈದ್ಯಶಾಸ್ತ್ರ ಕೃತಿಗಳಾಗಲಿ ಆರೋಗ್ಯದ ದೃಷ್ಟಿಯಿಂದ ರಚನೆಗೊಂಡಿವೆ. ಹೊರತು ಸೂಪ ದೃಷ್ಟಿಯಿಂದ ಈ ಎರಡು ಶಾಸ್ತ್ರಗಳಲ್ಲಿ ನೇರವಾಗಿ ಏನನ್ನೂ ಹೇಳಿಲ್ಲ. ಆದಾಗ್ಯೂ ಅಲ್ಲಿ ಉಪಯೋಗಿಸುವ ಪರಿಕರಗಳಲ್ಲಿ ಈ ಶಾಸ್ತ್ರಗಳ ಅಂತರಸಂಬಂಧವನ್ನು ಕಾಣುತ್ತೇವೆ. ಅಡಿಗೆ ವಿಧಾನ ಒಂದು ಶಾಸ್ತ್ರ ಹಾಗೂ ಕಲೆ ಎಂದು ಪರಿಗಣಿಸಿರುವುದರಿಂದ ಅಲ್ಲಿ ವೈಜ್ಞಾನಿಕ ತಿಳುವಳಿಕೆಗೆ ಕೊರತೆಯಿಲ್ಲ. ಈ ಅಂಶಗಳ ಹಿನ್ನೆಲೆಯಲ್ಲಿ ಶಾಸ್ತ್ರಕಾರರು ಪ್ರಸ್ತಾಪಿಸಿರುವ ಅಡಿಗೆ ವಿಧಾನಗಳಲ್ಲಿ ವೈದ್ಯಕೀಯ ಮಹತ್ವವನ್ನು ಅರಿಯಬಹುದಾಗಿದೆ ಅಲ್ಲದೆ ಆಧುನಿಕ ವೈದ್ಯ ತ್ರಿಪದಿಗಳಲ್ಲಿಯೂ ಸೂಪಶಾಸ್ತ್ರ ಹಿನ್ನೆಲೆಯಲ್ಲಿಯೇ ಆರೋಗ್ಯ ರಕ್ಷಣೆಯ ಕುರಿತು ಉಲ್ಲೇಖಗಳು ಲಭ್ಯವಾಗುತ್ತವೆ.

ಮೂರು ಸಲ ಎರಡೆರಡು ರೊಟ್ಟಿ ತಿಂದು ಒಟ್ಟಲು
ಮೂರು ಸಲ ತೊಪ್ಪಲು ಪಲ್ಯ ತಿಂದು ನೂರಡಿ ನಡೆದು
ನೂರ್ವರುಷ ಬಾಳೆಂದ ವೈದ್ಯತಜ್ಞ॥

ತೊಪ್ಪಲು ಪಲ್ಯ ಕುರಿಯಂತೆ ತಪ್ಪದೆ ಬಾಳೆ ಮಂಗನಂತೆ
ಅಪ್ಪತಿಂದ ಎಪ್ಪತ್ತು ತುಂಬಿದರೂ ಮಲಬದ್ಧತೆ
ಬಪ್ಪದು ನೋಡು ವೈದ್ಯತಜ್ಞ॥

ಈರುಳ್ಳಿ ಬಳ್ಳೊಳ್ಳಿ ನಾರು ಇರಲಿ ಅಡಿಗೆಯಲಿ ಸಾಕಷ್ಟು
ಇರಲಿ ಉಪ್ಪ ತುಪ್ಪ ಮಿತವಾಗಿ ಇದನು
ನಾರಿ ಅರಿಯಲಿ ವೈದ್ಯತಜ್ಞ"[೯]॥

ಆಹಾರಗಳಲ್ಲಿ ಯಾವುದು ಶ್ರೇಷ್ಠ ಅದನ್ನು ಯಾವ ಪ್ರಮಾಣದಲ್ಲಿ ತಿಂದರೆ ಆರೋಗ್ಯ ಸಮತೋಲನದಲ್ಲಿರುತ್ತದೆ ಎಂಬುದನ್ನು ಕವಿ ವೈದ್ಯಶಾಸ್ತ್ರ ಮತ್ತು ಸೂಪಶಾಸ್ತ್ರದ ನಡುವಿನ ಸಂಬಂಧವನ್ನು ವಿಷದಪಡಿಸಿದ್ದಾನೆ. ಕವಿ ಉತ್ತರ ಕರ್ನಾಟಕದವರಾಗಿರುವುದರಿಂದ ಇಲ್ಲಿ ರೊಟ್ಟಿಯೇ ಪ್ರಮುಖ ಆಹಾರ, ಆದ್ದರಿಂದ ಅದನ್ನೆ ತಿನ್ನುವ ಕ್ರಮವನ್ನು ಹಾಗೂ ಇಲ್ಲಿಯ ವಾತಾವರಣಕ್ಕೆ ತಕ್ಕಂತೆ ಈರುಳ್ಳಿ ಬೆಳ್ಳುಳ್ಳಿಯಂತಹ ಪದಾರ್ಥಗಳನ್ನು ಬಳಸುವ ವಿಧಾನವನ್ನು ಆರೋಗ್ಯದ ದೃಷ್ಟಿಯಿಂದಲೇ ಸೂಚಿಸಿದ್ದಾನೆ.

ಅನ್ನದ ತಯಾರಿಕೆಯ ವಿಧಾನ ಹೇಳುವಾಗ ಮಂಗರಸನು 'ಅಂಬುವಿರಹಿತೋದನ' ಎಂದು ಅನ್ನ ಇಂಗಿಸುವ ಕ್ರಮವನ್ನು ತಿಳಿಸುತ್ತಾನೆ. ಇಲ್ಲಿ ವಿಟಮಿನ್ 'ಬಿ' ಪೌಷ್ಟಿಕಾಂಶವು ಸೇರುವುದರಿಂದ ದೇಹಕ್ಕೆ ಆರೋಗ್ಯವು ಪುಷ್ಟಿದಾಯಕವೂ ಆಗಿದೆ. ರಾಜಾನ್ನದಕ್ಕಿಯ ಅನ್ನ ರಾಜರ ಊಟಕ್ಕೆ ಯೋಗ್ಯ (ಸೂಪಶಾಸ್ತ್ರ ೩-೧) ಎಂದು ಶುದ್ಧೋದನ, ನವನೀತೋದನ ಇವು 'ತ್ರಿದೋಷಹರ' ಆರೋಗ್ಯಹಿತಕಾರಿ ಎಂದಿದೆ. ನಳಪಾಕದರ್ಪಣದಲ್ಲಿ, ಶುದ್ಧೋದನ ಕುರಿತು ಇಹಂ ತಂಡುಲ ಸಂಭೂತಮಾಯುರಾರೋಗ್ಯವರ್ಧನಂ' ಎಂಬಲ್ಲೂ ಈ ಬಗೆಯ ಅನ್ನ ಆಯುವೃದ್ಧಿಕರವೂ ಆರೋಗ್ಯಕರವೂ ಎಂಬಲ್ಲಿ ಪ್ರಾಚೀನರ ವೈದ್ಯಕೀಯ ತಿಳಿವಳಿಕೆಯನ್ನು ಗಮನಿಸುತ್ತೇವೆ"[೧೦]. ಸೂಪಶಾಸ್ತ್ರ ಕೃತಿಗಳಲ್ಲಿ ಅಡಿಗೆಗೆ ಬಳಸುವ ಮೊಸರು, ಹಾಲು, ತುಪ್ಪ, ನಾನಾ, ನಮೂನೆಯ ಸೊಪ್ಪುಗಳು, ಶುಂಠಿ, ಈರುಳ್ಳಿ, ಬೆಳ್ಳುಳ್ಳಿ, ಏಲಕ್ಕಿ, ಮುಂತಾದ ಆಹಾರ ಸಾಮಗ್ರಿಗಳ ಪಟ್ಟಿಯನ್ನು ಗಮನಿಸಿದರೆ, ಇವೆಲ್ಲವು ಔಷಧಿಯ ಗುಣಗಳನ್ನು ಹೊಂದಿದವುಗಳೇ ಆಗಿವೆ. 'ಕಲ್ಲನ್ನ' ಮೆಂತ್ಯಅನ್ನ' ಎಂಬ ಜನಪದರ ಅಡಿಗೆಗಳೂ ಅಪ್ಪಟ ವೈದ್ಯಕೀಯ ಮಹತ್ವ ಹೊಂದಿವೆ. ಕಲ್ಲಿನ ಅನ್ನಕ್ಕೆ ನಪುಂಸಕತ್ವವನ್ನು ಹೋಗಲಾಡಿಸುವ ಶಕ್ತಿ ಇದ್ದರೆ, ಮೆಂತ್ಯ ಎಲ್ಲ ಕಾಲಕ್ಕೂ ಶಕ್ತಿವರ್ಧಕ ಟಾನಿಕ್ ಆಗಿತ್ತೆಂಬುದು ಶಾಸ್ತ್ರಜ್ಞರ ಅಭಿಪ್ರಾಯ. ಅಲ್ಲದೆ ಶಾಸ್ತ್ರಜ್ಞರು ಪ್ರಸ್ತಾಪಿಸಿದ ಸಿಹಿಪದಾರ್ಥಗಳಲ್ಲಿ ಎಳ್ಳುಂಡೆ, ಹಾಲುಂಡೆ, ವಿವಿಧ ಪಾಯಸಗಳು ದೇಹಕ್ಕೆ ಚೈತನ್ಯವನ್ನು, ಉಷ್ಣತೆಯನ್ನು, ಪುಷ್ಠಿಯನ್ನು ಕೊಡುವಂಥವು. ಹಾಗೂ ಚಾವುಂಡರಾಯ, ಮಂಗರಸರು ಬಳಸಿರುವ ದಾಸವಾಳದ ಹೂ, ಸೇವಂತಿಗೆ ಹೂವಿನ ದಳಗಳಲ್ಲಿ ಕೆಲವು ದೈಹಿಕ ತೊಂದರೆಗಳನ್ನು ಹೋಗಲಾಡಿಸುವ ಔಷಧಿಯ ಗುಣಗಳಿವೆ. ಇಂಥ ವಸ್ತುಗಳೆಲ್ಲವೂ ವೈದ್ಯಶಾಸ್ತ್ರದಲ್ಲಿ ಒಂದಿಲ್ಲೊಂದು ರೋಗಕ್ಕೆ ಔಷಧಿಯಾಗಿ ಬಳಕೆಯಾಗಿವೆ.

ಮಜ್ಜಿಗೆ ವಿಧಾನಗಳಾದ ಗೋಳಕ, ಮಥಿತ, ಸಿಂಧು, ತಕ್ರ ಇವುಗಳು ಕ್ರಮವಾಗಿ ವಾತ-ಪಿತ್ತ ಕಡಿಮೆಮಾಡುತ್ತವೆ ಹಾಗೂ ಮೂಲವ್ಯಾಧಿಗೆ ಗುಣಕಾರಿ ಔಷಧ. ತಕ್ರವೆಂಬುದು ಪಚನಕಾರಿ ಕ್ರಿಯೆಗೆ

ಸಹಕಾರಿಯಾದುದಾಗಿದೆ. ಮಜ್ಜಿಗೆ ಬಳಸಲು ಹೇಳುವಾಗ ಮಂಗರಸ "ತೆಳ್ಳಗೆ ಮಾಡಿದ ಮಜ್ಜಿಗೆಗೆ ಮಾವಿನೆಳೆಮಿಡಿ, ಮಾದಲ, ಕರಿಬೇವು, ನೀರುಳ್ಳಿ ಹಾಕುವುದು, ಇಂಥ ಹಲವು ರೀತಿಯ ಮಜ್ಜಿಗೆ ತಯಾರಿಸಿ ಭೋಜನಾಂತ್ಯದೊಳು ಮನಮೊಸೆದು ಪಾನಂಗೊಡುವುದು"೧೧. ಎಂದು ಹೇಳಿರುವಲ್ಲಿ ಜನಪದರ ಅಡಿಗೆ ವಿಧಾನಗಳಲ್ಲಷ್ಟೇ ಅಲ್ಲ ಪ್ರಾಚೀನ ವೈದ್ಯಶಾಸ್ತ್ರ ಗ್ರಂಥಗಳ ಪರಿಚಯವೂ ಕವಿಗಿರುವುದರಲ್ಲಿ ಅನುಮಾನವಿಲ್ಲ.

ಕನ್ನಡ ವೈದ್ಯ ಗ್ರಂಥಗಳಲ್ಲಿಯೂ ಚಿಕಿತ್ಸೆಗೆ ಪೂರಕವಾದ ವಿಚಾರಗಳನ್ನು ಹಾಗೂ ಪಾಕ ವಿಚಾರವನ್ನು ವ್ಯಕ್ತಪಡಿಸುತ್ತವೆ. ಉದಾಹರಣೆಗೆ ಖಗೇಂದ್ರಮಣಿದರ್ಪಣಂದಲ್ಲಿ ಕೆಲವು ಬಗೆಯ ವಿಷಕ್ಕೆ ಚಿಕಿತ್ಸೆ ಸೂಚಿಸುವ ಸಂದರ್ಭದಲ್ಲಿ ಮೊಸರು, ಮಜ್ಜಿಗೆ ವಿಷವಾದರೆ ಸಕ್ಕರೆ ಸೇವಿಸಬೇಕೆಂದು ಅರುಹಲಾಗಿದೆ. ಹಾಗೆ ಅಡಕೆ ವಿಷವಾದರೆ ಕಬ್ಬಿನ ಹಾಲಿನ ಚಿಕಿತ್ಸೆ, ತಂಗಳನ್ನ ವಿಷಯುಕ್ತವಾಗಿದ್ದರೆ ಶುಂಠಿ ಮೊಸರು, ಮಾಂಸದ ವಿಷಕ್ಕೆ ಅರಿಷಿಣ ಮೆಣಸು ಮದ್ದು ಎನ್ನಲಾಗಿದೆ. ಇದನ್ನು ತಿಳಿದೊ ಏನೋ ಇಂದಿಗೂ ತಂಗಳನ್ನಕ್ಕೆ ಮೊಸರು ಹಾಕಿಕೊಂಡು ತಿನ್ನುವುದು, ಮಾಂಸದಡುಗೆಯಲ್ಲಿ ಅರಿಷಿಣ ಮೆಣಸನ್ನು ತಪ್ಪದೇ ಬಳಸುವುದು ರೂಢಿಯಲ್ಲಿದೆ. ಇವುಗಳೆಲ್ಲವೂ ಆರೋಗ್ಯದ ದೃಷ್ಟಿಯಿಂದಲೇ ವೈದ್ಯಕೀಯ ಮತ್ತು ಸೂಪದ ಹಿನ್ನೆಲೆಯಲ್ಲೇ ಹೇಳಲಾಗಿದೆ. ಇವೆರಡರ ಗುರಿ ವ್ಯಕ್ತಿಯನ್ನು ಆರೋಗ್ಯವಂತನನ್ನಾಗಿಸಿ ದೀರ್ಘಾಯುವನ್ನಾಗಿ ಮಾಡುವುದಾಗಿದೆ.

ಕಳಲೆ ವೀರರಾಜನ 'ಸಕಲವೈದ್ಯಸಂಹಿತಸಾರಾರ್ಣವಂ' ಗ್ರಂಥದಲ್ಲಿ ಅಡುಗೆಗೆ ಬಳಸಬಹುದಾದ ಲೋಹಗಳು ಮತ್ತು ಅವುಗಳ ಗುಣವಿಶಿಷ್ಟತೆಯನ್ನು ಕುರಿತು ಚರ್ಚಿಸಲಾಗಿದೆ. ಆ ಪ್ರಕಾರ ಬೆಳ್ಳಿ ಪಿತ್ತಪ್ರಕೋಪ ಮತ್ತು ಅಧಿಕ ಶ್ಲೇಷ್ಮವನ್ನು ನಿವಾರಿಸುತ್ತದೆ. ಕಂಚು ರಕ್ತಪಿತ್ತರೋಗ ಮತ್ತು ನೇತ್ರ ರೋಗವನ್ನು ಶಮನಗೊಳಿಸುವುದು. ತಾಮ್ರವು ಶ್ಲೇಷ್ಮವನ್ನು ಪರಿಹರಿಸಿ ದೃಷ್ಟಿಗೊಳಿಸುವುದು. ಕಬ್ಬಿಣವು ಕ್ಷಯರೋಗವನ್ನು ದೂರ ಇಡುವುದು ಎನ್ನಲಾಗಿದೆ.

ಅಡಿಗೆ ತಯಾರಿಸುವ, ಬಳಸುವ, ಉಣ್ಣುವ ಎಂಬಿತ್ಯಾದಿ ಹಲವಾರು ವಿಷಯಗಳಲ್ಲಿ ಮಾತ್ರವಲ್ಲದೆ ಅಡಿಗೆ ತಯಾರಿಸಲು ಬಳಸುವ ಪಾತ್ರೆ-ಪಗಡೆಗಳಲ್ಲಿಯೂ ಶಾಸ್ತ್ರಕಾರರು ಆರೋಗ್ಯದ ಪರಿಕಲ್ಪನೆ ಹೊಂದಿದ್ದರು. ದೇಶಿ ಔಷಧಿಗಳಲ್ಲಿ ರತ್ನ, ವಜ್ರಗಳನ್ನು ಬಳಸುತ್ತಾರೆಂಬ ತಿಳುವಳಿಕೆಯಿದೆ. ಇವುಗಳನ್ನು ಔಷಧೀಯ ಮೂಲಕ ಸೇವಿಸುವುದರಿಂದ ದೀರ್ಘಾಯುಷ್ಯ ಉಂಟಾಗುತ್ತದೆಂಬ ನಂಬಿಕೆಯೂ ಉಂಟು. ಅಲ್ಲದೆ ಬೆಳ್ಳಿ, ತಾಮ್ರಗಳು ಕ್ರಿಮಿನಾಶಕ ಗುಣಗಳನ್ನು ಹೊಂದಿದ್ದು ಅವುಗಳಿಂದ ತಯಾರಾದ ಪಾತ್ರೆಗಳ ಮಹತ್ವವನ್ನು ಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ. ಊಟಕ್ಕೆ ವಿವಿಧ ಬಗೆಯ ಎಲೆಗಳನ್ನು ಬಳಸುತ್ತಿದ್ದ ಅವುಗಳಲ್ಲಿ ಉಣ್ಣುವುದರಿಂದಲೂ ಅನೇಕ ಕಾಯಿಲೆಗಳನ್ನು ವಾಸಿ ಮಾಡಬಹುದು ಎಂಬುದನ್ನು ನಮ್ಮ ಪೂರ್ವಜರು ಕಂಡುಕೊಂಡಿದ್ದರು. ಉದಾಹರಣೆಗಾಗಿ 'ವೈದ್ಯಶಾಸ್ತ್ರ' ಎಂಬ ಹಸ್ತಪ್ರತಿಯಲ್ಲಿ ಊಟ ಮಾಡಲು ಎಲೆ ಉತ್ತಮ ಎಂಬ ವಿಷಯವನ್ನು ಈ ರೀತಿ ನಿರೂಪಿಸುತ್ತದೆ; ಈ ಹಸ್ತಪ್ರತಿಯ ಆದಿಯಲ್ಲಿ ಭೋಜನ ಪತ್ರ ಲಕ್ಷಣಂ॥ ಎಂಬುದಾಗಿ ಉಣ್ಣುವ ಎಲೆಗಳ ಮತ್ತು ಅವುಗಳ ರೋಗಪರಿಹಾರಕ ಗುಣ ಮುಂತಾದ ಮಾಹಿತಿ ನೀಡುತ್ತದೆ. ಬಾಳೆಯ ಎಲೆಯಲ್ಲಿ ಊಟ ಮಾಡುವ ಕುರಿತಂತೆ॥

"ಕದಳೀಪತ್ರಗುಣಂ। ಅತಿ–ಸುಖಿಯಾಗಿ॥ ಮಹಾಪ್ರಿಯವಾಗಿ॥ ವಾತ ಶ್ಲೇಷ್ಮದೋಷಗಳನ್ನು ಪರಿಹರಿಸಿ । ಬಲವನು ಆರೋಗ್ಯವನ್ನುಂಟುಮಾಡಿ।ರಥಿ ಪ್ರಿಯವನು। ಶರೀರ ಕಾಂತಿಯನು ಆಂನದ ಮೇಲೆ ಅಪೇಕ್ಷೆಯನ್ನು ಮಾಡುವುದೆ। ಬಾಳೆಯ ಯಲೆಯ ಗುಣಂ"[೧೨] ಎಂದು ವಿವರಿಸುವುದಲ್ಲದೆ ತಾವರೆಯ ಎಲೆಯ ಗುಣಗಳನ್ನು ತಿಳಿಸಲಾಗಿದೆ.

ಸಕಲವೈದ್ಯ ಸಂಹಿತಸಾರಾರ್ಣವಂ ಗ್ರಂಥದಲ್ಲೂ ಊಟಕ್ಕೆ ಬಳಸುವ ಎಲೆಗಳು ಆರೋಗ್ಯವರ್ಧನೆಯಲ್ಲಿ ಮುಖ್ಯ ಪಾತ್ರ ವಹಿಸುವುದನ್ನು ಉಲ್ಲೇಖಿಸಲಾಗಿದೆ. ಬಾಳೆ ಎಲೆಯ ಊಟ ವಾತಶ್ಲೇಷ್ಮ ದೋಷ ನೀಗಿಸಿ ಶರೀರಕ್ಕೆ ಕಾಂತಿ ನೀಡುತ್ತದೆ. ಮುತ್ತುಗದ ಎಲೆಯಲ್ಲಿ ಉಣ್ಣುವುದರಿಂದ ಗುಲ್ಮ ಮಹೋದರ ರಕ್ತಪಿತ್ತ ರೋಗಗಳು ಇಲ್ಲವಾಗುತ್ತವೆ. ಅಡಕೆ ಎಲೆಯಲ್ಲಿ ಆಹಾರ ಸ್ವೀಕರಿಸುವುದರಿಂದ ವಾತರೋಗಹರ ಎಂದು ಹೇಳಲಾಗಿದೆ. ಈ ಕಾರಣವಾಗಿಯೇ ಪ್ರಾಚೀನರು ಈ ಎಲೆಗಳನ್ನು ದೈನಂದಿನ ಊಟೋಪಚಾರದಲ್ಲಿ ಬಳಸುತ್ತಿದ್ದರು. ಹೀಗೆ ಮಣ್ಣು ಕಂಚು, ಕಬ್ಬಿಣ, ಬಂಗಾರ ಇತ್ಯಾದಿ ಲೋಹಗಳನ್ನು, ಭೋಜನಪತ್ರಗಳನ್ನು ವೈದ್ಯಕೀಯ ಹಿನ್ನೆಲೆಯಲ್ಲಿ ಗಮನಿಸಿದಾಗ ತುಂಬಾ ಅರ್ಥಪೂರ್ಣವಾಗಿ ಕಂಡುಬರುತ್ತದೆ.

ಸಾಹಿತ್ಯಕೃತಿಗಳಲ್ಲಿ ಪ್ರಾಸಂಗಿಕವಾಗಿ ಇಂಥ ಹಲವಾರು ಅಂಶಗಳು ಗಮನ ಸೆಳೆಯುತ್ತವೆ. ಸಂಚಿ ಹೊನ್ನಮ್ಮ ತನ್ನ 'ಹದಿಬದೆಯ ಧರ್ಮ'ದಲ್ಲಿ ಅಡಿಗೆಪಾತ್ರೆಗಳನ್ನು ಕುರಿತು ಹೇಳುವಾಗ

ಸಲೆ ಚಿನ್ನ ಬೆಳ್ಳಿ ಹಿತ್ತಾಳೆ ಕಂಚು ತಾಮ್ರದ
ಪಲಬಗೆ. ಪಾತ್ರಂಗಳನು
ಕಿಲುಬಿನ ಕಲೆ ತೋರಂದಂತಾದರದಿಂ
ದಲಸದೆ ತೊಳೆವುದಂದಂದು

ಎಂದಿರುವಲ್ಲಿ ಪಾತ್ರೆಗಳ ಶುಚಿತ್ವದ ಕಡೆಗೆ ಗಮನಹರಿಸಿದಂತಿದ್ದರೂ ಅದರ ಹಿನ್ನೆಲೆಯಾಗಿ ವೈದ್ಯಶಾಸ್ತ್ರದ ಅಪಾರ ತಿಳುವಳಿಕೆ ಇರುವುದು ಮನನವಾಗುತ್ತದೆ. ನಯಸೇನನಲ್ಲೂ ಈ ಕುರಿತು ಅಪಾರ ತಿಳುವಳಿಕೆಯಿತ್ತೆಂಬುದಕ್ಕೆ ಒಂದು ಪದ್ಯವನ್ನು ಉದಾಹರಿಸಬಹುದು.

ಎಲೆಯಡಿಕೆ ಸುಣ್ಣದಿಂಪಲ್ ಕಲೆಯುಪ್ಪುದು
ಅಣಿಲೆ ತಿಗಡೆಯಿಂ ಬಸಿರೊಡೆವುದು ತ್ರಿಫಲೆಯ
ಸೇವೆಯಿಂ ಮಲಶುದ್ಧಿಯಕ್ಕುಂ ಪುಣಿಸೆಯ ಕೊನರು ಮುಪ್ಪುಂ
ಕಣ್ಬೇನೆಯುಂ ಕಳೆವುದು ಸುಂಟಿಯುಮಮರ್ದುವಳ್ಳಿಯುಂ
ಪುಷ್ಕರ ಮೂಲವಂ ಬರಿವದನೆಯುಂ ಜ್ವರದಕೇಡು..."[೧೩]

ಎಂಬ ಇಂಥ ಹಲವು ಪದ್ಯಗಳಲ್ಲಿ ಕವಿ ನಯಸೇನ 'ಧರ್ಮಾಮೃತ'ದ ಜೊತೆಗೆ 'ವೈದ್ಯಾಮೃತ'ವನ್ನೂ ಓದುಗರಿಗೆ ಉಣಬಡಿಸಿದ್ದಾನೆ. ಕೆಲವು ಪದಾರ್ಥಗಳನ್ನು ತಿನ್ನುವ, ಅಗಿಯುವ ಜಗಿಯುವ ಮುಂತಾದ ವಿಷಯಗಳಲ್ಲೂ ನಮ್ಮ ಪೂರ್ವಜರು ಆರೋಗ್ಯ ತಿಳಿವಳಿಕೆಯನ್ನು ಹೊಂದಿದ್ದರು ಎಂಬುದಕ್ಕೆ ಸರ್ವಜ್ಞನ ಈ ವಚನ ಸಾಕ್ಷಿಯಾಗಿದೆ.

ಹರಕು ಹೋಳಿಗೆ ಲೇಸು, ಮುರುಕು ಹಪ್ಪಳ ಲೇಸು.
ಕುರುಕುರು ಕಡಲೆ ಬಲು ಲೇಸು, ಪಾಯಸದ
ಸುರುಕು ಲೇಸೆಂದ ಸರ್ವಜ್ಞ

ಎಂದಿರುವಲ್ಲಿ ಬಿಸಿ ಹೋಳಿಗೆ ಪಚನಕ್ರಿಯೆಗೆ ಅಡ್ಡಿ ಉಂಟುಮಾಡುತ್ತದೆ. ತಂಗುಳಾದರೆ ರುಚಿಯೂ ಪಚನಕ್ಕೆ ಸಹಕಾರಿಯೂ ಆಗಿದೆ. ಬಿಸಿಗಿಂತ ತಂಗಳು ರೊಟ್ಟಿ ಜೀರ್ಣಕ್ಕೆ ಸುಲಭವಲ್ಲದೆ ಬಹಳ ಹೊತ್ತಿನವರೆಗೆ ಅಗೆದು ಅರೆದು ನುಂಗುವುದರಿಂದ ಹಲ್ಲಿಗೆ ವ್ಯಾಯಾಮ ಕೊಟ್ಟಂತಾಗುತ್ತದೆಯಲ್ಲದೆ ಪಚನಕ್ಕೂ ಯೋಗ್ಯ ಅಲ್ಲದೆ ಲೇಹ್ಯ ಪದಾರ್ಥಗಳನ್ನು ಬಾಯಲ್ಲಿ ಸುರಿದುಕೊಳ್ಳುವುದರಿಂದ ತುದಿನಾಲಿಗೆಯಿಂದ ಕಿರುನಾಲಿಗೆಯವರೆಗೆ ಅದರ ರುಚಿ ಸೇರಿ ಲಾಲಾರಸ ಹೊರಸೂಸಿ ಪಚನಕ್ರಿಯೆಗೆ ಸಹಾಯಕವಾಗುತ್ತದೆ. ಸರ್ವಜ್ಞನ ಈ ಪ್ರಗತಿಪರ ವೈದ್ಯಕೀಯ ಧೋರಣೆಯಲ್ಲಿ ಆಹಾರ ತಯಾರಿಕೆ ಹಾಗೂ ಸೇವಿಸುವ ವಿಧಾನದಲ್ಲೆ ಆರೋಗ್ಯ ಕಂಡುಕೊಳ್ಳಲು ಸೂಚಿಸಿರುವುದು ಕಾಲಾತೀತವಾಗಿ ಪ್ರಸ್ತುತವೆನಿಸುತ್ತದೆ.

ಇಲ್ಲಿಯವರೆಗಿನ ಸಂಗತಿಗಳನ್ನು ಪರಿಶೀಲಿಸಿ ಹೇಳುವುದಾದರೆ ಪ್ರಾಚೀನ ಕಾಲದಿಂದಲೂ ಸೂಪಶಾಸ್ತ್ರ ಪರಂಪರೆಯಲ್ಲಿ ವೈದ್ಯಶಾಸ್ತ್ರದ ತಿಳಿವಳಿಕೆ ಅಪಾರವಾಗಿತ್ತು. ಅಲ್ಲದೆ ಅಷ್ಟೇ ಏಕೆ 'ಸೂಪಶಾಸ್ತ್ರ' ಒಂದು ಬಗೆಯ 'ವೈದ್ಯಶಾಸ್ತ್ರ'ವೇ ಆಗಿತ್ತೆಂಬಲ್ಲಿ ಅತಿಶಯೋಕ್ತಿಯೆನಿಸದು. 'ಸರ್ವೌಷಧೀನಾಮಶನಂ ಪ್ರಧಾನಂ" ಎಂಬ ಪೂರ್ವೋಕ್ತಿಯೂ ಅದನ್ನೇ ತಿಳಿಸುತ್ತದೆ.

....ಅದರೊಳು ಔಷಧಗಳಾದವಿನ್ನ
ಔಷಧದಿಂದ ಹುಟ್ಟಿತು ಅನ್ನ
ಅನ್ನದಿಂದ ವೀರ್ಯ ಉತ್ಪನ್ನ
ವಿರ್ಯದಿಂದ ಕ್ರೀಮಿ-ಕೀಟಕ ಜನನ
ಈ ಪರಿ ಆಯಿತೊ ಚರಾಚರ"[೧೪]

ಎಂದು ಶರೀಫರು ಪೃಥ್ವಿಯಿಂದ ಔಷಧಗಳು, ಔಷಧಗಳಿಂದ ಅನ್ನ, ಅನ್ನದಿಂದ ವೀರ್ಯ ಹಾಗೂ ವೀರ್ಯದಿಂದ ಸಕಲ ಚರಾಚರ ಜೀವಿಗಳು ಹುಟ್ಟಿಕೊಳ್ಳುವುದಕ್ಕೆ ಕಾರಣ ಎಂಬಲ್ಲಿ ಅನ್ನವೇ ಔಷಧಿ, ಅದೇ ವೀರ್ಯ ಅದೇ ಸಕಲ ಜೀವಿಗಳ ಹುಟ್ಟಿಗೆ ಕಾರಣ ಎಂಬ ಮಾತು ಸೂಪಶಾಸ್ತ್ರ ಹಾಗೂ ವೈದ್ಯಶಾಸ್ತ್ರಕ್ಕಿರುವ ಅವಿನಾಭಾವ ಸಂಬಂಧವನ್ನು ಎತ್ತಿ ತೋರಿಸುತ್ತದೆ.

### ೫.೩. ವೈದ್ಯಶಾಸ್ತ್ರ-ಸಸ್ಯಶಾಸ್ತ್ರ

"ಕಲ್ಲೆಂಬೋದೆಲ್ಲ ದೇವರೆ ಗಿಡ ಅಂಬೋದೆಲ್ಲ ವೈದ್ಯವೇ" ಎಂಬ ಗಾದೆ ಮಾತಿನಂತೆ ದೇಶಿ ವೈದ್ಯಶಾಸ್ತ್ರದಲ್ಲಿ ಶೇ೮೦ರಷ್ಟು ಭಾಗ ಸಸ್ಯಗಳಿಂದಲೇ ವ್ಯಾದಿಯನ್ನು ಗುಣಪಡಿಸಲಾಗುತ್ತದೆ. ಸಸ್ಯಗಳನ್ನು ಆರೋಗ್ಯದೇವತೆಗಳೆಂದು ಪೂಜಿಸುತ್ತಾರೆ. ಸಸ್ಯದ ಪ್ರತಿಯೊಂದು ಭಾಗವೂ ಮನುಷ್ಯ ಪ್ರಾಣಿಗಳಿಗೆ ಉಪಯೋಗವಾಗುವುದರಿಂದ ಸಸ್ಯಪ್ರಪಂಚ ಮನುಕುಲಕ್ಕೆ ಸಂಜೀವಿನಿ ಪರ್ವತವಿದ್ದಂತೆ. ವಿಸ್ತಾರವಾದ ಸಸ್ಯಶಾಸ್ತ್ರದಲ್ಲಿ ಮಾನವ ಮತ್ತು ಪ್ರಾಣಿಪಕ್ಷಿಗಳ ಯಾವುದೇ ರೀತಿಯ ರೋಗಗಳನ್ನು ಶಮನ ಮಾಡುವ

ಕಾರ್ಯದಲ್ಲಿ ಉಪಯುಕ್ತವೆನಿಸಬಲ್ಲ ಉತ್ಪನ್ನಗಳನ್ನು ನೀಡುವ ಗಿಡ, ಬಳ್ಳಿ, ಮರ, ಮೂಲಿಕೆ ಮುಂತಾದವುಗಳು ಪ್ರಾಚೀನ ಕಾಲದಿಂದಲೂ ಔಷಧಕ್ಕೆ ಬರತಕ್ಕಂತ ಅನೇಕ ಸಸ್ಯಗಳು ಮಾನವನಿಗೆ ಗೊತ್ತಾಗಿವೆ. ಅನುಭವದಿಂದ ಕಂಡುಕೊಂಡ ಅವುಗಳ ರೋಗ ಪರಿಹಾರಕ ಗುಣ ದೃಢಪಟ್ಟಂತೆಲ್ಲ ಅವುಗಳ ಬಳಕೆಯೂ ಹೆಚ್ಚುತ್ತಾ ಬಂದಿದೆ ಹೀಗಾಗಿ ನಮ್ಮ ವೈದ್ಯಶಾಸ್ತ್ರಗಳಲ್ಲಿ ಸಸ್ಯಗಳು ಔಷಧವಾಗಿ ಬಳಕೆಯಾಗುವುದುಂಟು.

ಔಷಧ ಸಸ್ಯಗಳೆಲ್ಲ ನಿಸರ್ಗದಲ್ಲಿ ಹೆಚ್ಚಾಗಿ ಸ್ವೇಚ್ಛೆಯಾಗಿಯೇ ಬೆಳೆಯುತ್ತವೆ. ಕೆಲವೊಂದು ಸಸ್ಯಗಳನ್ನು ಪ್ರಯತ್ನಪೂರ್ವಕವಾಗಿಯೂ ಬೆಳೆಸುವುದುಂಟು. ಕೆಲವು ವಿಶಿಷ್ಟ ಸಸ್ಯಗಳ ವಿವಿಧ ಭಾಗಗಳನ್ನು ಸಂಗ್ರಹಿಸಿ ಅವನ್ನು ಪರಿಷ್ಕರಿಸಿ ಔಷಧ ರೂಪಕ್ಕೆ ಪರಿವರ್ತಿಸುವ ತಯಾರಿಕಾ ಸಂಸ್ಥೆಗಳಿಗೆ ಕಳುಹಿಸಿ ಕೊಡುವುದುಂಟು. ಸಸ್ಯಗಳ ಬೇರು, ಕಾಂಡ, ಎಲೆ, ಹೂವು, ಹಣ್ಣು, ಕಾಯಿ, ಬೀಜ ಮತ್ತು ತೊಗಟೆ ಇತ್ಯಾದಿ ಭಾಗಗಳೆಲ್ಲವನ್ನೂ ಔಷಧ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಸಸ್ಯಗಳ ವಿವಿಧ ಭಾಗಗಳಲ್ಲಿರುವ ಕೆಲವು ನಿರ್ದಿಷ್ಟ ರಾಸಾಯನಿಕ ಘಟಕಗಳಿಂದಲೇ ಅದಕ್ಕೆ ರೋಗ ಪರಿಹಾರಕ ಸಾಮರ್ಥ್ಯ ಒದಗುತ್ತದೆ. ಈ ರಾಸಾಯನಿಕ ಘಟಕಗಳು ಮಾನವನ ಶರೀರದಲ್ಲಿ ಕೆಲವು ವಿಶಿಷ್ಟ ರೀತಿಯ ಜೈವಿಕ ಕ್ರಿಯೆ ನಡೆಸಿ ರೋಗ ಶಮನ ಮಾಡಬಲ್ಲವು"[೧೫].

ನಮ್ಮ ಪರಿಸರದಲ್ಲಿ ಒಂದು ಜೀವಿಯ ಸಂತತಿ ನಿಯಂತ್ರಿಸುವ ಇನ್ನೊಂದು ಜೀವಿ ನೈಸರ್ಗಿಕವಾಗಿಯೇ ಇರುತ್ತದೆ. ಅದರಲ್ಲಿ ಸಸ್ಯ ಜೀವಿಯಿಂದಲೇ ಮಾನವ ಜೀವಿಯ ಬದುಕು. ಈ ಅಂಶ ಮನಗಾಣಲು ಮಾನವ ತಾನು ಪಡೆದುಕೊಳ್ಳುತ್ತಿರುವ ಆಹಾರ ಹಾಗೂ ಗಾಳಿ ಸೇವನೆಯಿಂದ ಗ್ರಹಿಸಬಹುದಾಗಿದೆ. ಏಕೆಂದರೆ ಮಾನವನ ಆಹಾರದ ಮೂಲವೇ ಸಸ್ಯ. ಜೀವಿಸಲು ಅವಶ್ಯವಾದ ಪ್ರಾಣವಾಯುವಿನ ಆಕರವೂ ಸಸ್ಯವೆ. "ಹಸಿರು ಉಸಿರು ನೀಡುತ್ತದೆ. ಆಹಾರ ನೀಡಿ ರಕ್ಷಿಸುತ್ತದೆ. ಸಾವಿನ ದಡ ತಲುಪಿದವರಿಗೆ ಸಸ್ಯದಲ್ಲಿ ತುಂಬಿರುವ ಸತ್ವ ಹೊಸ ಬದುಕು ಕೊಡವಲ್ಲಿ ಪವಾಡ ಹಿಂದು ಮಾಡಿದೆ; ಇಂದೂ ಮಾಡುತ್ತಿದೆ. ಸಸ್ಯ ಸಂಕುಲದಲ್ಲಿರುವ ಗುಣ-ಧರ್ಮಗಳು ದೇಹದಲ್ಲಿ ತುಂಬಿದ ವಿಷಯವನ್ನು ಸರಳ ಸಹಜ ಕ್ರಮದಲ್ಲಿ ಹೊರಗೆ ಹಾಕಬಲ್ಲದು. ಜೀವ ಇರುವ ಸಸ್ಯಗಳು ಜೀವದಾನ ಮಾಡುತ್ತವೆ. ಸಸ್ಯಗಳು ನಿಸರ್ಗದ ಅದ್ಭುತ ಕೊಡುಗೆ. ಈ ಸಸ್ಯಗಳು ತಯಾರಿಸಿದ ಆಹಾರವೇ ನಮ್ಮ ಜೀವನಕ್ಕೆ ಆಧಾರ. ನಮ್ಮ ದೇಹದಲ್ಲಿ ಹುದುಗಿದ ರೋಗ ತಡೆಗಟ್ಟುವ ವಿಶಿಷ್ಟ ಶಕ್ತಿಯನ್ನು ಚೇತನಗೊಳಿಸಲು ಸಸ್ಯ ಅವಶ್ಯ. ಸಸ್ಯ ಸಂಕುಲ ಇಲ್ಲದೇ ಮಾನವನ ಬದುಕಿಲ್ಲ. ಸಸ್ಯ ಸಂಕುಲದ ನಾಶವೆಂದರೆ ನಮ್ಮನ್ನು ಹಾಗೂ ನಮ್ಮ ಮುಂದಿನ ಪೀಳಿಗೆಗಳನ್ನು ನಾವೇ ನಾಶಮಾಡಿಕೊಂಡಂತೆ ಎಂಬ ಅಂಶಗಳನ್ನು ಜೀವನದ ವಿವಿಧ ಪ್ರಸಂಗಗಳಿಂದ ತಿಳಿಯಲಾಗಿದೆ"[೧೬]. ಈ ಮೇಲಿನ ಸಂಗತಿಯನ್ನು ಗಮನಿಸಲಾಗಿ ಸಸ್ಯಗಳಿಗೂ ಮನುಷ್ಯನ ಆರೋಗ್ಯಶಾಸ್ತ್ರಕ್ಕೂ ಇರುವ ಅವಿನಾಭಾವ ಸಂಬಂಧ ಪ್ರಾಪ್ತವಾಗುತ್ತದೆ.

ಭಾರತದಲ್ಲಿ ಆಯುರ್ವೇದ ಪದ್ಧತಿಯ ಉತ್ಕೃಷ್ಟವಾದ ಪ್ರಾಚೀನ ಪರಂಪರೆ ಇರುವುದನ್ನು ಗ್ರಾಂಥಿಕ ಇತಿಹಾಸ ತಿಳಿಸುತ್ತದೆ. ಕೃಷಿಮಾಡಿ ಬೆಳೆದ ನೈಸರ್ಗಿಕವಾದ ಅರಣ್ಯದಲ್ಲಿ ಬೆಳೆಯುತ್ತಿದ್ದ ಗಿಡಮೂಲಿಕೆಗಳನ್ನು ಉಪಯೋಗಿಸಿ, ಸರಳವಾದ ಹಾಗೂ ಪರಿಣಾಮಕಾರಿಯಾದ ಚಿಕಿತ್ಸೆ ನಡೆಯುತ್ತ ಬಂದಿದೆ. ಹಲವಾರು

ಖಾಯಿಲೆಗಳಿಗೆ ಹಲವು ಶತಮಾನಗಳಿಂದ ಸಸ್ಯ ಔಷಧಿಗಳು ಬಳಕೆಯಲ್ಲಿದೆ. ಸಸ್ಯಗಳಲ್ಲಿ ಹಿಪ್ಪಲಿ, ಕಲ್ಲಂಗಡಿ, ಔಡಲ, ನುಗ್ಗೆ, ಹುಲಿಗಿಲು, ಗುಲಗಂಜಿ, ತ್ರಿಪಲೆ, ಕಣಗಿಲೆ, ಮೆಣಸು, ಹುಣಸೆ, ಮಾವು, ಎಕ್ಕೆ, ಅಶ್ವಗಂಧಿ, ನೆಲಗುಂಬಳ, ಕಿರುನೆಲ್ಲಿ, ಕಕ್ಕೆ, ಅಮೃತ ಬಳ್ಳಿ, ಉತ್ತರಾಣಿ, ಮೂಲಂಗಿ, ವಿಷುಗುಂಬಳ, ಬಿಲ್ವ, ಅಜವಾನ ದೇವದಾಳಿಂಬೆ, ಲಕ್ಕಿ, ಗಣಗಿಲೆ, ಪಡವಲ, ಕೊತ್ತಂಬರಿ ಕರಿಬೇವು, ದೇವದಾರು, ನೆಲಬೇವು, ನೆಗ್ಗಿಲು, ಬಂದೆಲಗ, ಮಾದಲ ಇತ್ಯಾದಿ ಸಸ್ಯಗಳನ್ನು ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ವಿವಿಧ ರೋಗಗಳ ಚಿಕಿತ್ಸೆಗೆ ಬಳಸಲಾಗಿದೆ. ಈ ಪರಂಪರೆಯು ಹಳ್ಳಿಯ ಜನಜೀವನದ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ಈ ಔಷಧಿ ಸಸ್ಯಗಳನ್ನು ಧಾರ್ಮಿಕ, ಸಾಮಾಜಿಕ, ಪೌರಾಣಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿಯೂ ಪ್ರಾಮುಖ್ಯತೆ ನೀಡಿ ಪೂಜ್ಯ ಭಾವಗಳಿಂದ ಪೋಷಿಸಿಕೊಂಡು ಬರಲಾಗಿದೆ. ಇಂದು ಸಸ್ಯ ಔಷಧಿ ಕುರಿತಂತೆ ನಮಗೆ ಶಾಸ್ತ್ರೀಯ ವಿವರಣೆ ಲಭ್ಯವಾಗುವುದು ನಮ್ಮ ದೇಶಿ ವೈದ್ಯಶಾಸ್ತ್ರ ಗ್ರಂಥಗಳಲ್ಲಿ. ಸಸ್ಯ ಔಷಧಿಯು ಕೇವಲ ರೋಗ ತಡೆಗಟ್ಟುವ ಕೆಲಸವಷ್ಟೇ ಮಾಡುವುದಿಲ್ಲ. ದೇಹದಲ್ಲಿ ರೋಗ ನಿರೋಧಕ ಶಕ್ತಿಯನ್ನು ಉದ್ದೀಪನಗೊಳಿಸಿ, ರೋಗ ನಿರ್ಮೂಲನಗೊಳಿಸುತ್ತದೆ. ಇದರಿಂದಲೇ ದೈಹಿಕ ಹಾಗೂ ಮಾನಸಿಕ ಆರೋಗ್ಯಗಳೆರಡನ್ನೂ ಕಾಪಾಡುವ ದಿವ್ಯ ಔಷಧಿ ಸಂಕುಲವಾಗಿದೆ. ಈ ಸಸ್ಯ ಸಂಕುಲಗಳಲ್ಲಿ ಔಷಧಿಯ ಗುಣ ಹೊಂದಿದ ಕೆಲವು ಸಸ್ಯಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

**ತುಳಸಿ :** ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರುವ ಸರಳವಾಗಿ ದೊರೆಯುವ ಮತ್ತು ಮನೆಯ ಅಂಗಳಗಳಲ್ಲಿ ಬೆಳಸಲಾಗುವ ತುಳಸಿ ಪವಿತ್ರತೆಗೆ ಹೆಸರಾಗಿದ್ದು ಪೂಜಿಸಲ್ಪಡುತ್ತದೆ. ತುಳಸಿಯಲ್ಲಿ ಶ್ರೀತುಳಸಿ ಮತ್ತು ಕೃಷ್ಣ ತುಳಸಿ ಎಂಬ ಎರಡು ವಿಧಗಳಿವೆ. ಈ ಎರಡೂ ವಿಧಗಳು ಔಷಧಿಯಲ್ಲಿ ಸಮಾನಗುಣ ಹೊಂದಿವೆ. "ತುಳಸಿಯು ಲ್ಯಾಮಿಯೇಸೀ ಕುಟುಂಬಕ್ಕೆ ಸೇರಿದ ಸಸ್ಯವಾಗಿದೆ" ಸಂಸ್ಕೃತದಲ್ಲಿ ತುಳಸಿ, ಸುರಸಾ, ಗ್ರಾಮ್ಯ, ಸುಲಭಾ, ಗೌರಿ, ಪಾವನಿ, ವಿಷ್ಣುಪ್ರಿಯ, ದಿವ್ಯ, ಭಾರತಿ ಮುಂತಾದ ಪರ್ಯಾಯ ಹೆಸರಿನಿಂದ ಕರೆಯಲ್ಪಡುತ್ತದೆ. ಇದು 'ಸರ್ವರೋಗ ನಿವಾರಕ' ಎಂಬ ಬಿರುದನ್ನು ಪಡೆದುಕೊಂಡಿದೆ. ಇದನ್ನು ಉಬ್ಬಸ, ಮಲಬದ್ಧತೆ, ಕಜ್ಜಿ, ಚಳಿಜ್ವರ, ಸೊಳ್ಳೆಕಾಟಕ್ಕೆ, ಚರ್ಮರೋಗಗಳಿಗೆ, ಕೆಮ್ಮು ದಮ್ಮುಗಳಿಗೆ, ಗಂಟಲು ನೋವು, ಪಿತ್ತದ ಗಂಧೆ, ಉರಿಮೂತ್ರದ ತೊಂದರೆ, ಮೊಡವೆ, ಮುಂತಾದ ರೋಗಗಳಿಗೆ ಚಿಕಿತ್ಸೆಯಾಗಿ ಉಪಯೋಗಿಸಲಾಗುತ್ತದೆ.

**ಅಶ್ವಗಂಧ(ಹಿರೇಮದ್ದಿನ ಗಿಡ) :** "ಇದು ಸೊಲನೇಸೀಯ ಕುಟುಂಬಕ್ಕೆ ಸೇರಿದ ಸಸ್ಯ" ಅಶ್ವಗಂಧವನ್ನು 'ಇಂಡಿಯನ್ ಜಿನ್‌ಸೆಂಗ್' ಎಂದು ಕರೆಯಲಾಗುತ್ತದೆ. ಈ ಸಸ್ಯದ ಕುರಿತು "ಹೆಸರಿಲ್ಲದ ಕಾಯಿಲೆಗೆ ಅಶ್ವಗಂಧ ಮದ್ದು" ಎಂಬ ಗಾದೆ ಮಾತೇ ಹುಟ್ಟಿದೆ. ಅಂದರೆ ಎಂತಹ ಭಯಾನಕ ಕಾಯಿಲೆಗೂ ಇದು ಔಷಧಿಯಾಗುತ್ತದೆ. ಉದಾಹರಣೆಗೆ ನರದೌರ್ಬಲ್ಯ, ಬಂಜೆತನ, ಜಂತುನಾಶಕ, ಮೂಲವ್ಯಾದಿ, ಇಸಬು ರಕ್ತದೊತ್ತಡ, ನಿದ್ರಾಹೀನತೆ, ತಲೆನೋವು ಮುಂತಾದ ವ್ಯಾದಿಗಳಿಗೆ ಔಷಧಿಯಾಗಿದೆ.

**ಆಡುಸೋಗೆ :** ಇದರ ಸಸ್ಯಶಾಸ್ತ್ರೀಯ ಹೆಸರು "ಅಡತೊಡಾ ಜೈಲೆನಿಕಾ" ಇದು ಹಿತ್ತಲ 'ಮದ್ದು' ಬಡವರ ಮನೆಮದ್ದು' ಎಂದು ಹೆಸರುವಾಸಿಯಾಗಿದೆ. ಇದನ್ನು ಕೆಮ್ಮ, ಶ್ವಾಸಕೋಶದ ತೊಂದರೆ, ಕ್ಷಯರೋಗ, ಸ್ತ್ರೀಯರ ಮಾಸಿಕ ತೊಂದರೆ, ಹಲ್ಲು ನೋವಿಗೆ, ತಲೆ ನೋವಿಗೆ, ಚರ್ಮರೋಗ, ರಕ್ತಹೀನತೆ ಮೂಲವ್ಯಾದಿ, ಉರಿಮೂತ್ರ, ಅಸ್ತಮ ಮುಂತಾದ ವ್ಯಾದಿಗಳಿಗೆ ಔಷಧಿಯಾಗಿ ಬಳಸುತ್ತಾರೆ.

**ಒಂದೆಲಗ :** ಇದು 'ಏಪಿಯೇಸಿ ಕುಟುಂಬಕ್ಕೆ ಸೇರಿದ ಸಸ್ಯ' ಇದರ ಸಸ್ಯಶಾಸ್ತ್ರೀಯ ಹೆಸರು 'ಹೈಡ್ರೋಕೊಟೈಲ ಏಸಿಯಾಟಿಕಾ' ಇದನ್ನು ಆಯುವರ್ಧಕ, ವಿಷಹರಣಕ್ಕಾಗಿ ಹೆಚ್ಚು ಬಳಸುತ್ತಾರೆ. ಹಾಗೆಯೇ ಚರ್ಮರೋಗ, ಕೆಮ್ಮು ಮತ್ತು ಉಸಿರಾಟ ತೊಂದರೆಗೆ, ತೊನ್ನು, ಮಲಬದ್ಧತೆ, ಜ್ಞಾಪಕ ಶಕ್ತಿ ಹೆಚ್ಚಳ, ಇತ್ಯಾದಿ ಕಾಯಿಲೆಗಳ ಔಷಧವಾಗಿ ಬಳಸುತ್ತಾರೆ.

**ಪಪ್ಪಾಯ :** ಇದನ್ನು ಅಮೇರಿಕಾದದಲ್ಲಿ 'ದೇವತೆಗಳ ಹಣ್ಣು' ಎಂದು ಗಿಡವನ್ನು 'ಆರೋಗ್ಯವೃದ್ಧಿ' ಎಂದು ಕರೆಯುತ್ತಾರೆ. ಇದು ಕ್ಯಾರಿಕೆಸಿ ಕುಟುಂಬಕ್ಕೆ ಸೇರಿದ ಸಸ್ಯ. ಇರುಳುಗಣ್ಣು ನಿವಾರಣೆ, ಮೂಲವ್ಯಾದಿ, ನರದೌರ್ಬಲ್ಯ, ಭೇದಿ, ಮಲಬದ್ಧತೆ, ಕೂದಲಿನ ಆರೋಗ್ಯ ಮೊಡವೆಗಳಿಗೆ ಅಲ್ಲದೆ ಹಾಗೂ ಗರ್ಭ ನಿರೋಧಕವಾಗಿಯೂ ಬಳಕೆಯಾಗುತ್ತದೆ.

**ಬಿಲ್ಪತ್ರಿ :** 'ರುಟೇಸಿ' ಕುಲಕ್ಕೆ ಸೇರಿದ ಸಸ್ಯ. ದೇವರ ಪೂಜೆಯಲ್ಲಿ ಇದನ್ನು ಬಳಸುತ್ತಾರೆ. ಇದನ್ನು ನಿತ್ಯ ಬಳಸುವುದರಿಂದ ದೀರ್ಘಾಯಸ್ಸು, ಆರೋಗ್ಯ ಪ್ರಾಪ್ತಿಯಾಗುತ್ತದೆ ಎನ್ನಲಾಗುತ್ತದೆ. ಇದು ವಿಷನಿವಾರಕ, ಚರ್ಮರೋಗ, ಭೇದಿ, ಶ್ವಾಸಕೋಶ, ಕಣ್ಣುಬೇನೆ, ಮುಂತಾದ ವ್ಯಾದಿಗಳಿಗೆ ಔಷಧವಾಗುತ್ತದೆ.

**ಬಜೆ :** ಮಕ್ಕಳಿರುವ ಮನೆಯಲ್ಲಿ ಬಜೆಯಿದ್ದಲ್ಲಿ ವೈದ್ಯರಿದ್ದಂತೆ ಎಂದು ಹೇಳಲಾಗುತ್ತದೆ. ಅಂದರೆ ಇದು ಬಾಲಗ್ರಹಕ್ಕೆ ಅತ್ಯಂತ ಉತ್ತಮವಾದ ಮದ್ದಾಗಿದೆ. ಇದು ಏರೇಸೀ ಕುಲಕ್ಕೆ ಸೇರಿದೆ. ಮಕ್ಕಳಭೇದಿ, ಜ್ವರ, ಮಕ್ಕಳ ನೆಗಡಿ, ಕೆಮ್ಮು, ಸಂದಿವಾತ, ಅಪಸ್ಮಾರ, ಮೂಲವ್ಯಾದಿ ಬಾಣಂತಿಯರಿಗೆ, ಕೆಮ್ಮು, ಹಳೆಯ ಜ್ವರ, ಅರ್ಧತಲೆನೋವು, ಬಾಯಿಹುಣ್ಣು, ಮುಂತಾದ ರೋಗಗಳಿಗೆ ಔಷಧಿಯಾಗಿ ಬಳಕೆಯಾಗುತ್ತದೆ.

**ಅಮೃತಬಳ್ಳಿ :** ಇದರ ಹೆಸರೆ ಸೂಚಿಸುವಂತೆ ಇದು ಅಮೃತ ಸಮಾನ. ಮುಖ್ಯವಾಗಿ ಇದು ತ್ರಿದೋಶನಾಶವಾಗಿದ್ದು. 'ಮೆನಿಸ್ಪೆರ್ಮಸಿಯೆ' ಕುಟುಂಬಕ್ಕೆ ಸೇರಿದೆ. ಇದನ್ನು ಎಲ್ಲಾ ಬಗೆಯ ಜ್ವರಗಳಿಗೂ ಕಾಮಾಲೆ, ಸಂದಿವಾತ, ಮಧುಮೇಹ, ಅಧಿಕ ರಕ್ತದೊತ್ತಡ, ಮೂಲವ್ಯಾದಿ, ನಿಶ್ಶಕ್ತಿ, ಚರ್ಮರೋಗ, ಕ್ಷಯರೋಗ, ಮುಂತಾದ ವ್ಯಾದಿಗಳಿಗೆ ಔಷಧಿಯಾಗಿ ಬಳಸುತ್ತಾರೆ. ಇತ್ತೀಚೆಗಂತೂ 'ಹೆಚ್ ಒನ್' ಹಾಗೂ 'ಎನ್ ಒನ್'ಗಳ ನಿವಾರಣೆಯಲ್ಲಿ ಇದು ಪ್ರಮುಖ ಪಾತ್ರವಹಿಸಿ ಸುದ್ಧಿಮಾಡಿತ್ತು.

**ಕರಿಬೇವು :** ಆಹಾರ ತಯಾರಿಕೆಯಲ್ಲಿ ಬಳಸುವ ಸರ್ವೆಸಾಮಾನ್ಯವಾಗಿ ಎಲ್ಲರಿಗೂ ಪರಿಚಯವಿರುವ ಸಸ್ಯ. ಇದು ಕೇವಲ ರುಚಿ, ಸುಗಂಧ ಒದಗಿಸುವ ಎಲೆ ಮಾತ್ರವಲ್ಲ, ದೇಹದಲ್ಲಿ ಸಕ್ಕರೆಯನ್ನು ಹದ್ದುಬಸ್ತಿನಲ್ಲಿಡುವ ಮದ್ದು. ಇದು ರೂಟೇಸಿಯೆ ಕುಟುಂಬಕ್ಕೆ ಸೇರಿದೆ. ಇದನ್ನು ಅಜೀರ್ಣ, ಭೇದಿ, ಮಲಬದ್ಧತೆ, ಗರ್ಭಿಣಿಯರಲ್ಲಿ ಅತಿಯಾದ ವಾಂತಿ, ಬೊಜ್ಜನ್ನು ಕರಗಿಸಲು, ಮಧುಮೇಹ, ಮೂಲವ್ಯಾದಿ, ರಕ್ತಭೇದಿ, ಮೂತ್ರಕೋಶದ ತೊಂದರೆಗಳಿಗೆ ಬಳಸುವದು ಸೂಕ್ತ.

**ಹಿಪ್ಪಲಿ :** ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಹೆಚ್ಚು ಬಳಕೆಯಾದ ಸಸ್ಯ ಹಿಪ್ಪಲಿಯನ್ನು 'ಟನಿಕ್' ಎಂದು ಕರೆಯುತ್ತಾರೆ. ವಸಿಷ್ಠ ಋಷಿಯು ಹಿಪ್ಪಲಿಯ ಸೇವನೆಯಿಂದ ಆರೋಗ್ಯ ಮತ್ತು ಸಂಪತ್ತು ಪಡೆದಿದ್ದನೆಂದು ಹೇಳಲಾಗುತ್ತದೆ. ಇದು 'ಪೈಪರೇಸೀ' ಕುಟುಂಬಕ್ಕೆ ಸೇರಿದ ಸಸ್ಯ. ಇದನ್ನು ನೆಗಡಿ, ಕೆಮ್ಮ ಮತ್ತು ಗಂಟಲುನೋವು, ಸಂಧಿವಾತ, ರಕ್ತಹೀನತೆ, ಜಂತುಹುಳು ಹೋಗಲಾಡಿಸಲು ಹಾಗೂ ಗರ್ಭನಿರೋಧಕ ಔಷಧಿಯಾಗಿ ಬಳಸುವರು.

ಈ ಮೇಲಿನ ಸಸ್ಯಗಳಲ್ಲದೆ ಆಶ್ವತ್ಥ, ಗರಿಕೆ, ಗೋರಂಟಿ, ಆಡುಸೋಗೆ, ಬೇವು, ಈಶ್ವರಿಬೇರು, ಉಮ್ಮತ್ತ, ಎಕ್ಕದ ಗಿಡ, ಪುದೀನ, ಪಾರಿಜಾತ, ನೆಲಬೇವು, ಕೊತ್ತಂಬರಿ, ಗುಲಾಬಿ, ಚಕ್ರಮುನಿ, ಜೀವಂತಿ, ತುಂಬೆ, ದಾಸವಾಳ, ದೊಡ್ಡಪತ್ರೆ, ನುಗ್ಗೆ ಮುಂತಾದ ಸಸ್ಯಗಳು ವೈದ್ಯಶಾಸ್ತ್ರದಲ್ಲಿ ಬಳಕೆಯಾಗಿವೆ. ಹಾಗೆಯೇ ಸದಾ ಜೀವರಾಶಿಗಳ ಒಡನಾಡಿಗಳಾದ ಕೃಷಿಕರು ತಮ್ಮ ಸಾಕುಪ್ರಾಣಿಗಳಿಗೆ ಮತ್ತು ತಮಗೆ ಜಡ್ಡು ಜಾಪತ್ತು, ಅಂಟು ರೋಗಗಳು ಬಾರದಂತೆ ಹಾಗೂ ಬಂದರೆ ವಾಸಿ ಮಾಡುವ ಅನೇಕ ಔಷಧೋಪಚಾರಗಳನ್ನು ಸಸ್ಯ ಸಂಪತ್ತಿನಿಂದಲೇ ಪಡೆದುಕೊಂಡಿದ್ದಾರೆ. ಕೆಲವೊಂದು ಸಸ್ಯಗಳನ್ನು ಔಷಧವಾಗಿ ಉಪಯೋಗಿಸುವುದರ ಜೊತೆಗೆ ಧಾರ್ಮಿಕ ರೀತ್ಯ ಸಂಬಂಧಗಳನ್ನು ಜನಪದರು ಇಟ್ಟುಕೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ ತುಳಸಿ ಇರುವ ಕಡೆ ಭೂತ ಪ್ರೇತಾದಿ ದುಷ್ಟಶಕ್ತಿಗಳು ಸುಳಿಯುವುದಿಲ್ಲ ಎನ್ನುವ ನಂಬಿಕೆಯಿಂದ ಮನೆಯ ಅಂಗಳದಲ್ಲಿ ಕಟ್ಟೆಕಟ್ಟಿ ತುಳಸಿ ನೆಡುತ್ತಾರೆ ಮತ್ತು ಅದನ್ನು ಪೂಜಿಸುತ್ತಾರೆ. ಅಶ್ವತ್ಥ ಮರಕ್ಕೆ ಮುತ್ತೈದೆಯರು ಸುತ್ತಿ ಬರಬೇಕು ಎಂಬ ನಂಬಿಕೆ ಇದೆ. ಬಿಲ್ವಪತ್ರೆಯನ್ನು ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಿಸುತ್ತಾರೆ. ಮತ್ತು ಶಿವ ದೇವಾಲಯಗಳಲ್ಲಿ ಬಿಲ್ವಮರಗಳನ್ನು ಬೆಳೆಸುತ್ತಾರೆ. ಅಲ್ಲದೆ ಬನ್ನಿಮರ, ಆಲದ ಮರಗಳೂ ಪೂಜೆಗೊಳ್ಳುತ್ತವೆ. ಈ ರೀತಿಯ ಸಸ್ಯಗಳು ಸಾಮಾಜಿಕವಾಗಿ ಎಲ್ಲಾ ವರ್ಗಗಳಲ್ಲಿ ಹಬ್ಬ ಹರಿದಿನಗಳ ಸಂದರ್ಭಗಳಲ್ಲೂ ಪ್ರಾಮುಖ್ಯತೆಯನ್ನು ಪಡೆದಿವೆ. ಈ ಎಲ್ಲದರ ಹಿನ್ನೆಲೆಯ ಉದ್ದೇಶವು ಸಸ್ಯಗಳು ನಮ್ಮ ರೋಗ ನಿವಾರಣೆಗೆ ಸಹಕಾರಿ ಎಂಬುದಾಗಿದೆ.

ನಮ್ಮ ದೇಶಕ್ಕೆ ಪ್ರಕೃತಿಯ ಕೊಡುಗೆ ಅದ್ಬುತ. ಸುಮಾರು ೭೫೦೦ಕ್ಕೂ ಹೆಚ್ಚು ಔಷಧಿ ಸಸ್ಯಗಳಿವೆ. ಈ ಔಷಧಿ ಸಸ್ಯಗಳು ದೇಶದ ಎಲ್ಲಾ ಭಾಗಗಳಲ್ಲಿಯೂ ಹರಡಿಕೊಂಡಿವೆ. ಸಸ್ಯೋತ್ಪನ್ನಗಳ ಬೇರು, ಕಾಂಡ, ತೊಗಟೆ, ಮುಳ್ಳು, ಚಿಗುರು, ಹೂವು, ಕಾಯಿ, ಹಣ್ಣು, ತೈಲ, ಎಲೆ, ಕುಡಿಮೊಗ್ಗು, ಗಡ್ಡೆ, ಬೀಜ, ಮುಂತಾದವು ಔಷಧಿ ರೂಪದಲ್ಲಿ ಬಳಸಲಾಗುತ್ತದೆ. ಪ್ರಾಚೀನ ಕಾಲದಿಂದಲೂ ಸಸ್ಯಶಾಸ್ತ್ರದ ಮುಖ್ಯ ಉದ್ದೇಶ ಮನುಷ್ಯನ ಆರೋಗ್ಯವನ್ನು ಸುಧಾರಿಸುವುದೇ ಆಗಿದೆ. ಅಂದರೆ ಸಸ್ಯಶಾಸ್ತ್ರ ಒಂದು ಬಗೆಯ ವೈದ್ಯಶಾಸ್ತ್ರ ಮತ್ತು ಸಸ್ಯಶಾಸ್ತ್ರದ ಸಂಬಂಧವನ್ನು ಎತ್ತಿ ತೋರಿಸುತ್ತದೆ.

**೫.೪. ವೈದ್ಯಶಾಸ್ತ್ರ–ಮನಶಾಸ್ತ್ರ :**

ದೈಹಿಕ ಆರೋಗ್ಯಕ್ಕೆ ಮಹತ್ವಕೊಟ್ಟಂತೆ ಮನಸ್ಸಿನ ಆರೋಗ್ಯಕ್ಕೂ ಅಷ್ಟೇ ಮಹತ್ವ ಕೊಡಬೇಕಾಗುತ್ತದೆ. ಏಕೆಂದರೆ ವ್ಯಕ್ತಿಗೆ ಆರೋಗ್ಯಪೂರ್ಣ ವ್ಯಕ್ತಿತ್ವ ರೂಪಿಸಿಕೊಳ್ಳಲು ಮುಖ್ಯವಾಗಿ ಮಾನಸಿಕ ಆರೋಗ್ಯ ಅವಶ್ಯವಾಗಿದೆ. ಮನಸ್ಸು ಅಸ್ವಸ್ಥವಾದರೆ ಅನೇಕ ತೊಂದರೆಗಳು ಉಂಟಾಗಿ ಕ್ರಮೇಣ ಅವು ದೈಹಿಕ ಆರೋಗ್ಯವನ್ನು ಹಾಳು ಮಾಡುತ್ತವೆ. ಆದ್ದರಿಂದ ತನ್ನ ಜೀವನದುದ್ದಕ್ಕೂ ಇದ್ದುದರಲ್ಲಿಯೇ ಸುಖ–ಶಾಂತಿಯನ್ನು ಕಾಣುವ ಮನೋಭೂಮಿಕೆಯನ್ನು ವ್ಯಕ್ತಿಯು ಹೊಂದಿದವನಾಗಿರಬೇಕು. ಶರೀರದ ಅವಿಭಾಜ್ಯ ಅಂಗವಾದ ಮಾನಸಿಕ ಆರೋಗ್ಯವನ್ನು ಕಾಪಾಡಿಕೊಳ್ಳಲು ನಮ್ಮ ಪೂರ್ವಜರು ಅನೇಕ ಸದಾಚಾರಗಳನ್ನು ಸೂಚಿಸಿದ್ದಾರೆ. ದೇಶೀ ವೈದ್ಯಪದ್ಧತಿಯಲ್ಲಿ ಸಸ್ಯಗಳು ಬಹಳ ಪ್ರಮುಖ್ಯ ಪಾತ್ರವಹಿಸಿದ್ದು, ಸಸ್ಯಗಳೊಂದಿಗೆ ಖನಿಜಗಳು ಮಾತ್ರವಲ್ಲದೆ ಕೆಲವೊಮ್ಮೆ ಪ್ರಾಣಿಜನ್ಯ ಪದಾರ್ಥಗಳನ್ನು ಉಪಯೋಗಿಸಲಾಗಿದೆ.

ಅದರ ಜೊತೆಗೆ ಮಂತ್ರ-ಯಂತ್ರ, ಪೂಜೆ, ದಾನ, ಧರ್ಮ, ಬಲಿ ಕ್ರಮಗಳನ್ನು ಒಳಗೊಂಡಿದೆ. ಈ ಕ್ರಮಗಳು ಮಾನವನ ಮನಸ್ಸಿನಲ್ಲಿ ಆವರಿಸಿರುವ ಮಾನಸಿಕ ರೋಗಗಳನ್ನು ಗುಣಪಡಿಸುವಲ್ಲಿ ಕೆಲಸ ಮಾಡುತ್ತವೆ ಎಂದು ನಂಬಿದ್ದರು. ಅದ್ದರಿಂದ ಇದನ್ನು ಮನೋವೈದ್ಯ ಎನ್ನಬಹುದು.

ಮನೋವೈದ್ಯಕ್ಕೆ ಮೂಲ ಮನಶಾಸ್ತ್ರ. ಮನಶಾಸ್ತ್ರವು ಮಾನವನ ವರ್ತನೆಯನ್ನು ಕುರಿತು ಅಧ್ಯಯನ ಮಾಡುವ ಶಾಸ್ತ್ರ. ಮಾನವನ ವರ್ತನೆಗೆ ಕಾರಣೀಭೂತವಾದದ್ದು ಮನಸ್ಸು. ಅಂತಹ ಮನಸ್ಸಿನ ಅಧ್ಯಯನ ಮಾಡುವ ಶಾಸ್ತ್ರವೇ ಮನಶಾಸ್ತ್ರ. "ಮಾನವನ ವರ್ತನೆಯನ್ನು ಅರ್ಥಾತ್ ಅವನ ಮನಸ್ಸಿನ ವರ್ತನೆಯನ್ನು ವ್ಯವಸ್ಥಿತ ರೀತಿಯಲ್ಲಿ ಚಿಂತನಗೈಯುವ ಒಂದು ವಿಜ್ಞಾನವೇ ಮನಶಾಸ್ತ್ರ". ಮನಶಾಸ್ತ್ರ-ಮನಸ್ಸಿನ ವರ್ತನೆಗಳನ್ನು ಮತ್ತು ಆ ರೀತಿಯ ವರ್ತನೆಗಳಿಗೆ ಕಾರಣ, ಸಂಬಂಧಗಳನ್ನು ಕುರಿತಾದ್ದರಿಂದ ಇದು ವೈದ್ಯಕೀಯ ರಂಗಕ್ಕೆ ಬಹಳ ಉಪಯುಕ್ತವಾಯಿತು. ತತ್ಫಲವಾಗಿ ಮನಶಾಸ್ತ್ರ ವೈದ್ಯಕೀಯ ರಂಗವನ್ನು ಪ್ರವೇಶಿಸಿ ಮನೋವೈದ್ಯಕೀಯ ಶಾಸ್ತ್ರ ಹೆಸರಿನಿಂದ ಇಂದು ಪ್ರಸಿದ್ಧಿ ಪಡೆದಿದೆ. ಮ್ಯಾಕ್ ಡ್ಯೂಗಲ್‌ನ ಪ್ರಕಾರ ಮನಶಾಸ್ತ್ರವು ಖಚಿತವಾದ ವರ್ತನೆಯ ಅಥವಾ ನಿಶ್ಚಿತವಾದ ನಡವಳಿಕೆ ವಿಜ್ಞಾನ. "Phychology is the positive science of behaviour". ಇದು ಜೀವಿಯನ್ನು ಸಮಗ್ರವಾಗಿ ನೋಡಿ ಅದರ ವರ್ತನೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಮತ್ತು ಹತೋಟಿಗೊಳಪಡಿಸಲು ಸಹಾಯ ಮಾಡುವುದೇ ಈ ವಿಜ್ಞಾನದ ಗುರಿಯಾಗಿದೆ.

ಭಾರತೀಯ ವೈದ್ಯಕೀಯ ಮತ್ತು ಮನೋವೈದ್ಯಕೀಯ ಶಾಸ್ತ್ರಕ್ಕೆ ವೇದಗಳು ಹೆಚ್ಚಿನ ಕೊಡುಗೆಯನ್ನು ನೀಡಿವೆ. ಕ್ರಿ.ಪೂ.೧೫೦೦ರಲ್ಲಿ ಮಾನಸಿಕ ರೋಗಗಳು ಭೂತಪ್ರೇತಗಳು ಮತ್ತು ಗ್ರಹನಕ್ಷತ್ರಗಳಿಂದ ಉಂಟಾಗುತ್ತದೆಂದು. ಆರೋಪಿಸಿದ್ದರು. ನಾಲ್ಕು ವೇದಗಳಾದ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳಲ್ಲಿ, ಋಗ್ವೇದವು ವೈದ್ಯಕೀಯ ವಿಜ್ಞಾನ ಮತ್ತು ಮನೋರೋಗಶಾಸ್ತ್ರಕ್ಕೆ ಹೆಚ್ಚಿನ ಕೊಡುಗೆ ಕೊಟ್ಟಿದ್ದರೂ, ಅಥರ್ವಣ ವೇದದ ಕೊಡುಗೆಯನ್ನು ಕಡೆಗಣಿಸುವಂತಿಲ್ಲ"[೧೭]. ಮನೋರೋಗಿ ಯಾವುದೇ ಅತಿಂದ್ರಿಯ ಶಕ್ತಿಯ ದುಷ್ಟ ಪರಿಣಾಮಗಳಿಗೆ ಸಿಕ್ಕಿಕೊಂಡವನೆಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. 'ಹುಚ್ಚು ಹಿಡಿದಿದೆ' ಎಂಬುದು ನಮ್ಮ ಪೂರ್ವಜರ ವಾಡಿಕೆಯ ಮಾತು. ಅಂದರೆ ಹೊರಗಿನ ಅಗೋಚರ ಶಕ್ತಿಯೊಂದು ಬಂದು 'ಹಿಡಿದುಕೊಂಡಿದೆ' ಎಂಬುದುನ್ನು ಇದು ಸೂಚಿಸುತ್ತದೆ. ಹೀಗೆ ಬಂದು ಹಿಡಿದುಕೊಳ್ಳುವುದು ಸಾಮಾನ್ಯವಾಗಿ ದುಷ್ಟ ಶಕ್ತಿಗಳು, ದೆವ್ವ ಭೂತಗಳು. ಬಹುಶಃ ಪೂರ್ವಜನ್ಮದ ಪಾಪ ಕರ್ಮಗಳಿಂದ ಈಗ ದೆವ್ವ ಭೂತಗಳು ಕಾಡುತ್ತಿವೆ ಎನ್ನುತ್ತಾರೆ.

ಉಪನಿಷತ್ತಿನ ಕಾಲದಲ್ಲಿಯೂ ವೈದ್ಯಕೀಯ ಶಾಸ್ತ್ರ ಮತ್ತು ಮನೋವೈದ್ಯಕೀಯ ಶಾಸ್ತ್ರಕ್ಕೆ ಅನೇಕ ಕೊಡುಗೆಗಳು ಬಂದವು. ಈ ಕಾಲದಲ್ಲಿ ಮಾನವನನ್ನು ಅಂತರಾವಲೋಕನ ವಿಧಾನದಿಂದ ಅರಿಯುತ್ತಿದ್ದರು. ಚೌಂದೋಗ್ಯ ಉಪನಿಷತ್ತಿನಲ್ಲಿ ಮನಸ್ಸನ್ನು ಇತರ ಇಂದ್ರಿಯಗಳಿಂದ ಭಿನ್ನವಾದ ಇಂದ್ರಿಯವೆಂದು ಪರಿಗಣಿಸಿ ಮಾನಸಿಕ ಕ್ರಿಯೆಗಳ ಕಾರಣಗಳನ್ನು ಉಲ್ಲೇಖಿಸಲಾಗಿದೆ. ಉಪನಿಷತ್ತಿನಲ್ಲಿ ವ್ಯಕ್ತಿತ್ವವನ್ನರಿಯಲು ಹೆಚ್ಚಿನ ಮಹತ್ವ ಕೊಡಲಾಗಿದೆ. ವ್ಯಕ್ತಿತ್ವ ಐದು ಕೋಶಗಳಿಂದ ಕೂಡಿದ್ದು ವ್ಯಕ್ತಿಯ

ಸರ್ವತೋಮುಖ ಬೆಳವಣಿಗೆಗೆ ಅತಿ ಮುಖ್ಯ ಎನ್ನಲಾಗಿದೆ. ಮೊದಲನೆಯದು ಅನ್ನಮಯ ಕೋಶ-ಇದು ಆಹಾರದಿಂದ ಉತ್ಪತ್ತಿಯಾಗಿ ದೈಹಿಕ ರಚನೆಗೆ ಕಾರಣವಾಗುತ್ತದೆ. ಎರಡನೆಯದು ಪ್ರಾಣಮಯ ಕೋಶ-ಇಂದ್ರಿಯಗಳಿಂದ ಉಜ್ಜೀವನಗೊಂಡು ಇಂದ್ರಿಯ ಕ್ರಿಯೆಗಳಿಗೆ ಕಾರಣವಾಗುತ್ತದೆ. ಮೂರನೆಯದು ಮನೋಮಯ ಕೋಶ-ಪ್ರತ್ಯಕ್ಷಾನುಭವ, ಸ್ಮೃತಿ, ಆಲೋಚನೆ ಮುಂತಾದವುಗಳು. ನಾಲ್ಕನೆಯದಾಗಿ ವಿಜ್ಞಾನಮಯ ಕೋಶ- ಚೇತನಾವಸ್ಥೆಯ ಕ್ರಿಯೆ. ಮತ್ತು ಕೊನೆಯದಾಗಿ ಆನಂದಮಯಕೋಶ-ಪರಮಸುಖಕ್ಕೆ ಕಾರಣವೆಂದು ಪರಿಗಣಿಸಿ ವ್ಯಕ್ತಿಯ ಆರೋಗ್ಯ ಮತ್ತು ಸಂತೋಷಕ್ಕೆ ಈ ಐದು ಕೋಶಗಳ ಒಗ್ಗೂಡಿಕೆ ಮತ್ತು ಸಮರಸವಾದ ಕಾರ್ಯ ಅಗತ್ಯ ಎಂದು ಉಲ್ಲೇಖಿಸಲಾಗಿದೆ. ಭಾರತೀಯ ವಿದ್ವಾಂಸರು ಇದನ್ನು ಮಾನವ ವ್ಯಕ್ತಿತ್ವದ ಸಮತೋಲನವಾದ ಎಂದು ಕರೆದಿದ್ದಾರೆ”[೧೮].

'Nobody is sane in this world' ಎಂಬ ಇಂಗ್ಲಿಷ್ ನಾಣ್ಣುಡಿ ಇದೆ. ಈ ಪ್ರಪಂಚದಲ್ಲಿರುವವರೆಲ್ಲ ಒಂದಲ್ಲ ಒಂದು ರೀತಿಯಿಂದ ಒಂದಲ್ಲ ಒಂದು ಸಂದರ್ಭದಲ್ಲಿ ಮಾನಸಿಕವಾಗಿ ಅಸ್ವಸ್ಥರೇ ಎಂದು ಇದರ ಅರ್ಥ. ಮಾನಸಿಕ ಅಸ್ವಸ್ಥರು ಅಥವಾ ಮಾನಸಿಕ ಅನಾರೋಗ್ಯರು ಎಂದರೆ ಬಾಯಿಗೆ ಬಂದಂತೆ ತಪ್ಪು ತಪ್ಪು ಮಾತಾಡುತ್ತಾ, ಮಾತಾಡುತ್ತ ಗೊತ್ತುಗುರಿ ಇಲ್ಲದೆ. ಎಲ್ಲೆಂದರೆ ಅಲ್ಲಿ ಅಲೆಯುತ್ತಾ ವಿಚಿತ್ರವಾಗಿ ವರ್ತಿಸುತ್ತಾ ತನ್ನ ಬೇಕು ಬೇಡಗಳನ್ನೂ ಮರ್ಯಾದೆಯನ್ನೂ ಗಮನಿಸದೆ, ತನಗೆ ಮತ್ತು ಇತರರಿಗೆ ತೊಂದರೆಯಾಗುವಂತೆ ನಡೆದುಕೊಳ್ಳುವ ವ್ಯಕ್ತಿಯನ್ನು ಮನೋರೋಗಿ ಎಂದು ಗುರುತಿಸಬಹುದು. ಮಾನಸಿಕ ಆರೋಗ್ಯವಂತರು ಎಂದರೆ; ಯಾವ ಕೆಲಸವನ್ನು ಮಾಡಿದರೂ ಸರಿಯಾಗಿ ವಿವೇಚಿಸುವುದು, ವಿಷಯಗಳಲ್ಲಿ ಆಸಕ್ತರಾಗಿರುವುದು, ದಾನಧರ್ಮಾದಿಗಳನ್ನು ಮಾಡುವುದು, ಇತರರನ್ನು ತನ್ನಂತೆ ಕಾಣುವದು. ಸತ್ಯವನ್ನೆ ನುಡಿಸುವುದು ಆಪ್ತೇಷ್ಟರನ್ನು ಸರಿಯಾಗಿ ಉಪಚರಿಸುವುದು. ಈ ಸಾಮಾಜಿಕ ಮೌಲ್ಯಗಳನ್ನು ಸರಿಯಾಗಿ ಪಾಲಿಸುವವರು ಎಂದಾಗುತ್ತದೆ. ನಮ್ಮ ಪೂರ್ವಜರು ಮಾನಸಿಕ ದೌರ್ಬಲ್ಯಗಳಿಗೆ (ಮನೋರೋಗಗಳಿಗೆ) ಪೂರ್ವಾಗ್ರಹ ಪೀಡೆ, ಭೂತ ಪಿಶಾಚಿಗಳು ಕಾರಣಗಳೆಂದು ಅವರು ನಂಬಿದ್ದರು. ಆದುದರಿಂದ ಅವುಗಳ ನಿವಾರಣೆಗೆ ಕನ್ನಡ ವೈದ್ಯಯ್ಶಾಸ್ತ್ರ ಹಸ್ತಪ್ರತಿಗಳಲ್ಲಿ ಮಂತ್ರ-ಯಂತ್ರ, ದೂಪ, ಬಲಿ ಹಾಗೂ ಹವನ ಹೋಮಗಳೊಡನೆ ನಸ್ಯ, ಕರ್ಮ, ಸಿರಾವೇಧ ಔಷಧಿಗಳನ್ನು ಸೂಚಿಸಿದ್ದಾರೆ.

ಆಯುರ್ವೇದದಲ್ಲಿ ಮುಖ್ಯವಾಗಿ ಕಂಡುಬರುವ ಮನೋರೋಗಗಳೆಂದರೆ ಅಪಸ್ಮಾರ, ಉನ್ಮಾದ, ಮೂರ್ಛೆ, ಮದ್ಯವ್ಯಸನ, ಬಾಲಗ್ರಹ ಅಪತಂತ್ರಿಕ, ಚಿತ್ತವೈಕಲ್ಯ, ಉದ್ವಿಗ್ನತೆ, ನರದೌರ್ಬಲ್ಯ ಇತ್ಯಾದಿ. ಮೇಲೆ ತಿಳಿಸಿದ ಮನೋರೋಗಗಳೇ ಅಲ್ಲದೆ ಕೆಲವು ಮನೋದೈಹಿಕ ರೋಗಗಳನ್ನು ಎಂದರೆ; ಉಬ್ಬಸ, ರಕ್ತದೊತ್ತಡ, ಜಠರವ್ರಣ, ಆಮಶಂಕೆ, ಯಾತನಾಮಯ ಋತುಚಕ್ರ, ಮಧುಮೇಹ, ಸಂಧಿವಾತ, ಪಾರ್ಶ್ವಶೂಲೆ, ಶೀತ, ಪಿತ್ತ ಇತ್ಯಾದಿಗಳನ್ನೂ ಹೆಸರಿಸಬಹುದು.

ಪ್ರತಿಯೊಂದು ಮನೋರೋಗಕ್ಕೂ ಕೆಲವು ವಿಶಿಷ್ಟವಾದ ಲಕ್ಷಣಗಳಿರುತ್ತವೆಯಲ್ಲದೆ ಕೆಲವು ಸಾಮಾನ್ಯ ಲಕ್ಷಣಗಳನ್ನೂ ಕಾಣಬಹುದು. ಎಂದರೆ ನಿದ್ರಾಹೀನತೆ, ನಿದ್ರಾಸಂಚಾರ, ಮೂರ್ಛೆ, ವಿಷಣ್ಣತೆ, ಉದಾಸೀನತೆ, ಸಿಡುಕು, ವಿಸ್ಮೃತಿ, ದುಸ್ವಪ್ನಗಳು, ಭಾವ ವೈಪರೀತ್ಯ, ಅತಿ ಉನ್ಮಾದ, ಚಿಂತೆ, ವಿಭ್ರಮೆಗಳು,

ಸಂಭ್ರಾಂತಿ ಇತ್ಯಾದಿ"[೧೯]. ಇದು ಪ್ರಧಾನವಾಗಿ ಮನಸ್ಸಿನ ಮೇಲೆ ಪ್ರಭಾವ ಬೀರುವಂತದುದು. ಆದುದರಿಂದ ಮನೋವೈದ್ಯ ಅಥವಾ 'ಮನಶಾಸ್ತ್ರೀಯ ವೈದ್ಯ' ಎಂದೂ ಕರೆಯಬಹುದಾಗಿದೆ. ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಉಕ್ತವಾದ ಬಂಜೆಗೆ ಹಾಕುವ ಮಂತ್ರ ಹೀಗಿದೆ;

ನಮೊ ಓಂ ಭಗವತೋ ಪಾರ್ಶ್ವನಾಥಾಯನಮಃ ಇದರ್ಪ್ಪವಿಧ್ವಂಸನಾಯ। ಸರ್ವ್ವಾಸರ್ಗ್ಗವಿನಾಶನಾಯ ವರಬೇಂದ್ರಪ್ರಣಾಮಣಿ ಸಹಸ್ರಜ್ಯೋತಿ ದಿಗಂತದೊಳ್ ಪರಿಪಂಡಿತಂ। ಪದ್ಮಾವತಿ ಶ್ವೇತಾತ ಪತ್ರಂ ಧರಾಯ ಸರ್ವ್ವಗ್ರಹ ಮಾತ್ರದೋಷಹನ=ಸ್ತ್ರೀ, ಪು=ರುತುಮತ್ಯಯನನಮಃ ಸ್ವಹಾಯೆಂದು ಮಂತ್ರಿಸಿ ನಾಲ್ಕು ಕುಂಬಮಂ ನಾಲ್ವರುಮಣಿಯರುಂ ಸರ್ವ್ವಾಭರಣ ಭೂಷಿತರಂಮಾಡಿ ಮಂತ್ರಮನೋಡುತ್ತಂ ಅವರ ಕೈಯಿಂದೆತ್ತಿಸಿ ಬಂಜೆಯಮಂಡಿಯ ಮೇಲೆ ದಾರೆನಿರಾಗಿ ಸ್ನಾನಕ್ಕೆ ಆರುತ್ತ ಚಂದ್ರಮಂಡಲದಿಂದ ಮತ್ತಂ ಸ್ರಮಿಸುವಂತಾಗಿದ್ದೂನಿಸುಮೆದದು ಸ್ವಪ್ನಮಂಗೆಯ್ಸಿಯೆಲ್ಲಾ ಪುರುಷಂಗಳುಂ ಕೆಡುಗು ಗರ್ಭಮಕ್ಕುಂ"[೨೦]॥ ಮಂಗರಾಜನು ವಿಷಚಿಕಿತ್ಸೆಯಲ್ಲಿ ಸೂಚಿಸಿದ ಮಂತ್ರ ಹೀಗಿದೆ;

ಓಂ ಕ್ಷಾಂ ಕ್ಷೀಂ ಕ್ಷೂಂ ಕ್ಷಾಂ ಕ್ಷೂಂ ಓಂ ಹುಂ ಪಟ್ ಸ್ವಾಹಾ ನಾಸ್ತಿ ವಿಷ ಸ್ವಾಹಾ. ಇದು ಸ್ವಚ್ಛಂದ ಭೈರವೀಮಂತ್ರ

ಓಂ ಅಮೃತೇ ಅಮೃತೋದ್ಭವೇ ಅಮೃತವರ್ಷಿಣೀ ಇದಮೃತಂ ಸ್ರಾವಯಸಂ ಕ್ಲೀ ಬ್ಲೂಂ ದ್ರಾಂ ದ್ರಿಂ ದ್ರಾವಯ ಹಂ ಝುಂ ಝುಂ ಹಂಸ ಸ್ವಾಹಾ"[೨೧]

ಈ ಮಾಂತ್ರಿಕ ನುಡಿ ಮತ್ತು ಮಂತ್ರ ಇವೆಲ್ಲ ನಂಬಿಕೆ ಮತ್ತು ಮನಸ್ಸನ್ನು ಅವಲಂಬಿಸಿರುವಂತಹವು. ಅಂದರೆ ಇವೆಲ್ಲ ಮನೋವೈದ್ಯದ ರೂಪಗಳೆ. ಪ್ರಾಚೀನ ಮಾನವರಿಗೆ ಅತಿಮಾನುಷ ಶಕ್ತಿಗಳ ಬಗ್ಗೆ ವಿಶೇಷ ಭಯವಿತ್ತು. ಕತ್ತಲೆಯ ಹೊತ್ತಿನಲ್ಲಿ ದಾರಿಯಲ್ಲಿ ಹೋಗುವಾಗ ಯಾವುದೇ ಮರ ಗಿಡಗಳ ಸದ್ದಾದರೂ ಪ್ರಾಣಿ ಪಕ್ಷಿಗಳ ಕೂಗು ಕೇಳಿದರೂ ಕೂಡ ಅದು ಭೂತ ಪಿಶಾಚಿಗಳದ್ದೇ ಕೆಲಸವೆಂದು ಭಾವಿಸಿ ಹೆದರಿಕೊಳ್ಳುತ್ತಿದ್ದರು. ಈ ಹೆದರಿಕೆಯ ಪರಿಣಾಮವಾಗಿ ಜ್ವರ ಬರುವುದು ರೂಢಿಯಲ್ಲಿತ್ತು. ಭಯವು ರೋಗವನ್ನು ಉಂಟುಮಾಡುತ್ತದೆ. ಭಯವನ್ನು ಪ್ರತಿಭಯದಿಂದಲೇ ಕಿತ್ತು ತೆಗೆಯಬೇಕು ಮತ್ತು ಮಾನಸಿಕ ಪ್ರೇರಣೆಯಿಂದ ಉಂಟಾದ ರೋಗವನ್ನು ಪ್ರತಿ ಪ್ರೇರಣೆಯಿಂದಲೇ ಪರಿಹರಿಸಬೇಕು ಎಂದು ನಂಬಿದ್ದರು. ಮಂತ್ರ, ಧೂಪ, ಬಲಿ ಮುಂತಾದ ಕ್ರಮಗಳು ರೋಗಿಯ ಮಾನಸಿಕ ಬದಲಾವಣೆಯನ್ನುಂಟು ಮಾಡಿ ರೋಗ ಗುಣಪಡಿಸಲು ನೆರವಾಗುತ್ತವೆ. ಕಳೆಯುವ ಕ್ರಿಯೆಯಂತೂ ದೊಡ್ಡ ರೀತಿಯಲ್ಲಿ ರೋಗಿಯ ಮನಸ್ಸಿನ ಮೇಲೆ ಪ್ರತಿಭಯವನ್ನುಂಟುಮಾಡುತ್ತದೆ. ರೋಗ ನಿವಾರಣೆ ಕೇವಲ ಯಂತ್ರ-ಮಂತ್ರಗಳಿಂದ ಮಾತ್ರ ಸಾಧ್ಯವಾಗುವುದಿಲ್ಲ. ಅದರೊಂದಿಗೆ ಔಷಧಗಳನ್ನು ಕೂಡಾ ನೀಡಬೇಕಾಗುತ್ತದೆ. ಮನಶಾಸ್ತ್ರೀಯ ಹಿನ್ನೆಲೆಯಲ್ಲಿ ಸೂಚಿಸಿದ ಯಂತ್ರ-ಮಂತ್ರಗಳು ಮತ್ತು ಧೂಪ ಬಲಿಯಂತಹ ಸಂಪ್ರದಾಯಗಳು ಮತ್ತು ಔಷಧೋಪಚಾರಗಳು ಕೂಡಿ ರೋಗಿಯ ವ್ಯಾದಿಯನ್ನು ಗುಣಪಡಿಸುತ್ತವೆ.

ಶರೀರ ಮನಸ್ಸುಗಳೆರಡೂ ರೋಗಗಳಿಗೆ ಆಶ್ರಯ ಸ್ಥಾನಗಳು. ಆದುದರಿಂದ ರೋಗಗಳು ಹುಟ್ಟುವ ಮುನ್ನವೇ ತಡೆಗಟ್ಟಬೇಕು. ಇಂದ್ರಿಯಗಳನ್ನು ಜಯಿಸುವುದೇ ಇದಕ್ಕೆ ನಿಜವಾದ ಉಪಾಯ.

ಮನೋರೋಗಗಳನ್ನು ತಡೆಗಟ್ಟಲು ಸದಾ ಸಜ್ಜನರೊಡನೆ ಸ್ನೇಹ ಸಂಪರ್ಕಗಳನ್ನು ಇಟ್ಟುಕೊಂಡು ದುರ್ಜನರಿಂದ ದೂರವಿರಲೆತ್ನಿಸಬೇಕು. ಜೀವನದಲ್ಲಿ ಒಳ್ಳೆಯ ನಿಯಮಗಳನ್ನು ಪಾಲಿಸುವ ಸಲುವಾಗಿ ವ್ರತ, ಉಪವಾಸ, ಧರ್ಮಪಠನ, ಜ್ಞಾನಾರ್ಜನೆ, ಧ್ಯಾನ, ಇಂದ್ರಿಯನಿಗ್ರಹ, ಹಾಗೂ ಮೋಕ್ಷಮಾರ್ಗಗಳನ್ನು ಅನುಸರಿಸಬೇಕು. ಅಹಂಕಾರ ಮತ್ತು ದುಶ್ಚಟಗಳನ್ನೂ ಬಿಡಬೇಕು ಈ ಅಂಶಗಳ ಪಾಲನೆಯಿಂದ ಮನಸ್ಸು ದೃಢವಾಗಿ ರೋಗಗಳು ಹುಟ್ಟಲು ಅವಕಾಶವಿರುವುದಿಲ್ಲ ಎಂದು ವೈದ್ಯಶಾಸ್ತ್ರ ಹೇಳುತ್ತದೆ. ಅಲ್ಲದೆ ಮನೋರೋಗಗಳು ಬಾರದಂತೆ ಕೆಲವು ಕ್ರಮಗಳನ್ನು ಕೈಗೊಂಡರೆ ಬಹಳ ಮಟ್ಟಿಗೆ ಅವುಗಳನ್ನು ತಡೆಗಟ್ಟಬಹುದು. ತಂದೆತಾಯಿಗಳಾದವರು ತಮ್ಮ ಸಚ್ಚಾರಿತ್ರ್ಯದಿಂದ ಮಕ್ಕಳಿಗೆ ಆರೋಗ್ಯಕರ ವಾತಾವರಣ ಒದಗಿಸಬೇಕು. ಒಳ್ಳೆಯ ಶಿಕ್ಷಣವನ್ನು ಕೊಡಬೇಕು, ಪ್ರೀತಿವಾತ್ಸಲ್ಯಗಳಿಂದ ಅವರನ್ನು ಬೆಳೆಸಬೇಕು. ನೈತಿಕ ಮಾರ್ಗದಲ್ಲಿ ನಡೆದುಕೊಳ್ಳುವಂತೆ ಪ್ರೋತ್ಸಾಹಿಸಬೇಕು. ಹೀಗೆ ಅನೇಕ ಸದಾಚಾರಗಳನ್ನು ವೈದ್ಯಶಾಸ್ತ್ರ ಸೂಚಿಸುತ್ತದೆ. ಅದೇ ರೀತಿ ಮನಶಾಸ್ತ್ರವು ಮಾನಸಿಕ ಆರೋಗ್ಯವನ್ನು ಪಡೆಯುವುದರ ಅಗತ್ಯತೆಯನ್ನು ಒತ್ತಿ ಹೇಳುತ್ತದೆ. ಹಾಗೂ ಇದು ಮಾನಸಿಕ ಆರೋಗ್ಯವನ್ನು ಪಡೆಯಲು ಮಾರ್ಗೋಪಾಯಗಳನ್ನು ಸೂಚಿಸುತ್ತದೆ ಹಾಗೂ ಮಾನಸಿಕ ಆರೋಗ್ಯದ ಕುರಿತು ಪ್ರಮುಖವಾದ ಗುರಿಗಳನ್ನು ಮನಶಾಸ್ತ್ರ ಹೊಂದಿದೆ. ಅವುಗಳೆಂದರೆ;

* ವ್ಯಕ್ತಿಗೆ ಅವನ ಸಾಮರ್ಥ್ಯಗಳನ್ನು ಪರಿಪೂರ್ಣ ಮಟ್ಟಕ್ಕೆ ಬೆಳವಣಿಗೆ ಮಾಡಿಕೊಳ್ಳಲು ಅವಕಾಶ ನೀಡುವುದು ಮತ್ತು ವ್ಯಕ್ತಿಯ ಎಲ್ಲಾ ವರ್ತನಾ ಸಮಸ್ಯೆಗಳನ್ನು ಒಳಗೊಳ್ಳುತ್ತದೆ.

* ರಾಷ್ಟ್ರದ ಸಾಮಾಜಿಕ ಆರ್ಥಿಕ ಸ್ಥಿತಿಗತಿಯ ಹಿನ್ನೆಲೆಯಲ್ಲಿ ಜೀವನದ ಬಗ್ಗೆ ಧನಾತ್ಮಕ ಮನೋಧೋರಣೆ ಬೆಳೆಸಿಕೊಳ್ಳಲು ಅಗತ್ಯವಾದ ಮಾರ್ಗೋಪಾಯಗಳನ್ನು ಸೂಚಿಸುವ ಮೂಲಕ ವ್ಯಕ್ತಿ ಮಾನಸಿಕ ಸಮತೋಲನವನ್ನು ಪಡೆಯಲು ನೆರವಾಗುವುದು. ಇದರಿಂದ ವ್ಯಕ್ತಿ ಆರೋಗ್ಯಕರವಾದ ಹಾಗೂ ಸಂತೋಷಕರವಾದ ಜೀವನ ಸಾಗಿಸಲು ನೆರವಾಗುತ್ತದೆ.

* ವ್ಯಕ್ತಿಯು ತನ್ನ ಸುತ್ತಮುತ್ತಲಿನ ಸಾಮಾಜಿಕ ವಾತಾವರಣಕ್ಕೆ ಹೊಂದಾಣಿಕೆ ಮಾಡಿಕೊಳ್ಳಲು ಅಗತ್ಯವಾದ ದೈಹಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ವಿಕಾಸಗಳ ಮೂಲಕ ಸಮಗ್ರ ವಿಕಾಸವನ್ನು ಸಾಧಿಸಲು ಮನಶ್ಯಾಸ್ತ್ರ ನೆರವಾಗುತ್ತದೆ.

* ಮನಶ್ಯಾಸ್ತ್ರವು ವ್ಯಕ್ತಿಯು ತನ್ನ ಸಾಮರ್ಥ್ಯಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲು ನೆರವಾಗುತ್ತದೆ.

ಮನೋರೋಗದಿಂದ ವ್ಯಕ್ತಿಯ ಸಹಜ ವರ್ತನೆಗಳು ಇಲ್ಲವಾಗಿ ವಿಚಿತ್ರ ವರ್ತನೆಗಳು ಉಂಟಾಗುತ್ತವೆ. ವರ್ತನೆಯನ್ನು ಕುರಿತು ಅಧ್ಯಯನ ಮಾಡುವ ಶಾಸ್ತ್ರ ಮನಶ್ಯಾಸ್ತ್ರವಾದ್ದರಿಂದ ಪ್ರಾಚೀನ ಶಾಸ್ತ್ರಜ್ಞರು ಮನಶ್ಯಾಸ್ತ್ರೀಯ ನೆಲೆಯಲ್ಲೆ ಮನೋರೋಗಿಯನ್ನು ಗುರುತಿಸಿ ರೋಗ ನಿವಾರಣೆಗೆ ಔಷಧೋಪಚಾರಗಳನ್ನು ಗುರುತಿಸಿದ್ದಾರೆ. ಮನಶ್ಯಾಸ್ತ್ರವು ವ್ಯಕ್ತಿಗಳ ಮತ್ತು ಗುಂಪಿನ ವರ್ತನೆಯನ್ನು ವಿಶ್ಲೇಷಿಸಲು ಮತ್ತು ಊಹಿಸಲು ಅಗತ್ಯವಾದ ದತ್ತಾಂಶಗಳನ್ನು ಸಂಗ್ರಹಿಸಲು ವೈಜ್ಞಾನಿಕ ವಿಧಾನವನ್ನು ಬಳಸಿಕೊಳ್ಳುತ್ತದೆ. ಇದು ವೀಕ್ಷಿಸಬಹುದಾದ ವರ್ತನೆಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳುತ್ತದೆ. ವಸ್ತುನಿಷ್ಠ

ನಿದರ್ಶನ ಅಥವ ಸಾಕ್ಷ್ಯಾಧಾರಗಳಿದ್ದಾಗ ಮಾತ್ರ ನೈಜ ವರ್ತನೆಗಳನ್ನು ಸ್ಥಿರಪಡಿಸುತ್ತದೆ. ಮನಶ್ಯಾಸ್ತ್ರವು ವ್ಯಕ್ತಿಗಳ ವರ್ತನೆಯ ಮೇಲೆ ಪ್ರಭಾವ ಬೀರುವ ಚರಾಂಶಗಳ ಕುರಿತು ಹೆಚ್ಚಿನ ಮಾಹಿತಿ ಪಡೆಯಲಾಗುತ್ತದೆ. ಮತ್ತು ಪ್ರಾಕಲ್ಪನೆಗಳ ಆಧಾರಗಳ ಮೇಲೆ ಕಾರ್ಯಕಾರಣ ಸಂಬಂಧವನ್ನು ಕಂಡುಕೊಳ್ಳಲಾಗುತ್ತದೆ. ಒಂದು ಸನ್ನಿವೇಶದಲ್ಲಿ ಕಂಡುಕೊಂಡಂತಹ ಫಲಿತಾಂಶಗಳನ್ನು ಅಂತಹುದೇ ಸನ್ನಿವೇಶದಲ್ಲಿ ಪರಿಶೀಲಿಸಲಾಗುತ್ತದೆ. ಇದರಿಂದ ಮಾನವನ ವರ್ತನೆಯನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಪ್ರಧಾನವಾಗಿ ಮನಶ್ಯಾಸ್ತ್ರವು ಮಿದುಳು ಮತ್ತು ನರಮಂಡಲದ ಕಾರ್ಯವಿಧಾನಗಳು, ನರಮಂಡಲದ ಮೂಲಲಕ್ಷಣಗಳು ರೋಗಗಳಿಂದ ನರಮಂಡಲದಲ್ಲಿ ಆಗುವ ಬದಲಾವಣೆಯನ್ನು ಗುರುತಿಸುತ್ತದೆ. ನರಮಂಡಲದಲ್ಲಿ ಬದಲಾವಣೆಯಿಂದಾಗಿಯೇ ಮನೋರೋಗಗಳು ಉಂಟಾಗಿರುತ್ತವೆ. ಇವುಗಳನ್ನು ಗುರುತಿಸುತ್ತದೆ. ಈ ಶಾಸ್ತ್ರದ ಜ್ಞಾನದಿಂದಲೇ ವೈದ್ಯರು ಚಿಕಿತ್ಸೆ ಮಾಡುತ್ತಾರೆ. ವ್ಯಕ್ತಿಯನ್ನು ಕುರಿತು ಅಧ್ಯಯನ ಮಾಡುವ ಮನಶ್ಯಾಸ್ತ್ರವು, ವ್ಯಕ್ತಿಯ ವರ್ತನೆಯಲ್ಲಿ ಏರುಪೇರಾದರೆ ಗುರುತಿಸಿ ನಮ್ಮಲ್ಲಿ ಸಾತ್ವಿಕ ಗುಣಗಳು ಬೆಳೆದು ಮನೋರೋಗಗಳನ್ನು ನಿರೋಧಿಸಲು ಸಾಧ್ಯವಾಗುತ್ತದೆ.

ಮನಸ್ಸಿನ ಮೇಲೆ ಮಾಡುವ ಪರಿಣಾಮ ಎಷ್ಟೆಂಬುದು ಮನಶ್ಯಾಸ್ತ್ರ ಓದಿದರೆ (ಅಧ್ಯಯನ ಮಾಡಿದರೆ) ತಿಳಿಯುತ್ತದೆ. ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳ ವಿವರಗಳನ್ನು ಪರಿಶೀಲಿಸಿದಾಗ ಅಲ್ಲಿನ ಅನೇಕ ರೋಗಗಳಿಗೆ ಪ್ರೇರಣೆ (Suggestion)ಯೇ ಮೂಲವಾಗಿದ್ದು, ಮನಸ್ಸಿನ ಪರಿಣಾಮ ದೇಹದ ಮೇಲೆ ಆಗಿರುವುದರಿಂದ ಉಂಟಾಗಿರುವ ಮನೋದೈಹಿಕ ರೋಗಗಳು (Psychomahic diseases) ಸಾಕಷ್ಟಿವೆ. ಈ ರೀತಿಯ ರೋಗಗಳ ಲಕ್ಷಣ ಚಿಕಿತ್ಸಾ ವಿಧಿವಿಧಾನಗಳು ಪ್ರಮುಖವಾಗುತ್ತವೆ. ಯಂತ್ರ-ಮಂತ್ರ-, ದೀಪ-ಧೂಪ, ಬಲಿ, ದೇವರ ಪೂಜೆ ಮೊದಲಾದ ಅಂಶಗಳು ಬರುವಲ್ಲೆಲ್ಲಾ ಪ್ರಾಚೀನ ಶಾಸ್ತ್ರಜ್ಞರು ರೋಗಿಗಳಿಗೆ ಕೊಡುವ ಮನಃಚಿಕಿತ್ಸೆ ಎಂದೇ ಹೇಳಬೇಕಾಗುತ್ತದೆ.

ಇಲ್ಲಿಯವರೆಗಿನ ಸಂಗತಿಗಳನ್ನು ಪರಿಶೀಲಿಸಿ ಹೇಳುವುದಾದರೆ ಪ್ರಾಚೀನ ಕಾಲದಿಂದ ವೈದ್ಯಕೀಯ ಶಾಸ್ತ್ರದಲ್ಲಿ ಮನಶ್ಯಾಸ್ತ್ರದ ತಿಳುವಳಿಕೆ ಅಪಾರವಾಗಿತ್ತು. ಅಲ್ಲದೆ ಮನಶಾಸ್ತ್ರದಲ್ಲಿಯೂ ರೋಗನಿವಾರಣೆಗಾಗಿ ಮನೋವೈದ್ಯಕೀಯ ಶಾಸ್ತ್ರವೇ ರೂಪಗೊಂಡಿದೆ. ಈ ಹಿನ್ನೆಲೆಯಲ್ಲಿ ವೈದ್ಯಶ್ಯಾಸ್ತ್ರ ಮತ್ತು ಮನಶಾಸ್ತ್ರಕ್ಕಿರುವ ಸಂಬಂಧದ ಅರ್ಥವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಪ್ರಾಣಾಯಮ (ದೇಹಸ್ವಾಸ್ಥ್ಯ ಮತ್ತು ಸಾಕ್ಷಾತ್ಕಾರ); ೧೯೭೩, ತಿರುಕ, ಪು.೩೭

೨. ಅದೇ, ಪು.೪೮

೩. ಯೋಗ ಸ್ತ್ರೀಯರಿಗೊಂದು ವರದಾನ; ಡಾ.ಗೀತಾ ಎಸ್. ಅಯ್ಯಂಗಾರ್, ಪು.೩೪

೪. ಅದೆ, ಪು. ೩೫

೫. ಆರೋಗ್ಯಯೋಗ; ಗಗನ; ೨೦೦೦, (ಅನು) ಡಾ.ಬಿ.ಕೆ.ಎಸ್. ಅಯ್ಯಂಗಾರ್, ಪು.೧೬

೬. ಸೂಪಶಾಸ್ತ್ರ; ೧೯೬೯, (ಸಂ) ಎಸ್.ಎನ್. ಕೃಷ್ಣಜೋಯಿಸ, ಉಪೋದ್ಘಾತ, ಪು.IX

೭. ಭೀಮಸೇನ ಕೃತ ಸೂಪಶಾಸ್ತ್ರಂ; ೧೯೫೦, (ಸಂ) ಯು.ಸೀತಾರಾಮಾಚಾರ್ಯ, ಶ್ಲೋಕ. ೪೫
೮. ಅದೇ, ಪು.೫೨
೯. ವೈದ್ಯತಜ್ಞನ ಹೃದಯ ಬಿಚ್ಚಿದಾಗ; ೧೯೯೩, ಡಾ॥ ಎಸ್.ಬಿ.ಪಾಟೀಲ್, ಪು.೪
೧೦. ಕನ್ನಡದಲ್ಲಿ ಸೂಪಶಾಸ್ತ್ರ ಸಾಹಿತ್ಯ; ೨೦೦೬, ಡಾ.ಬಿ.ಮಂಜುಳಾ, ಪು.೩೯೨
೧೧. ಸೂಪಶಾಸ್ತ್ರ; ೧೯೫೦, (ಸಂ) ಯು.ಸೀತಾರಾಮಾಚಾರ್ಯ, ಸೂತ್ರ೨-೧೪
೧೨. ವೈದ್ಯಶಾಸ್ತ್ರ; ಕನ್ನಡ ವಿ.ವಿ. ಹಸ್ತಪ್ರತಿ ಸಂಖ್ಯೆ. ಕೆ ೪೬೩
೧೩. ಧರ್ಮಾಮೃತ; ೧೯೭೭, (ಗದ್ಯಾನು) ಕೆ.ವೆಂಕಟರಾಮಪ್ಪ, ೯-೧೦೮
೧೪. ಶಿಶುನಾಳ ಶರೀಫ ಗೀತೆಗಳು; ೨೦೦೨, ಶಿವಾನಂದ ಗುಬ್ಬಣನವರ, ಪು.೫೬
೧೫. ಕನ್ನಡ ವಿಶ್ವಕೋಶ, ಸಂಪುಟ-೩; ಪು.೪೮೮
೧೬. ದ್ರವ್ಯಗುಣ ವಿಜ್ಞಾನ; ೧೯೮೯, ಶ್ರೀ ಜಿ.ಎನ್. ಹೆಗಡೆ, ಪು.೪
೧೭. ಮಾನಸಿಕ ರೋಗಗಳ ಪರಿಚಯ; ೧೯೯೦, ವೈ.ಟಿ. ಬಾಲಕೃಷ್ಣ ಆಚಾರ್ಯ, ಪು.೯
೧೮. ಅದೇ, ಪು.೧೦
೧೯. ಮನೋರೋಗ ವಿಜ್ಞಾನ; ೧೯೮೫, (ಪ್ರ.ಸಂ) ಡಾ.ಎಚ್. ತಿಪ್ಪೆರುದ್ರಸ್ವಾಮಿ, ಪು.೩೭
೨೦. ಬಾಲವೈದ್ಯ; ರಾಷ್ಟ್ರೀಯ ಪ್ರಾಕೃತ ಅಧ್ಯಯನ ಸಂಶೋಧನ ಸಂಸ್ಥೆ ಶ್ರವಣಬೆಳಗೊಳ, ಹಸ್ತಪ್ರತಿ ಸಂಖ್ಯೆ. ಕೆ೩೫೮
೨೧. ಖಗೇಂದ್ರಮಣಿಮಣಿ ದರ್ಪಣಂ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೨೧

❑❑❑

ಅಧ್ಯಾಯ ಆರು

# ಪಾರಂಪರಿಕ ಮತ್ತು ಆಧುನಿಕ ವೈದ್ಯಶಾಸ್ತ್ರಗಳ ಅಂತರಸಂಬಂಧ

೬.೧. ಆಧುನಿಕ ವೈದ್ಯಶಾಸ್ತ್ರಗಳಿಗೆ ಪಾರಂಪರಿಕ ವೈದ್ಯಶಾಸ್ತ್ರದ ಪ್ರೇರಣೆ ಮತ್ತು ಪ್ರಭಾವ

೬.೨. ಸಾಂಪ್ರದಾಯಿಕ ನಂಬಿಕೆಗಳು ಮತ್ತು ವೈದ್ಯಶಾಸ್ತ್ರದ ನಡುವಿನ ಸಂಬಂಧ

೬

# ಪಾರಂಪರಿಕ ಮತ್ತು ಆಧುನಿಕ ವೈದ್ಯಶಾಸ್ತ್ರಗಳ ಅಂತರಸಂಬಂಧ

## ೬.೧. ಆಧುನಿಕ ವೈದ್ಯಶಾಸ್ತ್ರಗಳಿಗೆ ಪಾರಂಪರಿಕ ವೈದ್ಯಶಾಸ್ತ್ರದ ಪ್ರೇರಣೆ ಮತ್ತು ಪ್ರಭಾವ

ಶಾಸ್ತ್ರ ಎನ್ನುವುದು ನಿಯಮಬದ್ಧವಾದದ್ದು ಮತ್ತು ಪಾವಿತ್ರ್ಯತೆಯ ಚೌಕಟ್ಟಿಗೆ ಒಳಗಾಗಿರುವಂಥದ್ದು. ಇಂಥ ಶಾಸ್ತ್ರಗಳು ಸಂಸ್ಕೃತಿಯ ವ್ಯವಹಾರಕ್ಕೆ ಒಳಪಟ್ಟಾಗ ಬದಲಾವಣೆ ಹೊಂದುತ್ತವೆ. ಅದರಂತೆ ನಮ್ಮ ಪಾರಂಪರಿಕ ವೈದ್ಯಶಾಸ್ತ್ರವು ಪ್ರಯೋಗಕ್ಕೆ ಒಳಪಟ್ಟು ಪ್ರಾಮಾಣೀಕೃತ, ದೈವಸ್ವರೂಪಿ ನೆಲೆಯಿಂದ ಬೇರೆ ಬೇರೆ ನೆಲೆಯಲ್ಲಿ ವಿಸ್ತರಿಸುತ್ತ ಮುಂದುವರಿದು ಬಂದಿದೆ. ವೈದ್ಯಶಾಸ್ತ್ರದ ಮುಖ್ಯ ಗುಣ ಕ್ರಿಯಾಶೀಲತೆ ಮತ್ತು ಚಲನಶೀಲತೆ. ಆದ್ದರಿಂದ ಪಾರಂಪರಿಕ ವೈದ್ಯಶಾಸ್ತ್ರವು ದೈವಿನೆಲೆ, ಮಾಂತ್ರಿಕ ಸ್ವರೂಪ, ಸಾಂಪ್ರದಾಯಿಕ ಆಚರಣೆ, ನಿಯಮಗಳನ್ನು ದಾಟಿ ವೈಜ್ಞಾನಿಕ ದೃಷ್ಟಿಯಿಂದ ವಿವಿಧ ಶಾಖೆಗಳಾಗಿ ಪರಿವರ್ತನೆಗೊಳ್ಳುತ್ತ ಸಾಗಿದೆ. ದೇಶದಿಂದ ದೇಶಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಕಾಲದಿಂದ ಕಾಲಕ್ಕೆ ಮಾರ್ಪಾಟಾಗುತ್ತಾ ಸಾಗಿದೆ. ಅಲ್ಲಲ್ಲಿ ಬೆಳೆಯುವ ಸಸ್ಯಗಳಿಗನುಗುಣವಾಗಿ, ಪ್ರಾದೇಶಿಕ ವೈವಿಧ್ಯತೆಗನುಗುಣವಾಗಿ ಬೆಳೆದು ಬಂದಿರುವುದರಿಂದ ಅದರ ಚಲನಶೀಲತೆ ಸಹಜ.

ಬಹುಮುಖಿ ಸಂಸ್ಕೃತಿ ಹಾಗೂ ಕೃಷಿ ಆಧಾರಿತ ನಮ್ಮ ದೇಶದಲ್ಲಿ ಅನೇಕ ಆಧುನಿಕ ವೈದ್ಯಶಾಸ್ತ್ರಗಳು ಹುಟ್ಟಿಕೊಂಡವು. ಅವು ಪ್ರಚಲಿತಕ್ಕೆ ಬರುವ ಮೊದಲಿಗೆ ನಮ್ಮ ಪಾರಂಪರಿಕ ವೈದ್ಯ ಪದ್ಧತಿಯೇ ವರದಾನವಾಗಿತ್ತು. ಈಗಲೂ ಸಹ ಹಳ್ಳಿಗಳಲ್ಲಿ ಸಣ್ಣಪುಟ್ಟ ಕಾಯಿಲೆಗಳಿಗೆ ತಮ್ಮ ಸುತ್ತಮುತ್ತ ಸಿಗುವ ಮೂಲಿಕೆಗಳಿಂದಲೇ ವಾಸಿಮಾಡಿಕೊಳ್ಳುತ್ತಾರೆ. ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ 'ಅಲೋಪಥಿಕ್' ಎಂದು ಕರೆಯಲಾಗುವ ಆಧುನಿಕ ವೈದ್ಯಪದ್ಧತಿಯನ್ನು ಜನಪ್ರಿಯಗೊಳಿಸಲಾಯಿತು. ಬ್ರಿಟಿಷರಿಗೆ ಮೊದಲು ಇಲ್ಲಿಗೆ ಕಾಲಿರಿಸಿದ ಮುಸ್ಲಿಂ–ಮೊಗಲ್ ದೊರೆಗಳ ಪ್ರೋತ್ಸಾಹದಿಂದ 'ಯುನಾನಿ' ವೈದ್ಯಪದ್ಧತಿ ಹರಡಿತು. ವೇದ ಕಾಲದಲ್ಲಿ ಆಯುರ್ವೇದವೆನ್ನುವ ವ್ಯವಸ್ಥಿತ ವೈದ್ಯ ಪದ್ಧತಿ ಇತ್ತು. ಅದನ್ನು ಭಾರತಿಯರು ಅನುಸರಿಸುತ್ತಾ ಬಂದಿದ್ದರು. ಆಯುರ್ವೇದವು ಕೆಲವೇ ಜಾತಿ, ವರ್ಗಗಳಿಗೆ ಸೀಮಿತವಾಗಿ ಗುರು ಶಿಷ್ಯ ಪರಂಪರೆಯಲ್ಲಿ

ಸಾಗಿ ಬರುತ್ತಿದ್ದು ಅದಕ್ಕೆ ಪರ್ಯಾಯವಾಗಿ ಮನೆವೈದ್ಯ, ನಾಡವೈದ್ಯ, ಮನೆಮದ್ದು, ಹಸಿರು ಔಷಧಿ, ನಾಟಿ ವೈದ್ಯ ಮೊದಲಾದ ಪಾರಂಪರಿಕ ದೇಶಿ ವೈದ್ಯಪದ್ಧತಿಯನ್ನು ಜನಪದರು ಬಳಸುತ್ತಾ ಬಂದಿದ್ದಾರೆ. ಇತ್ತೀಚಿಗೆ ಹೋಮಿಯೋಪತಿ, ಸಿದ್ದವೈದ್ಯ, ಟಿಬೆಟಿಯನ್ ವೈದ್ಯ, ಪ್ರಕೃತಿ ಚಿಕಿತ್ಸೆಯಂತ ವೈದ್ಯ ಪದ್ಧತಿಗಳು ಜಾರಿಗೆ ಬಂದಿವೆ.

ನಮ್ಮ ದೇಶದಲ್ಲಿ ಅನೇಕ ಜನ, ಭಾಷೆ, ಸಂಸ್ಕೃತಿಗಳಿರುವಂತೆ ಅನೇಕ ವೈದ್ಯಪದ್ಧತಿಗಳು ತಲೆ ಎತ್ತಿದವು. ಅವುಗಳೆಲ್ಲವುಗಳ ಮೂಲ ಗುರಿ ಮಾತ್ರ–ಆರೋಗ್ಯರಕ್ಷಣೆ ಹಾಗೂ ರೋಗನಿವಾರಣೆ. ಆದ್ದರಿಂದ ಇವುಗಳಲ್ಲಿ ಯಾವುದು ಒಳ್ಳೆಯದು ಹಾಗೂ ಯಾವುದು ಸಾಧಾರಣ ಎಂದು ಹೇಳುವುದೇ ಕಷ್ಟ. ಇಂದು ಭಾರತದಲ್ಲಿ ಪ್ರಮುಖವಾಗಿ ಆಯುರ್ವೇದ, ಅಲೋಪಥಿ, ಹೋಮಿಯೋಪಥಿ, ಸಿದ್ಧವೈದ್ಯ, ನಿಸರ್ಗಚಿಕಿತ್ಸೆ, ಯುನಾನಿ ಹೀಗೆ ಅನೇಕ ಪದ್ಧತಿಗಳು ರೂಢಿಯಲ್ಲಿವೆ. ಇವುಗಳಲ್ಲಿ ಆಯುರ್ವೇದ ವೈದ್ಯಪದ್ಧತಿ ಪ್ರಾಚೀನವಾದುದು. ಇವೆಲ್ಲ ಶಾಸ್ತ್ರಗಳು ರೋಗದ ಕಾರಣ, ಲಕ್ಷಣ, ನಿದಾನ (Diagnosis) ಈ ಮೊದಲಾದ ವಿಷಯಗಳನ್ನು ಹೇಳುವಾಗ ಮಾತ್ರ ಬಹಳ ಮತಭೇದವಿದ್ದಂತೆ ಕಾಣುವುದಿಲ್ಲ. ಆಯಾ ಪದ್ಧತಿಗಳ ಮೂಲ ಸಿದ್ಧಾಂತಗಳಿಗನುಸರಿಸಿ ಚಿಕಿತ್ಸೆ ಹೇಳುವಾಗ ಮಾತ್ರ ಸ್ವಲ್ಪ ಬದಲಾವಣೆ ಎನಿಸಬಹುದು. ಎಲ್ಲಾ ವೈದ್ಯಶಾಸ್ತ್ರಗಳೂ ಬೇರೆ ಶಾಸ್ತ್ರಗಳಲ್ಲಿದ್ದ ಉತ್ತಮ ತತ್ವ, ಔಷಧಿಗಳನ್ನು ತಮ್ಮವನ್ನಾಗಿಸಿಕೊಂಡು ಬೆಳೆಯುತ್ತ ಹೋಗುತ್ತವೆ. ಆದರೆ ಇಂದು ಪ್ರಚಲಿತವಿದ್ದ ಎಲ್ಲ ವೈದ್ಯ ವಿಜ್ಞಾನಗಳು ರೂಪಗೊಳ್ಳುವಲ್ಲಿ ದೇಶಿಯ ವೈದ್ಯದ ಪ್ರೇರಣೆ ಪಡೆದೆ ಬೆಳೆಯುತ್ತವೆ ಎಂದು ಹೇಳಬಹುದು.

ಆಧುನಿಕ ವೈದ್ಯಶಾಸ್ತ್ರಗಳು ಪಾರಂಪರಿಕ ಪ್ರಕೃತಿಯಲ್ಲಿ ದೊರೆಯುವ ಗಿಡಮೂಲಿಕೆ ಚಿಕಿತ್ಸೆಯ ಪ್ರಾಕೃತ ಸ್ವರೂಪದ ಸಾಂಸ್ಕೃತಿಕ ರೂಪ, ಗುಣಲಕ್ಷಣಗಳನ್ನು ಹೊಂದಿವೆ. ಉದಾಹರಣೆಗೆ ಪಾರಂಪರಿಕ ವೈದ್ಯದಂತೆ ಆಯುರ್ವೇದ ವಿಜ್ಞಾನವೂ ನೈಸರ್ಗಿಕ ಗಿಡಮೂಲಿಕೆಯ ಉಪಯೋಗದಿಂದ ರೋಗವನ್ನು ಗುಣಪಡಿಸಬಹುದಾದ ಪದ್ಧತಿಯಾಗಿದೆ. ಹೋಮಿಯೋಪತಿ ಕೂಡ ಗಿಡಮೂಲಿಕೆಗಳನ್ನು, ಲೋಹಪದಾರ್ಥಗಳನ್ನು ಚಿಕಿತ್ಸೆಗೆ ಬಳಸುತ್ತದೆ. ಯುನಾನಿಯು ಕೂಡ ಆಯುರ್ವೇದ ಪದ್ಧತಿಯನ್ನೇ ಹೋಲುತ್ತದೆ. ಅದೇ ರೀತಿ ಸಿದ್ದ ವೈದ್ಯವು ಲೋಹ ಬಳಕೆ ಮತ್ತು ಗಿಡಮೂಲಿಕೆಯ ಚಿಕಿತ್ಸೆಯನ್ನು ನೀಡುತ್ತದೆ. ಏಕೆಂದರೆ ಆಯುರ್ವೇದ ಮತ್ತು ಸಿದ್ದವೈದ್ಯಗಳು ಅನಾದಿಕಾಲದಿಂದಲೂ ಬೆಳೆದು ಬಂದಿರುವ ಪದ್ಧತಿಗಳು. ಇವುಗಳು ಸೃಷ್ಟಿಕಾಲದಿಂದಲೂ ಬಂದುದಾಗಿವೆ ಎಂಬುದಾಗಿ ಹೇಳಲಾಗುತ್ತದೆ. ಅಲ್ಲದೆ ಸಿದ್ದವೈದ್ಯ ಆಯುರ್ವೇದದ ಒಂದು ಭಾಗವಾಗಿ ಬೆಳೆದುಬಂದಿದೆ ಎಂದು ಹೇಳುವುದುಂಟು. ಈ ಎರಡೂ ಪದ್ಧತಿಯೂ ನಾಡೀ ಪರೀಕ್ಷೆಗೆ ಒತ್ತು ನೀಡಿ ದೇಹದೊಳಗಿನ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಕೇವಲ ಹತ್ತು ಮಾತ್ರ ಮುಖ್ಯವಾದವು ಮತ್ತು ಅದರಲ್ಲಿ ಮೂರು ಅತಿಮುಖ್ಯ ಎಂದು ಹೇಳುತ್ತಾರೆ. ಅಲ್ಲದೆ ಈ ಎರಡು ವೈದ್ಯಪದ್ಧತಿಗಳಲ್ಲಿ ಒಳ್ಳೆಯ ಆಹಾರ, ಯೋಗ ಮತ್ತು ನಿದ್ರೆ ಬಹುಮುಖ್ಯ ಹಾಗೂ ಎರಡರಲ್ಲಿಯೂ ಶಸ್ತ್ರ ಚಿಕಿತ್ಸೆಗೆ ಪ್ರಾಶಸ್ತ್ಯ ನೀಡಿದ್ದಾರೆ. ಈ ಎಲ್ಲಾ ಅಂಶಗಳು ಪಾರಂಪರಿಕ ವೈದ್ಯದಲ್ಲಿ ಇರುವಂತವುಗಳಾಗಿವೆ. ಆದ್ದರಿಂದ ಇವುಗಳು ಅದರ ಪ್ರೇರಣೆಯಿಂದಲೆ ಅಭಿವೃದ್ಧಿ ಹೊಂದಿವೆ ಎಂದು ಹೇಳಬಹುದು.

ಭಾರತೀಯ ಪರಂಪರೆಯಲ್ಲಿ ಅನೇಕ ವೈದ್ಯಶಾಸ್ತ್ರದ ಗ್ರಂಥಗಳು ಕಾಲಗರ್ಭದಲ್ಲಿ ಲೀನವಾಗಿರಬಹುದು. ಉಪಲಬ್ಧವಿರುವ ಹಲವು ಮಹತ್ವದ ಗ್ರಂಥಗಳು ಅತ್ಯಾಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನಗಳಿಗೆ ಹೊಸ ಪ್ರೇರಣೆಯನ್ನು, ಅಂತಃಚಕ್ಷುವನ್ನು ನೀಡುತ್ತಿವೆ. ಮಹೋನ್ನತ ಜ್ಞಾನವನ್ನು ಹುದುಗಿಸಿಕೊಂಡಿರುವುದು ವಿಜ್ಞಾನದ ಸಾಧನೆ. ಮುಂದುವರಿದಂತೆಲ್ಲ ನಮ್ಮ ಗಮನ ಗೌರವಗಳಿಗೆ ಪಾತ್ರವಾಗುತ್ತಿರುವುದು ಐತಿಹಾಸಿಕ ಸತ್ಯವಾಗಿದೆ. ಮಾನವ ಜೀವನದ ಮತ್ತು ದೇಹದ ಸೂಕ್ಷ್ಮ ಅಂಗೋಪಾಂಗಗಳ ಕಾರ್ಯವಿಧಾನಗಳನ್ನು ಅವುಗಳ ಬಹುಬಳಕೆಯಿಂದಾಗಿ ಅಥವಾ ಅವುಗಳ ಬಗ್ಗೆ ನಿರಂತರ ಗಮನ ಕೊಡದ ಕಾರಣದಿಂದಾಗಿ ಅವುಗಳಿಗೆ ಬಂದೊದಗುವ ವಿವಿಧ ಬಗೆಯ ನ್ಯೂನ್ಯತೆಗಳನ್ನು ಮತ್ತು ಅವುಗಳ ಪರಿಹಾರ ಕ್ರಮಗಳನ್ನು ಅದ್ಭುತವಾಗಿ ವಿಶ್ಲೇಷಿಸುವ ನಮ್ಮ ಪಾರಂಪರಿಕ ವೈದ್ಯಶಾಸ್ತ್ರವು ಅತ್ಯಂತ ಮಹತ್ವಪೂರ್ಣವಾದುದು. ಅದು ಮನುಷ್ಯ ಶರೀರ ರಚನೆಯಿಂದ ಹಿಡಿದು ರೋಗರಹಿತ ಬದುಕನ್ನು ನಡೆಸುವ ಬಗೆಗಿನ ವಿವರಗಳನ್ನು ಉಲ್ಲೇಖಿಸುತ್ತದೆ. ಶಿಶುಗಳ ಪಾಲನೆ, ಪೋಷಣೆ, ಸ್ತ್ರೀಯರ ರೋಗಗಳು, ಪ್ರಾಣಿಗಳ ಪೋಷಣೆ ಮುಂತಾದವುಗಳ ಕುರಿತು ನಮ್ಮ ಪ್ರಾಚೀನರು ಎಷ್ಟು ಸೂಕ್ಷ್ಮವಾಗಿ ಬದುಕನ್ನು ಕಂಡಿದ್ದರು ಎಂಬುದಕ್ಕೆ ಅನೇಕ ಸಾಕ್ಷಿಗಳಿವೆ. ದ್ರವ್ಯಗಳು, ದ್ರವ್ಯಗುಣಗಳು, ಔಷಧ ತಯಾರಿಕೆ, ಪಥ್ಯಕ್ರಮಗಳನ್ನು ಹೆಚ್ಚು ವೆಚ್ಚವಿಲ್ಲದೆ ಮನೆಯಲ್ಲಿಯೇ ಮಾಡಿಕೊಳ್ಳಬಹುದಾದ ಮನೆಮದ್ದುಗಳು, ರೋಗಕಾರಣ ಮುಂತಾದ ವಿಷಯಗಳಲ್ಲದೆ ಪ್ರತಿಯೊಂದಕ್ಕೂ ನಿಷ್ಣಾತ ವೈದ್ಯರನ್ನೇ ಅವಲಂಬಿಸದೆ ಮತ್ತು ಪ್ರತಿ ಪರಿಣಾಮವಿಲ್ಲದ ಸುಲಭ ಚಿಕಿತ್ಸೆಗಳನ್ನು ಸ್ವಂತವಾಗಿಯೇ ಮಾಡಿಕೊಳ್ಳಬಹುದಾದ ವಿಧಾನಗಳು ನಮ್ಮ ಪಾರಂಪರಿಕ ವೈದ್ಯದಲ್ಲಿ ಇವೆ. ಅವುಗಳನ್ನೆ ಇಂದು ವಿವಿಧ ವೈದ್ಯ ಪದ್ಧತಿಗಳಲ್ಲಿ ತಮ್ಮ ತತ್ವಗಳಿಗೆ ಅಳವಡಿಕೆ ಮಾಡಿಕೊಂಡು ಭಿನ್ನ ಸ್ವರೂಪದಲ್ಲಿ ಬಳಕೆ ಮಾಡಿಕೊಳ್ಳಲಾಗುತ್ತದೆ. ಉದಾಹರಣೆಗೆ;

ಇಂದ್ರಜಿತು ಮತ್ತು ಲಕ್ಷ್ಮಣನ ನಡುವಿನ ಯುದ್ಧದಲ್ಲಿ ಮೂರ್ಛೆ ಹೋದಾಗ ಲಂಕೆಯ ವೈದ್ಯ ಸುಷೇಣ ಸೂಚಿಸಿದ್ದು 'ಸಂಜೀವಿನಿ' ಸಸ್ಯ. ಲಕ್ಷ್ಮಣನನ್ನು ಉಳಿಸಿಕೊಳ್ಳಲು ಸಂಜೀವಿನಿ ಏಕೈಕ ಮಾರ್ಗ ಎಂದಾಗ ಹನಮಂತ ಸಂಜೀವಿನಿ ಹುಡುಕುತ್ತ ಸಂಜೀವಿನಿ ಪರ್ವತಕ್ಕೆ ಹೊಗಿ ಯಾವುದು ಸಂಜೀವಿನಿ ಎಂದು ತಿಳಿಯದೆ ಇಡೀ ಪರ್ವತವನ್ನೇ ಹೊತ್ತು ತಂದಿದ್ದು ರಾಮಾಯಣದ ಕಥೆ. ಸತ್ತವರನ್ನು ಬದುಕಿಸಬಲ್ಲ ಮಾಂತ್ರಿಕ ಶಕ್ತಿ ಸಂಜೀವಿನಿ ಸಸ್ಯಕ್ಕಿದೆ ಎನ್ನುವುದು ಪ್ರತೀತಿ. ರಾಮಾಯಣದಿಂದ ಪ್ರಚಲಿತವಾಗಿ ಇಂದಿನವರೆಗೂ ಇಡೀ ಜಗತ್ತಿನ ಜನರ ಬಾಯಲ್ಲಿ ಹಾಸುಹೊಕ್ಕಾಗಿ ಸಂಜೀವಿನಿಯ ಹುಡುಕಾಟ ನಿರಂತರ ಮುಂದುವರೆದಿದೆ. ಶಿರಿಸಿ ಅರಣ್ಯ ಕಾಲೇಜಿನ ಪ್ರಾ.ವಾಸುದೇವ, ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯದ ಪ್ರಾ.ಗಣೇಶಯ್ಯ ಹಾಗೂ ಪ್ರಾ.ಉಮಾಶಂಕರ ಕಳೆದ ಎರಡು ವರ್ಷಗಳಿಂದ ಸತತ ಅಧ್ಯಯನ ನಡೆಸಿ ಸಂಶೋದನೆಗೆ ಪೂರಕ ಅಂಶ ಕಲೆಹಾಕಿದ್ದಾರೆ"[7]. ಇಂದು ಅನೇಕ ರಾಷ್ಟ್ರಗಳಲ್ಲಿ ವಿವಿಧ ವೈದ್ಯಕೀಯ ಪ್ರಕಾರಗಳು ತಲೆ ಎತ್ತಿದರೂ ನಮ್ಮ ಪಾರಂಪರಿಕ ವೈದ್ಯಪದ್ಧತಿಯ ಕಡೆಗೆ ಮುಖ ಮಾಡಿರುವುದಕ್ಕೆ ಮೇಲಿನ ಉದಾಹರಣೆಯೆ ಸಾಕ್ಷಿ. ಇದರಿಂದ ತಿಳಿಯುವುದೇನೆಂದರೆ ನಮ್ಮ ಪಾರಂಪರಿಕ ವೈದ್ಯದ ಪ್ರಭಾವ ಎಂತಹದು ಎಂಬುದು.

ಹಾಗೆಯೇ ನಮ್ಮ ದೇಶಿ ವೈದ್ಯ ದೇವತೆ ಎಂದು ಕರೆಯುವ 'ಧನ್ವಂತರಿ' ಹೆಸರನ್ನು ಇಂದಿನ ಅಲೋಪಥಿ ವೈದ್ಯದ ಆಸ್ಪತ್ರೆ, ನರ್ಸಿಂಗ್‌ಹೋಮ್‌ಗಳಿಗೆ 'ಧನ್ವಂತರಿ' ಎಂದು ಹೆಸರಿಟ್ಟಿರುವುದನ್ನು

ದೇಶಾದ್ಯಂತ ಕಾಣಬಹುದು. "ಕಳೆದವಾರ ರಾಷ್ಟ್ರಪತಿ ಪ್ರತಿಭಾ ಪಾಟೀಲ್ ಅವರು ಪಟ್ನಾ ನಗರಕ್ಕೆ ಬೇಟಿ ನೀಡಿದ್ದು ಆ ನಗರದ ಮಹಾವೀರ ಕ್ಯಾನ್ಸರ್ ಆಸ್ಪತ್ರೆಯ ಎದುರಿದ್ದ 'ಧನ್ವಂತರಿ'ಯ ಪ್ರತಿಮೆಗೆ ನಮಿಸಿದ್ದನು ಟೀವಿಯಲ್ಲಿ ತೋರಿಸಲಾಯಿತು"[೨]. ಈ ಮೇಲಿನ ಸಂಗತಿಯನ್ನು ಗಮನಿಸಿದಾಗ ನಮ್ಮ ಪಾರಂಪರಿಕ ವೈದ್ಯ ಪದ್ಧತಿಯ ಅಂಶಗಳನ್ನು, ತತ್ವಗಳನ್ನು ಆಲೋಪಥಿ ವೈದ್ಯಪದ್ಧತಿಯಲ್ಲಿಯೂ ಅಳವಡಿಸಿಕೊಂಡಿರುವುದು ತಿಳಿಯುತ್ತದೆ. ಅಲ್ಲದೆ ನಾಡೀ ಪರೀಕ್ಷೆಯನ್ನು ಕುರಿತು ನಮ್ಮ ದೇಶಿ ವೈದ್ಯಪದ್ಧತಿಯ "ನಿರ್ದಿಷ್ಟವಾದ ಮೂರು ಸ್ಥಾನಗಳ ನಾಡೀಗತಿಗಳಲ್ಲಿ ಭೇದ ಉಂಟೋ, ಇಲ್ಲವೋ ಎಂಬುದನ್ನು ನಿಃಸಂಶಯವಾಗಿ ಗೊತ್ತು ಮಾಡಲಿಕ್ಕೆ ಪಾಶ್ಚಾತ್ಯ ಅಲೋಪಥಿ ವೈದ್ಯ ಪದ್ಧತಿಯಲ್ಲಿ ಈಗ ಬಹಳ ಸುಲಭವಾದ ಯುಕ್ತಿ ಉಂಟು. ನಾಡಿಯು ತನ್ನ ಗತಿಯನ್ನು ಕಾಗದದ ಮೇಲೆ ಗೀಚಿ ತೋರಿಸುವ ಹಾಗಿನ 'ಸ್ಪಿಗ್ಮೊಗ್ರಾಫ್' ಎಂಬ ಯಂತ್ರವನ್ನು ನಿರ್ಮಾಣ ಮಾಡಿರುತ್ತಾರೆ. ನಾಡಿಯು ಸ್ಪಷ್ಟವಾಗಿ ಕಾಣುವ ಸ್ಥಾನದಲ್ಲಿ ಆ ಯಂತ್ರವನ್ನು ಇರಿಸಿ, ಅದು ಗೀಚಿ ತೋರಿಸುವ ನಾಡಿಯ ನಾನಾ ಪ್ರಕಾರವಾದ ಗತಿಭೇದಗಳನ್ನು ಪರೀಕ್ಷಿಸಿ ವಿಚಾರ ಮಾಡಿದ್ದಾರೆ. ಅದೇ ರೀತಿಯಾಗಿ ಆ ಯಂತ್ರವನ್ನು ಹೆಬ್ಬೆಟ್ಟಿನ ಮೂಲದ ಕೆಳಗಿನ ಮೂರು ನಾಡೀ ಸ್ಥಾನಗಳಲ್ಲಿ ಇಟ್ಟು, ಲಬ್ಧವಾಗುವ ಲಿಪಿಗಳನ್ನು ಹೋಲಿಸಿ ನೋಡಿದರೆ ಆಯುರ್ವೇದಿಯ ನಾಡೀ ಶಾಸ್ತ್ರದ ತಥ್ಯವು ಯಥಾವತ್ತಾಗಿ ಕಂಡುಬರುವದು"[೩] ಎಂದು ಹೇಳಲಾಗಿದೆ.

ಹಸಿರು ಆಯುರ್ವೇದ ಪದ್ಧತಿಯ ಉಸಿರು. ಹಸಿರು ಸೊಪ್ಪು ತರಕಾರಿಗಳು ಧಾನ್ಯಗಳು ಮತ್ತು ಕಾಳುಗಳು ಪರಿಪೂರ್ಣ ಆರೋಗ್ಯಕ್ಕೆ ಸಹಕಾರಿ ಎನ್ನುವುದು ಸತ್ಯ. ಇದು ಪಾರಂಪರಿಕ ಹಾಗೂ ಆಧುನಿಕ ವೈದ್ಯಪದ್ಧತಿಗಳೆರಡರಲ್ಲೂ ಬಲವಾಗಿ ಬೇರೂರಿದೆ. ಇವು "ಕೆ ವಿಟಮಿನ್"ನ ಕೊರತೆಯನ್ನು ನೀಗಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ರಕ್ತ ಹೆಪ್ಪುಗಟ್ಟುವುದಕ್ಕೆ ರಕ್ತಸ್ರಾವ ತಡೆಯುವುದಕ್ಕೆ ಕೆ-ವಿಟಮಿನ್ ಅತ್ಯವಶ್ಯ. ಹಸಿ ತರಕಾರಿಗಳಲ್ಲಿ ಮತ್ತು ನಿಂಬೆ, ಕಿತ್ತಳೆ, ಮೊಸಂಬಿ ಮುಂತಾದ ಹಣ್ಣುಗಳು ಸಿ-ವಿಟಮಿನ್ ಒದಗಿಸಲು ಸಹಕಾರಿ. ಹೀಗೆ ಮೇಲ್ಕಾಣಿಸಿದ ಸಸ್ಯಮೂಲ ಆಹಾರ ಪದಾರ್ಥಗಳೆಲ್ಲವೂ ದೇಹಕ್ಕೆ ಬೇಕಾಗುವ ಪೋಷಕಾಂಶಗಳನ್ನು ಒದಗಿಸಲು ಇಂದಿಗೂ ಪರಿಷ್ಕೃತ ರೂಪದಲ್ಲಿ ಬಳಕೆಯಾಗುತ್ತಿರುವುದು ಗಮನಾರ್ಹ ಸಂಗತಿ.

ಪ್ರಾಣಿ ಮೂಲ ಆಹಾರ ಹಾಗೂ ಔಷಧಿ ಪದ್ಧತಿಗಳು ಪಾರಂಪರಿಕ ವೈದ್ಯ ಪದ್ಧತಿಯಲ್ಲಿ ಇರುವುದು ಗಮನಿಸುವಂಥದ್ದು. ಋತುಮಾನಕ್ಕನುಗುಣವಾಗಿ ಪ್ರಾಣಿಮೂಲ ಆಹಾರ ಹಾಗೂ ಔಷಧಿ ಸೇವನೆಯ ವಿಧಾನವನ್ನು ಅದು ತಿಳಿಸುತ್ತದೆ. ಆಧುನಿಕ ವೈದ್ಯ ಪದ್ಧತಿಯಲ್ಲೂ ಕೂಡ "ಎ ಜೀವಸತ್ವದ" ಕೊರತೆಯನ್ನು ನೀಗಿಸಿಕೊಳ್ಳಲು ಹಾಲು, ಮೊಟ್ಟೆ, ಮಾಂಸ ಮುಂತಾದ ಪ್ರಾಣಿಮೂಲ ಆಹಾರ ಪಿತ್ತಜನಕಾಂಗ ಔಷಧಿಗಳ ಬಳಕೆಯನ್ನು ಹೇಳಲಾಗುತ್ತದೆ. ಇದೂ ಅಲ್ಲದೆ ಕ್ಯಾರೆಟ್ಟು ಹಸಿರು ಮತ್ತು ಹಳದಿ ತರಕಾರಿಗಳು, ಹಣ್ಣುಗಳಲ್ಲಿ ಹೇರಳವಾಗಿರುವ 'ಬೀಟಾ ಕ್ಯಾರೋಟಿನ್' ಎಂಬ ಸಂಯುಕ್ತದಿಂದ ನಮ್ಮ ದೇಹವು ಎ ವಿಟಾಮಿನನ್ನು ತಯಾರಿಸಿಕೊಳ್ಳತ್ತದೆ. ಅಲ್ಲದೆ ಇವುಗಳಲ್ಲಿ ಎ.ಬಿ.ಸಿ. ಜೀವಸತ್ವಗಳು, ಮೆಗ್ನಿಸಿಯಂ ಕ್ಯಾಲ್ಸಿಯಂ ಮುಂತಾದ ಖನಿಜಾಂಶಗಳೂ ದೊರಕುತ್ತವೆ.

ಶೇಂಗಾಬೀಜ, ಎಳ್ಳು, ಹುಚ್ಚೆಳ್ಳು ಇತ್ಯಾದಿ ಖಾದ್ಯ ಎಣ್ಣೆ ಬೀಜಗಳಲ್ಲಿ ಇ–ವಿಟಮಿನ್ ಅಂಶ ಇರುತ್ತದೆ. ಇ–ವಿಟಮಿನ್ನು ಅವಶ್ಯಕ ಕೊಬ್ಬು ಆಮ್ಲಗಳು ಮನುಷ್ಯ ದೇಹದಲ್ಲಿ ನಾಶವಾಗದಂತೆ ರಕ್ಷಣೆ ನೀಡುತ್ತದೆ. ಪಾರಂಪರಿಕ ವೈದ್ಯದಲ್ಲಿ ಮೇಲ್ಕಾಣಿಸಿದ ಖಾದ್ಯ ಎಣ್ಣೆ ಬೀಜಗಳನ್ನು ಜನನಾಂಗಗಳ ಹಾಗೂ ನರಗಳ ಅನೇಕ ಚಟುವಟಿಕೆಗಳಿಗೆ ಮತ್ತು ಗಾಯದ ಕಲೆಗಳು ಮಾಯುವುದಕ್ಕೆ ಅವಶ್ಯವಾಗಿ ಇವನ್ನ ಬಳಸುತ್ತಾರೆ. ಇ–ವಿಟಮಿನ್ನಿನ ಕೊರತೆಯಿದ್ದಾಗ, ಷಂಡತನ, ಬಂಜೆತನ, ಮತ್ತು ಜನನಾಂಗಗಳ ತೊಂದರೆ ಉಂಟಾಗುತ್ತದೆಂದು ಇದರ ನೀಗುವಿಕೆಗೆ ಇ–ವಿಟಮಿನ್ನಿನ ಅಂಶಗಳನ್ನು ಹೊಂದಿರುವ ಶೇಂಗಾಬೀಜ, ಎಳ್ಳು ಹುಚ್ಚೆಳ್ಳುಗಳನ್ನು ಬಳಸುವುದು ಹೆಚ್ಚು ಆರೋಗ್ಯಕರವೆಂದು ಆಧುನಿಕ ವೈದ್ಯಪದ್ಧತಿಯು ಹೇಳುತ್ತದೆ.

ಪಾರಂಪರಿಕ ವೈದ್ಯದಲ್ಲಿ ವಿವಿಧ ರೋಗಗಳಿಗೆ ವಿವಿಧ ರೀತಿ ಸಾಂಬಾರು, ಹುಳಿ ಹಾಗೂ ತವೆಗಳ ಸೇವನೆ ಒಳ್ಳೆಯದು ಎಂದು ಹೇಳುತ್ತದೆ. ಉದಾಹರಣೆಗೆ ಅಜೀರ್ಣಕ್ಕೆ ಶುಂಠಿ ಅಥವಾ ಹುಣಸೆ ಹಣ್ಣಿನಿಂದ ತಯಾರಿಸಿದ ತಂಬೂಳಿ ಒಳ್ಳೆಯದು. ನೆಗಡಿಗೆ ಹುರುಳಿ ಕಟ್ಟಿನ ಸಾರು ಮತ್ತು ಪಲ್ಯ ಒಳ್ಳೆಯದು ಇತ್ಯಾದಿ, ಆಧುನಿಕ ವೈದ್ಯದಲ್ಲೂ ಕೂಡ ನೆನೆಹಾಕಿದ ಕಾಳು ಮತ್ತು ಸೊಪ್ಪು ತರಕಾರಿಗಳಿಂದ ಸಾರು ತಯಾರಿಸಿ ಸೇವಿಸಿದರೆ ಆಸ್ತಮ, ನೆಗಡಿ, ಮೂತ್ರ ಜನಕಾಂಗದ ಕಾಯಿಲೆಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬಹುದಾಗಿದೆ ಎಂದು ಹೇಳಲಾಗುತ್ತದೆ.

ವ್ಯತ್ಯಾಸ ಇಷ್ಟೆ ಪಾರಂಪರಿಕ ವೈದ್ಯ ಬಳಸುವ ಸೊಪ್ಪು, ತರಕಾರಿ, ಹಣ್ಣು–ಕಾಯಿ, ಗಡ್ಡೆ–ಗೆಣಸು, ಧಾನ್ಯಗಳು ಹೆಚ್ಚೆಚ್ಚು ಕತ್ತರಿಸಿದ, ಕುದಿಸಿದ್ದನ್ನು ಬಳಸಲು ಬಯಸುತ್ತದೆ. ಹಣ್ಣುಗಳ ರಸ ಕುಡಿಯುವುದಕ್ಕಿಂತ ತಿಂದರೆ ನಾರುಗಳು ಹಾಗೂ ಖನಿಜಾಂಶಗಳು ಕೂಡ ಹೆಚ್ಚಿನ ಪ್ರಮಾಣದಲ್ಲಿ ದೊರಕುತ್ತವೆ. ಇದನ್ನ ಸೊಪ್ಪು, ತರಕಾರಿ ಹಾಗೂ ಧಾನ್ಯಗಳಿಗೂ ಅನ್ವಯಿಸಬಹುದು. ಆದರೆ ಆಧುನಿಕ ವೈದ್ಯಪದ್ಧತಿ ಎಲ್ಲವನ್ನು ರಸ, ಪುಡಿ, ಗುಳಿಗೆ ಹಾಗೂ ಮುಲಾಮುಗಳ ರೂಪದಲ್ಲಿ ಸಂಸ್ಕರಿಸಿ ಬಳಸಲು ಪ್ರೇರೇಪಿಸುತ್ತದೆ. ಹೀಗೆ ಬಳಸುವುದೇ ಯೋಗ್ಯ ಎನ್ನುವ ಮನಸ್ಥಿತಿಯನ್ನು ನಿರ್ಮಿಸಿ ಪಾರಂಪರಿಕ ವೈದ್ಯವನ್ನು ನಿರ್ಲಕ್ಷಿಸುವಂತೆ ಮಾಡಿಬಿಟ್ಟಿದೆ. "ಹಿಂದಣ ಹೆಜ್ಜೆಯನರಿಯದೆ ಮುಂದಣವನರಿಯಲಾಗದು" ಎನ್ನುವ ಅಲ್ಲಮನ ಮಾತಿನಂತೆ ಪಾರಂಪರಿಕ ವೈದ್ಯದ ತಳಹದಿಯ ಮೇಲೆಯೇ ಆಧುನಿಕ ವೈದ್ಯಪದ್ಧತಿ ತನ್ನೆಲ್ಲ ಆಧುನಿಕ ಆವಿಷ್ಕಾರಗಳನ್ನು ಮಾಡಿಕೊಂಡಿರುವುದು ಸರ್ವವೇದ್ಯ. ಎರಡನ್ನು ಅಭಿನ್ನವಾಗಿ ನೋಡಲಾಗದು.

ಪಾರಂಪರಿಕ ವೈದ್ಯವು ಜಗತ್ತಿನ ಆರೋಗ್ಯ ಕ್ಷೇತ್ರದಲ್ಲಿ ಹೊಸ ಅವಿಷ್ಕಾರ, ಹೊಸ ಚಿಂತನೆ, ಹೊಸ ಆಯಾಮ, ಹೊಸ ವಿವರಣೆ ನೀಡುತ್ತಲೆ ಮುನ್ನೆಡೆಯುತ್ತಿದೆ. ಹೆಚ್ಚಾಗಿ ತನ್ನ ಸಿದ್ಧಾಂತಗಳನ್ನು ಪುಷ್ಟೀಕರಿಸುತ್ತದೆ. ಹೇಗೆಂದರೆ ಪಾರಂಪರಿಕ ವೈದ್ಯಶಾಸ್ತ್ರ ಹೇಳುವ ಪಥ್ಯಕ್ರಮವು ಇಂದೂ ಜಾರಿಯಲ್ಲಿದೆ. ಹಾಗೂ ಹೆಚ್ಚು ಜನಪ್ರಿಯವಾಗುತ್ತಿದೆ. ಸಹಸ್ರಾರು ವರುಷಗಳ ಹಿಂದೆಯೇ 'ಬಿಸಿನೀರು' ಕುಡಿಯುವುದರ ಮಹತ್ವನ್ನು ಕಂಡುಕೊಂಡ ವೈದ್ಯರ ಚಿಂತನೆ ಇಂದಿಗೂ ಪ್ರಸ್ತುತ. ಇದನ್ನು ಆಧುನಿಕ ವೈದ್ಯಶಾಸ್ತ್ರಗಳೆಲ್ಲವೂ ಅಳವಡಿಸಿಕೊಂಡಿವೆ. ಪಥ್ಯಕ್ರಮವನ್ನು ಇಂದು 'ಫಾಸ್ಟಿಂಗ್ ಥೆರಫಿ' ಎಂದು ಹೇಳಲಾಗುತ್ತದೆ. ಪಥ್ಯದಿಂದ ವ್ಯಾಯಾಮ, ನಿದ್ರೆ, ಮೈಥುನ ಮೊದಲಾದ ವಿಹಾರಗಳಿಗೂ ಆಚಾರ ವಿಚಾರಗಳಿಗೂ ಅನ್ವಯ ಆಗುತ್ತದೆ.

ವೈದ್ಯನಿಗಿರಬೇಕಾದ ಅರ್ಹತೆಗಳನ್ನು ಕುರಿತು ಪ್ರಾಚೀನ ವೈದ್ಯಶಾಸ್ತ್ರದಂತೆ ಆಧುನಿಕ ವೈದ್ಯಪದ್ಧತಿಗಳು ಕೂಡ; 'ವೈದ್ಯನಿಗೆ ತನ್ನ ಶಾಸ್ತ್ರದಲ್ಲಿ ಪಾಂಡಿತ್ಯವಿರಬೇಕು, ವ್ಯಾಪಕ ಅನುಭವವಿರಬೇಕು, ಪ್ರಾಯೋಗಿಕ ದಕ್ಷತೆ ಇರಬೇಕು, ಪ್ರಾಭಾವಶಾಲಿಯಾಗಿರಬೇಕು, ಅನೇಕ ವಿಧಗಳಲ್ಲಿ ಅವನು ತಯಾರಿ ಮಾಡಿಕೊಂಡಿರಬೇಕು, ರಚನೆ ತಿಳಿಯುವಂತಿರಬೇಕು, ಪಾರಚಾರಿಕನು ಉಪಚರಿಸುವ ರೀತಿ ನೀತಿಯನ್ನು ಅರಿಯಬೇಕು, ದಕ್ಷನಾಗಿರಬೇಕು, ಅನುರಾಗಿಯಾಗಿರಬೇಕು, ಶುಚಿಯಾಗಿರಬೇಕು, ರೋಗಿಯ ಸ್ಮರಣಶಕ್ತಿ ಹೊಂದಿದವನಾಗಿರಬೇಕು, ವಿದೇಯನಾಗಿರಬೇಕು, ಧೈರ್ಯವಂತನಾಗಿರಬೇಕು ಎಂತೆಲ್ಲ ಹೇಳುತ್ತಿವೆ. ಈ ಕ್ರಮವು ನಮ್ಮ ಪಾರಂಪರಿಕ ·ವೈದ್ಯಪದ್ಧತಿಯಿಂದಲೇ ಮುಂದುವರಿದುಕೊಂಡು ಬಂದಿದೆ.

ಅಲೋಪಥಿ ವೈದ್ಯಪದ್ಧತಿಯೊಂದನ್ನು ಬಿಟ್ಟು, ಆಯುರ್ವೇದ ಯುನಾನಿ, ಹೋಮಿಯೋಪತಿ ಸಿದ್ಧ, ಪ್ರಕೃತಿಚಿಕಿತ್ಸೆ ಪ್ರಕಾರಗಳೆಲ್ಲವೂ ಎಲ್ಲರಿಗೂ ತಿಳಿದಂತೆ ಪ್ರಕೃತಿದತ್ತವಾದ ಗಿಡಮೂಲಿಕೆಗಳನ್ನು ಬಳಸಿಕೊಂಡು ಔಷಧವನ್ನು ತಯಾರಿಸಕೊಳ್ಳುತ್ತವೆ. ಅದೇ ರೀತಿ ಅಲೋಪಥಿಯಲ್ಲಿಯೂ ಸಸ್ಯಜನ್ಯ ಪದಾರ್ಥಗಳನ್ನು ಬಳಸಿಕೊಂಡು ಕೆಮಿಕಲ್‌ಗಳನ್ನು ಸೇರಿಸಿ ಫಾರ್ಮುಲಾ ಕಂಡು ಹಿಡಿಯುವ ಮೂಲಕ ಔಷಧಗಳನ್ನು ತಯಾರಿಸಲಾಗುತ್ತದೆ ಎಂದು ವೈದ್ಯ ತಜ್ಞರ ಅಭಿಪ್ರಾಯ.

ನಿಸರ್ಗದಿಂದ ನೇರವಾಗಿ ಪಡೆದ ಔಷಧಗಳು ಮನುಷ್ಯನ ದೇಹದಲ್ಲಿ ಪ್ರತಿಬಂಧಕ ಶಕ್ತಿಯನ್ನು ಉಂಟುಮಾಡಿ ರೋಗವನ್ನು ನಿಯಂತ್ರಿಸುತ್ತವೆ. ಸಸ್ಯಜನ್ಯ ಔಷಧೋಪಚಾರಗಳೆಲ್ಲವೂ ರೋಗಿಯ ದೈಹಿಕ ಸಾಮರ್ಥ್ಯ ವಯಸ್ಸಿಗನುಗುಣವಾಗಿ ಔಷಧ ನೀಡುವುದರಿಂದ ಅಡ್ಡ ಪರಿಣಾಮಗಳು ಉಂಟಾಗುವುದಿಲ್ಲ. ಪ್ರಕೃತಿ ಪಂಚಭೂತಗಳಿಂದ ಕೂಡಿರುವುದರಿಂದ ಮನುಷ್ಯನ ದೇಹದಲ್ಲಿಯು ಪಂಚಭೂತಗಳಿಂದ ಅಂಗಾಂಗಗಳ ರಚನೆಯಾಗಿರುವ ಕಾರಣ ಸಮತೋಲನ ಕಾಪಾಡುತ್ತವೆ. ಆದರೆ ಅಲೋಪಥಿ ವೈದ್ಯ ವಿಧಾನದಲ್ಲಿ ರಾಸಾಯನಿಕಗಳನ್ನು ಬಳಸಿ ನಿರ್ದಿಷ್ಟ ಪ್ರಮಾಣದ ಔಷಧಗಳನ್ನು ನೀಡುವುದರಿಂದ ವೈಯಕ್ತಿಕ ಭಿನ್ನತೆ ಇರುವ ದೈಹಿಕ ಸಾಮರ್ಥ್ಯದಲ್ಲಿ ಅಡ್ಡ ಪರಿಣಾಮ ಉಂಟಾಗಲು ಸಾಧ್ಯವುಂಟು. ಒಟ್ಟಾರೆ ಪಾರಂಪರಿಕ ವೈದ್ಯದ ತಿಳುವಳಿಕೆಯು ಒಂದು ಹಂತದಲ್ಲಿ ಪ್ರಾರಂಭವಾಗಿ ಮುಕ್ತಾಯವಾಗುವುದಲ್ಲ. ಅದೊಂದು ಅವಿರತವಾಗಿ ಹರಿಯುವ ಪ್ರವಾಹ. ಇದು ಶಾಶ್ವತ ಕೂಡ. ಏಕೆಂದರೆ ಪ್ರಕೃತಿ ನಿಯಮವು ಶಾಶ್ವತ ಮತ್ತು ಗಿಡಮೂಲಿಕೆಗಳೂ ನಿತ್ಯವಾದುವು. ಆದ್ದರಿಂದ ಇವುಗಳು ಸದಾ ವಿಕಾಸವಾಗುತ್ತಲೇ ಇರುವುದರಿಂದ ವಿವಿಧ ವೈದ್ಯಕೀಯ ಪದ್ಧತಿಗಳ ಪ್ರಕ್ರಿಯಿಗೆ ಅವಿಭಾಜ್ಯ ಅಂಗವಾಗಿದೆ.

### ೬.೨. ಸಾಂಪ್ರದಾಯಿಕ ನಂಬಿಕೆಗಳು ಮತ್ತು ವೈದ್ಯಶಾಸ್ತ್ರದ ನಡುವಿನ ಸಂಬಂಧ

ಸಾಂಪ್ರದಾಯಿಕ ನಂಬಿಕೆಗಳು ಜನಸಮುದಾಯದ ಬದುಕಿನೊಂದಿಗೆ ಏಕರಸವಾಗಿರುವ ಬಹುಮುಖ್ಯ ಅಂಶಗಳು. ಪ್ರಾಚೀನ ಸಂಸ್ಕೃತಿ ವಿಶಿಷ್ಟ ಅನಿಸಿಕೊಳ್ಳುವುದು ಅಲ್ಲಿ ಜನಮನದಲ್ಲಿ ನೆಲೆನಿಂತ ಮೂಲಭೂತ ಸಾಂಪ್ರದಾಯಿಕ ನಂಬಿಕೆಗಳ ಆಧಾರದ ಮೇಲೆಯೇ ನಂಬಿಕೆಗಳು ಅಲ್ಲಲ್ಲಿ ಜನಪದರಲ್ಲಿ ಆಳವಾಗಿ ಅನಾದಿ ಕಾಲದಿಂದಲೂ ಬೇರೂರಿರುತ್ತವೆ. ಮನುಕುಲ ನಡೆದು ಬಂದ ಹಾದಿಯ ಹೆಜ್ಜೆ ಗುರುತುಗಳನ್ನು ಪರಿಶೀಲಿಸಿದರೆ ನಾಗರಿಕತೆಯ ಪೂರ್ವದ ಸ್ಥಿತಿಗಳು ಒಂದೊಂದೇ ನಿಚ್ಚಳವಾಗಿ ಅನಾವರಣಗೊಳ್ಳುತ್ತವೆ. ಮಾನವ

ಚರಿತ್ರೆಯ ರೂಕ್ಷ ರೂಪಗಳಲ್ಲೇ ಸಾಂಪ್ರದಾಯಿಕ ನಂಬಿಕೆಗಳ ಪ್ರಗಲ್ಭ ಆವಿಷ್ಕಾರ ಕೂಡ ಅಡಗಿದೆ. ಆದಿಮಾನವನ ಕಾಲದಿಂದಲೂ ಅವನು ಬದುಕಿದ ಬಗೆ ಬಗೆಗಳಲ್ಲೂ ಅವನ ಅಂದಂದಿನ ನಡವಳಿಕೆಗಳ ಪಳೆಯುಳಿಕೆಗಳ ಸ್ಥಿತಿಗತಿಗಳೇ ಪಲ್ಲವಿಸಿವೆ. ಅಂದಿನ ಹಳ್ಳಿಗನೇ ಇಂದಿನ ಪಟ್ಟಣಿಗ ಕೂಡ ಪರಂಪರಾಗತವಾಗಿ ರೂಡಿಸಿಕೊಂಡು ಬಂದಿರುವ ನಂಬಿಕೆಗಳು ಮಾನಸಿಕ ಸ್ಥಿತಿಯ ಒಂದು ಪರದಾರೆ. ಮಾನಸಿಕ ಸ್ತರದಲ್ಲಿ ಆಳವಾಗಿರುವ ನಂಬಿಕೆಗಳು ಸಾಂಸ್ಕೃತಿಕ ಆವರಣಕ್ಕೆ ಬಿದ್ದು ಸಾಮಾಜಿಕ ಚೌಕಟ್ಟನ್ನು ಪಡೆದು ಕ್ರಿಯಾಶೀಲವಾಗಿ ಆಚರಣೆಗಳಿಗೆ ಹಿಗ್ಗುತ್ತವೆ.

ನ್ನಮ ಪಾರಂಪರಿಕ ವೈದ್ಯಶಾಸ್ತ್ರ ವಿಸ್ತಾರವೂ ವ್ಯಾಪಕವೂ ಆದ ವಿಜ್ಞಾನ. ನಮ್ಮ ಪೂರ್ವಜರು ಈ ಶಾಸ್ತ್ರವನ್ನು ತಮ್ಮ ಸುತ್ತಮುತ್ತಲವರ ಮನಸ್ಸಿನ ದೇಹದ ರೋಗರುಜಿನಗಳನ್ನು ವಾಸಿಮಾಡಲು ಜೀವನದ ದೀರ್ಘಾನುಭವ ಹಾಗೂ ನಂಬಿಕೆಗಳ ಆಧಾರದ ಮೇಲೆ ಕಟ್ಟಿಕೊಂಡರು. ಈ ನಮ್ಮ ದೇಶೀಯ ವೈದ್ಯಕ್ಕೂ ನಂಬಿಕೆಗಳಿಗೂ ಅವಿನಾಭಾವ ಸಂಬಂಧವಿದೆ ಎಂಬುದನ್ನು ಕುರಿತು ಎಸ್.ಬಿ.ರವಿಕಲಾ ಅವರು ಅಭಿಪ್ರಾಯಪಡುವುದು ಹೀಗೆ; "ಕೆಲವು ಬಾರಿ ವೈದ್ಯನ ಬಗೆಗಿರುವ ನಂಬಿಕೆಯಿಂದಾಗಿ ಬೇರಾರೂ ವಾಸಿಮಾಡದಿದ್ದ ಖಾಯಿಲೆ ಈತ ಮುಟ್ಟಿದರೂ ಸಾಕು ವಾಸಿಯಾಗುತ್ತದೆ. ಕಾಕತಾಳೀಯವೆಂಬಂತೆ ಇಂತಹ ಘಟನೆಗಳಲ್ಲಿ ಖಾಯಿಲೆಗಳು ವಾಸಿಯಾದರೂ, ವ್ಯಕ್ತಿಯೊಬ್ಬನ ನಂಬಿಕೆ ಸಮಷ್ಟಿಗೆ ತಿಳಿದುಬಂದು ಅವನು ಕೊಟ್ಟ ನೀರೇ ಔಷಧಿಯಾಗಿ ಚಲಾವಣೆಗೆ ಬರುವುದೂ ಉಂಟು. ಇದರ ಪರಿಣಾಮವಾಗಿ ಕೆಲವೊಮ್ಮೆ ರೋಗಿ ಸತ್ತರೂ ಆಯುಷ್ಯ ತೀರಿತು ಎಂದಾರೇ ಹೊರತು ವೈದ್ಯನ ಬಗೆಗೆ ಅಪನಂಬಿಕೆ ಪಡಲಾರರು"[೪]. ಇಂದಿಗೂ ನಂಬಿಕೆಗಳಿರದ ಮನುಕುಲವೇ ಇಲ್ಲ ಎಂದು ತಿಳಿಯಬೇಕಾಗುತ್ತದೆ. ಗ್ರಾಮೀಣ, ನಗರ ಪ್ರದೇಶಗಳಲ್ಲಿ ನಾನು, ನೀವು, ಅವನು, ಇವನು ಎನ್ನದೆ ಪ್ರತಿಯೊಬ್ಬರಲ್ಲೂ ಒಂದಲ್ಲ ಒಂದು ನಂಬಿಕೆ ಮನೆಮಾಡಿರುವುದುಂಟು. ಆದ್ದರಿಂದ ನಂಬಿಕೆಗಳಿಲ್ಲದ ನಾಡನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಕೆಲವು ಮೂಢ ನಂಬಿಕೆಗಳು ಅರ್ಥಹೀನ ಅನ್ನಿಸಬಹುದು, ಆದರೆ ಅವುಗಳ ಆಚರಣೆ ಹಿನ್ನಲೆ ತಲಸ್ಪರ್ಶಿಯಾಗಿ ತಿಳಿದರೆ ನಮ್ಮ ಅರಿವಿನ ಪರಿಧಿಯೇ ವಿಸ್ತಾರವಾಗುತ್ತದೆ.

ನಮ್ಮಲ್ಲಿ ಬಹಳ ನಂಬಿಕೆಗಳಿಗೆ ನಮ್ಮ ಧರ್ಮ ಇಂಬುಕೊಟ್ಟಿರುವುದೂ ಉಂಟು. ಸ್ನಾನ ಮಾಡಿದ ನಂತರವೇ ಶಾಸ್ತ್ರೋಕ್ತವಾಗಿ ದೈವಾರಾಧನೆ ಮಾಡಬೇಕೆಂಬುದು ಭಾರತೀಯರ ಧಾರ್ಮಿಕ ಜೀವನ ವಿಧಾನವನ್ನೇ ಅನುಸರಿಸಿದೆ, ಮತ್ತೆ ಹಲವು ನಂಬಿಕೆಗಳು ವೈಜ್ಞಾನಿಕ ರೀತಿಯಿಂದಲೂ ಸಾಧುವಾದವು. ಹೆಂಗಸರು ಕೆನ್ನೆಗೆ ಅರಿಶಿಣ ಹಚ್ಚಿಕೊಳ್ಳುವ ಪದ್ಧತಿಯನ್ನೇ ನೋಡಿದರೆ, ಇದು ಹೊರ ನೋಟಕ್ಕೆ ಮೂಢ ನಂಬಿಕೆಯಂತೆ ಕಂಡರೂ ಹೆಣ್ಣಿನ ಕೆನ್ನೆಯ ಮೇಲೆ ಕೂದಲು ಮೂಡುವುದರ ತಡೆಗಟ್ಟುವಿಕೆಯ ವೈದ್ಯಕೀಯ ತಂತ್ರವೇ ಇಲ್ಲಿದೆ, ಅರಿಶಿಣ ಹಚ್ಚಿಕೊಳ್ಳುವುದರಿಂದ ಚರ್ಮರೋಗವನ್ನು ನಿಯಂತ್ರಿಸಬಹುದು. ಅಷ್ಟೇ ಅಲ್ಲ ಚರ್ಮಕ್ಕೆ ಗುಣವು ಮತ್ತು ಕಾಂತಿಯನ್ನು ನೀಡುತ್ತದೆ. ಆದ್ದರಿಂದ ಈ ಸಾಂಪ್ರದಾಯಿಕ ನಂಬಿಕೆಗಳನ್ನು ವೈಜ್ಞಾನಿಕ ವಿಶ್ಲೇಷಣೆಗೂ ಒಳಪಡಿಸಿ ಅರ್ಥೈಸಲು ಸಾಧ್ಯ. ಮಾನವ ಜೀವನದ ಆಮೂಲಾಗ್ರ ಅಧ್ಯಯನ ಮಾಡಿದರೆ ನಂಬಿಕೆಗಳಿಲ್ಲದ ಸಮುದಾಯಗಳೇ ಇಲ್ಲ. ನಮ್ಮ ಬಾಳಿನಲ್ಲಿ ಅವು ಉಸಿರಂತೆ ಬೆರೆತಿವೆ, ನೆರಳಂತೆ ನಮ್ಮನ್ನು ಎಡೆಬಿಡದೆ ಅನುಸರಿಸಿವೆ. ಅವುಗಳ ವಿಶ್ಲೇಷಣೆಗೆ ತೊಡಗಿದರೆ ಆ ಬೃಹತ್ ವ್ಯಾಪಕತೆ ನಮ್ಮ ಕಣ್ಣು ಕುಕ್ಕುತ್ತದೆ.

ಯಾವ ನಾಡಿನ ಔನ್ನತ್ಯ ಅಲ್ಲಿಯ ಸಂಸ್ಕೃತಿಯ ಹಿರಿಮೆಯನ್ನು ಅವಲಂಬಿಸಿರುತ್ತದೆ. ಸಂಸ್ಕೃತಿಯ ಮೂಲ ಬೇರುಗಳು ಅಲ್ಲಿಯ ಜಾನಪದದಲ್ಲಿ ಆಳವಾಗಿ ಅನಾದಿ ಕಾಲದಿಂದಲೂ ಬೇರೂರಿರುತ್ತವೆ. ಜನಪದರ ಜೀವನ ಕ್ರಮದ ಬುಡವನ್ನು ಕಾಣದೆ ಹೋದರೆ ಅಲ್ಲಿನ ಜೀವಂತ ಸಂಸ್ಕೃತಿಯ ಕುಸುಮವನ್ನು ಮೆಚ್ಚಿಕೊಳ್ಳುವುದು ಕೇವಲ ತೋರಾಣಿಕೆಯ ಸೌಂದರ್ಯದ ಅಸ್ಪದವಾಗುತ್ತದೆ. ಬೇರುಗಳ ಪರಿ ಅರಿತರೆ ಹೂವಿನ ಅಂದ ಚಂದದ ವೈಶಿಷ್ಟ್ಯ ತನಗೆ ತಾನೇ ಮನವರಿಕೆಯಾಗುತ್ತದೆ. ಒಂದು ಜನಪದ ಸಂಸ್ಕೃತಿ ವಿಶಿಷ್ಟ ಅನ್ನಿಸಿಕೊಳ್ಳುವುದು ಅಲ್ಲಿ ಜಮಮನದಲ್ಲಿ ನೆಲೆ ನಿಂತು ಮೂಲಭೂತ ನಂಬಿಕೆಗಳ ಆಧಾರದ ಮೇಲೆಯೇ. ನಮ್ಮ ಸಾಂಪ್ರದಾಯಿಕ ನಂಬಿಕೆಗಳು ಬದುಕಿನ ಸೊಗಡನ್ನು ಸಾರಿ ಹೇಳುತ್ತವೆ. ಜಗತ್ತಿನಲ್ಲಿ ಎಲ್ಲಿಂದ ಎಲ್ಲಿಗೇ ಹೋಗಲಿ ನಂಬಿಕೆಗಳ ಪಾತಳಿಯೇ ಸಂಸ್ಕೃತಿಯ ಕೊನೆಯ ಪ್ರಾಥಮಿಕ ಘಟಕ"[೫]. ಎನ್ನುವ ದೊಡ್ಡ ರಂಗೇಗೌಡರ ಮಾತುಗಳು ನಮ್ಮ ವೈದ್ಯಶಾಸ್ತ್ರಕ್ಕೂ ಅನ್ವಯಿಸುತ್ತವೆ.

ಜನಪದ ಸಂಸ್ಕೃತಿಯ ಗಮನಾರ್ಹ ಸಂಗತಿ ಎಂದರೆ ಪ್ರತಿಯೊಂದು ಸಮಾಜದ ಪ್ರತಿಯೊಂದು ಕುಟುಂಬದ ಸದಸ್ಯರೂ ಸಹಜ ವೈದ್ಯರಾಗಿರುತ್ತಾರೆ. ತಕ್ಕಮಟ್ಟಿಗೆ ತುರ್ತು ಪರಿಸ್ಥಿತಿಗೆ ಪರಿಹಾರ ಕಂಡುಕೊಳ್ಳುವವರಾಗಿರುತ್ತಾರೆ. ಹಾವು, ಚೇಳು ಕಡಿದರೆ, ಚಿಕ್ಕಮುಟ್ಟ ಗಾಯಗಳಿಗೆ, ಕೆಮ್ಮು ನೆಗಡಿಯಂತಹ ಮಾಮೂಲಿ ಕಾಯಿಲೆಗಳಿಗೆ ತಮ್ಮದೇ ಆದ ಔಷಧಿಗಳನ್ನು ಉಪಯೋಗಿಸುತ್ತಾರೆ. ಈ ರೀತಿ ಮಾಡುವ ಔಷಧಿಗೆ ಬಗ್ಗದೆ ರೋಗ ಬಹಳ ದಿನ ಜಗ್ಗಿದರೆ ಊರಿನ ದೊಡ್ಡ ವೈದ್ಯನಿಗೋ ದೇವರಿಗೋ ಮೊರೆ ಹೋಗುತ್ತಾರೆ. ಶಕುನ ಕೇಳುತ್ತಾರೆ. ದೇವರಿಗೆ ತಾವು ಬಿಟ್ಟ ಹರಕೆ ಏನು? ಎಸಗಿದ ಪ್ರಮಾದವೇನು? ಎಂಬುದನ್ನು ಕೇಳಿ ತಿಳಿದುಕೊಂಡು ಅಂಥ ಹರಕೆಯನ್ನು ಸಲ್ಲಿಸಿ ವ್ರತವನ್ನು ಮಾಡಿ ಪೂಜೆಗಳನ್ನು ನೆರವೇರಿಸಿ ದೇವರನ್ನು ಸಂತೃಪ್ತಿಗೊಳಿಸುತ್ತಾರೆ. ಹೀಗೆ ತೃಪ್ತಿಗೊಂಡು ದೇವರು ತನ್ನ ರಕ್ಷಣೆಯನ್ನು ಮತ್ತೆ ಒದಗಿಸುತ್ತಾನೆ. ಆ ರೋಗ ಗುಣವಾಗುತ್ತದೆ"[೬]. ಎಂದು ದೇಶಿವೈದ್ಯ ಮತ್ತು ನಂಬಿಕೆಗಳಿಗಿರುವ ಸಂಬಂಧ ಕುರಿತು ಡಾ.ವೀರೇಶ ಬಡಿಗೇರ ಅವರು ಅಭಿಪ್ರಾಯ ಪಡುತ್ತಾರೆ.

ಈ ಸಂಬಂಧವಾದ ಕೆಲವು ನಂಬಿಕೆ ಸಂಪ್ರದಾಯಗಳನ್ನು ಇಲ್ಲಿ ನೋಡಬಹುದು, ಹಳ್ಳಿಗಳಲ್ಲಿ ಆಯಾ ಹಳ್ಳಿಯ ಸಂರಕ್ಷಣೆಗಾಗಿಯೇ ಕೆಲವು ಗ್ರಾಮದೇವತೆಗಳಿರುತ್ತವೆ. ಇವಕ್ಕೆ ಪ್ರತಿವರ್ಷ ಹಬ್ಬ ನಡೆಯುತ್ತದೆ. ಏನೋ ಕಾರಣದಿಂದಾಗಿ ಒಂದು ವರ್ಷ ಹಬ್ಬ ಮಾಡದಿದ್ದಾಗ ದೇವತೆಯ ಕೋಪದಿಂದಾಗಿ ಊರಿನ ಜನ ಮತ್ತು ದನಗಳಿಗೆ ರೋಗಗಳು ಕಾಣಿಸಿಕೊಳ್ಳುತ್ತವೆ ಎಂಬ ನಂಬಿಕೆಯಿದೆ. ಅಮ್ಮನ ಕೋಪವೇ ರೋಗಕ್ಕೆ ಕಾರಣವಾದುದರಿಂದ ಕೆಲವು ರೋಗಗಳಿಗೆ "ಅಮ್ಮ" ಎಂದೇ ಕರೆಯುತ್ತಾರೆ. ಕೆಲವು ರೋಗಗಳಲ್ಲಿ ಪ್ರತಿಯೊಂದಕ್ಕೂ ಒಬ್ಬೊಬ್ಬಳು ಅಮ್ಮನಿರುತ್ತಾಳೆ. ಪ್ಲೇಗಿನಮ್ಮ, ದಡಾರದಮ್ಮ, ಸಿಡಿಬಿನಮ್ಮ ಇತ್ತೀಚಿಗೆ ಏಡ್ಸಮ್ಮನು ಮೊದಲಾದ ರೋಗದ ಅಮ್ಮ ಪ್ರಮುಖರು. ಕಾಲರಾ ರೋಗಕ್ಕೆ ದುರ್ಗವ್ವನ ಬೇನೆ ಎಂದು ಕರೆಯಲಾಗುತ್ತದೆ. ಅಮ್ಮಗಳ ಮನಸ್ಸನ್ನು ಶಾಂತಿಗೊಳಿಸಲು ಮಾರಮ್ಮ, ಮಾಸ್ತಮ್ಮ, ಚೌಡಮ್ಮ, ದುರಗಮ್ಮ, ದ್ಯಾಮವ್ವ ಮೊದಲಾದ ದೇವತೆಗಳಿಗೆ ವರ್ಷಕ್ಕೆ ಒಂದು ಬಾರಿ ಅಥವಾ ಮೂರು ವರ್ಷಕ್ಕೆ ಒಂದು ಬಾರಿ ಹಬ್ಬ ಜಾತ್ರೆಯನ್ನು ಮಾಡುತ್ತಾರೆ. ಮಕ್ಕಳನ್ನು ಕಾಡುವ ಸುಂಕದಮ್ಮ (ಗಾಳೆಮ್ಮ)ನನ್ನು ಒಂದು ಹಳ್ಳಿಯ ಗಡಿಯಿಂದ (ಸೀಮೆ) ಮತ್ತೊಂದು ಹಳ್ಳಿಯ ಗಡಿ(ಸೀಮೆ)ಯವರೆಗೆ ಕೊಂಡೊಯ್ದು ಬಿಟ್ಟು ಬರುತ್ತಾರೆ.

ಸುಂಕು ಕಳಿಸುವುದು ಎಂದರೆ ಹಳೇಯ ಮೊರದಲ್ಲಿ ಪೊರಕೆ, ಲಿಂಬು, ತೆಂಗಿನಕಾಯಿ, ಅರಿಸಿನ-ಕುಂಕುಮ ಮೊದಲಾದವುಗಳನ್ನು ಶಾಸ್ತ್ರೋಕ್ತವಾಗಿ ಊರಿನವರೆಲ್ಲಾ ವಾದ್ಯ ಸಮೇತ ತೆಗೆದುಕೊಂಡು ಹೋಗಿ ಗಡಿಯನ್ನು ದಾಟಿ ಅವುಗಳನ್ನು ಎಸೆದು ಬರುವುದು ಒಂದು ನಂಬಿಕೆ.

ಈ ಕ್ರಮದ ಹಿಂದೆ ವೈಜ್ಞಾನಿಕ ಆಧಾರವೂ ಇದೆ. ಗ್ರಾಮೀಣ ಜನರು ಸದಾ ತಮ್ಮ ದುಡಿಮೆಯಲ್ಲಿ ಜೀವನ ಸಾಗಿಸುತ್ತಿರುತ್ತಾರೆ. ಆ ದುಡಿಮೆಯಲ್ಲಿ ಅವರಿಗೆ ಮನೆಯ ಸ್ವಚ್ಛತೆ, ಊಟೋಪಚಾರದ ಬದಲಾವಣೆ ಇರುವುದಿಲ್ಲ. ಇದರಿಂದ ಮನೆಯ ಕಲುಸಿತದಿಂದ ಮನೆಯಲ್ಲಿ ಕ್ರಿಮಿಕೀಟಗಳು ಹೆಚ್ಚಾಗಿ ರೋಗಕ್ಕೆ ತುತ್ತಾಗುವ ಸಂಬವ ಉಂಟು. ಹಾಗೆಯೇ ಊಟೋಪಚಾರದಲ್ಲಿ ಬದಲಾವಣೆ ಇಲ್ಲದೆ ಇದ್ದರೆ ಪೌಷ್ಟಿಕಾಂಶದ ಕೊರತೆಯಿಂದಾಗಿ ಅನೇಕ ರೋಗಗಳೂ ಬಂದೊದಗುತ್ತವೆ. ಊಟೋಪಚಾರದ ಬದಲಾವಣೆಗೆ ಹಬ್ಬ-ಜಾತ್ರೆಗಳನ್ನು ಆಚರಿಸುವ ಮತ್ತು ಮನಸ್ಸಿನ ಒತ್ತಡ ಕಡಿಮೆಯಾಗಿ ಆರೋಗ್ಯದಿಂದ ಇರಲು ಸಾಧ್ಯವಾಗುತ್ತದೆ. ಆದ್ದರಿಂದ ಈ ತೆರನಾದ ನಂಬಿಕೆಯನ್ನು ನಮ್ಮ ಪ್ರಾಚೀನರು ರೂಢಿಸಿಕೊಂಡು ಬಂದಿದ್ದರು. ಅವುಗಳು ಈಗಲೂ ಮುಂದುವರಿದಿವೆ.

ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳಲ್ಲಿ ಉಲ್ಲೇಖಿತವಾದ ಮತ್ತು ಜನಮಾನಸದಲ್ಲಿ ರೂಢಿಗತವಾಗಿ ಮುಂದುವರಿದುಕೊಂಡು ಬಂದ ಸಾಂಪ್ರದಾಯಿಕ ನಂಬಿಕೆಗಳನ್ನು ಪ್ರಮುಖವಾಗಿ ಮೂರು ರೀತಿಯಾಗಿ ವಿಭಾಗಿಸಿಕೊಳ್ಳಬಹುದು. ೧. ಶುದ್ಧ ಮೂಲ ನಂಬಿಕೆಗಳು. ೨. ದೈವಮೂಲ ನಂಬಿಕೆಗಳು. ೩. ಯಂತ್ರ-ಮಂತ್ರ ಮೂಲ ನಂಬಿಕೆಗಳು.

### ೧. ಶುದ್ಧಮೂಲ ನಂಬಿಕೆಗಳು

ಮಕ್ಕಳಿಗೆ ದಡಾರ ಎದ್ದಾಗ (ಅಮ್ಮ ಆದಾಗ) ಪ್ರತಿನಿತ್ಯ ಮನೆಯನ್ನೆಲ್ಲಾ ಸಾರಿಸಿ ಬೇವಿನ ಸೊಪ್ಪು ಹಾಕಿ ಕುದಿಸಿದ ಬಿಸಿ ನೀರಿನಲ್ಲಿ ನೆನೆಸಿದ ಮಡಿ ಬಟ್ಟೆಯಿಂದ ಮಗುವಿನ ಮೈಯನ್ನು ಒರೆಸಿ ಮಡಿಬಟ್ಟೆ ತೊಡಿಸುತ್ತಾರೆ. ಈ ಸಂದರ್ಭದಲ್ಲಿ ಬೇರೆಯವರ್‍ಯಾರಾದರೂ ಅಮ್ಮ ಇರುವ ಮನೆಗೆ ಬರಬೇಕಾದರೆ ಇದೇ ನೀರನ್ನು ಕಾಲಮೇಲೆ ಹಾಕಿಕೊಂಡು ಬರಬೇಕು. ಮಗುವಿನ ಪಕ್ಕದಲ್ಲಿ ಬೇವಿನ ಸೊಪ್ಪನ್ನು ಇಡಲಾಗುತ್ತದೆ. ಬೇವಿನ ಸೊಪ್ಪಿನಿಂದ ಗಾಳಿ ಹಾಕುತ್ತಿರುತ್ತಾರೆ"[೬]. ಈ ರೋಗವನ್ನು ಆಧುನಿಕ ವೈದ್ಯದಲ್ಲಿ 'ಗೊಬ್ಬರ' ಎಂದು ಕರೆಯಲಾಗುತ್ತದೆ. ಈ ಚರ್ಮರೋಗವು ವಿಶೇಷವಾಗಿ ಮಕ್ಕಳಿಗೆ ಬರುವ ತೀವ್ರ ಸಾಂಕ್ರಾಮಿಕವಾದ ಸಾಮಾನ್ಯ ರೋಗವಾಗಿದೆ. ವೈರಸ್ ಜಾತಿಯ ಕ್ರಿಮಿಗಳ ಮೂಲಕವೇ ಈ ರೋಗವು ಹರುಡುವುದು. ಇದಕ್ಕೆ ಆಧುನಿಕ ಅಲೋಪಥಿ ವೈದ್ಯದಲ್ಲಿ ಚುಚ್ಚುಮದ್ದನ್ನು ಕಂಡು ಹಿಡಿದಿದ್ದಾರೆ. ಆದರೆ ಅದರ ಜೊತೆಗೆ ರೋಗಿಯ ಆರೈಕೆಗೆ ಹೆಚ್ಚಿನ ಆಧ್ಯತೆ ಕೊಡಲಾಗುತ್ತದೆ. ಈ ಆರೈಕೆಯು ನಮ್ಮ ಪಾರಂಪರಿಕ ಸಾಂಪ್ರದಾಯಿಕ ನಂಬಿಕೆಯ ಆಧಾರದ ಮೇಲೆ ಬಂದಿದೆ. ಮೈಯನ್ನು ಒದ್ದೆ ಬಟ್ಟೆಯಿಂದ ಒರಿಸುವುದು, ರೋಗಿಯನ್ನು ಪ್ರತ್ಯೇಕವಾದ ಕೋಣೆಯಲ್ಲಿ ಮಲಗಿಸುವುದು ಇತ್ಯಾದಿ. ನಮ್ಮ ಪ್ರಾಚೀನರು ಮಾಡಿಕೊಂಡು ಬಂದಿರುವುದು. ನಂಬಿಕೆಯೂ ಸೂಕ್ಷ್ಮಾನು ಜೀವಿಯಿಂದ ರೋಗಿಯನ್ನು ರಕ್ಷಿಸಲು ಮನೆಯನ್ನು ಸಾರಿಸುವುದು ಮತ್ತು ಬೇವಿನ ಸೊಪ್ಪು ಬಳಸುವುದು ಆಗಿದೆ. ಬೇವಿನ ಸೊಪ್ಪು ವಿಷಭರಿತ ಸಸ್ಯ ಆಗಿರುವುದರಿಂದ ಅ ವಿಷವು ರೋಗಿಗೆ ಅಂಟಿದ ಕ್ರಿಮಿಗಳು ಸಾಯಲೆಂದು ಮತ್ತು ಹೊರಗಿನಿಂದ ಬರುವವರ ಕಾಲಿನ ಮೂಲಕ

ಕ್ರಿಮಿಗಳು ಮನೆಗೆ ಸೇರುತ್ತವೆ ಎಂಬ ನಂಬಿಕೆಯಿಂದ ಬೇವಿನ ಸೊಪ್ಪು ಕುದಿಸಿದ ನೀರನ್ನು ಕಾಲಿಗೆ ಹಾಕಿಕೊಳ್ಳಲು ಬಳಸುವುದು. ಈಗಿನ ದುಬಾರಿ ಜೀವನ ಶೈಲಿಗಿಂತ ಕಡಿಮೆ ವೆಚ್ಚದಲ್ಲಿ ಗೊಬ್ಬರ ರೋಗಕ್ಕೆ ಕಾರಣವಾಗುವ ಸಾಂಕ್ರಾಮಿಕ ಕ್ರಿಮಿಗಳನ್ನು ತಡೆಯಲು ಪ್ರಾಚೀನ ಕಾಲದಿಂದ ಮುಂದುವರಿಸಿಕೊಂಡು ಬಂದ ಸಾಂಪ್ರದಾಯಿಕ ನಂಬಿಕೆಯೇ ಪ್ರತಿಬಂಧಕೋಪಾಯ ಚಿಕಿತ್ಸೆಯಾಗಿ ಬಳಸಲು ಅತ್ಯಂತ ಉಪಯುಕ್ತವಾದ ಕ್ರಮವಾಗಿದೆ. ಈ ತೆರನಾದ ನಂಬಿಕೆಗಳು ವೈಜ್ಞಾನಿಕ ಆಧಾರದ ಮೇಲೆಯೆ ನೆಲೆಗೊಂಡವುಗಳಾಗಿವೆ.

ಇದೇ ರೀತಿ ನಾಯಿಯನ್ನು ಕಾಲಿನಿಂದ ಒದೆಯಬಾರದು ಎಂಬ ನಂಬಿಕೆ ಅದು ಕಚ್ಚುವುದರಿಂದ ಬರುವ 'ರ್‍ಯಾಬಿಸ್ ಕಾಯಿಲೆ'ಯನ್ನು ಹುತ್ತ ಸುತ್ತಬಾರದೆಂಬ ನಂಬಿಕೆ ಹಾವು ಕಚ್ಚಿ ಸಾಯುವುದನ್ನು ತಪ್ಪಿಸುತ್ತದೆ. ಹಾಗೆಯೇ ದೃಷ್ಟಿತೆಗೆಯುವುದು ಭಟ್ಟಿ ಇಳಿಸುವುದು ಬರೆಹಾಕುವುದು ಹಚ್ಚೆಹಾಕಿಸಿಕೊಂಡರೆ ನರಕ್ಕೆ ಸಂಬಂಧಪಟ್ಟ ಖಾಯಿಲೆ ವಾಸಿಯಾಗುತ್ತದೆಂಬ ನಂಬಿಕೆ ಮನೆಯೊಳಗೆ ಉಗುರು ಕತ್ತರಿಸಬಾರದು ಮನೆಯಲ್ಲಿ ಕನ್ನಡಿ ಹೊಡೆಯಬಾರದು ಇತ್ಯಾದಿ ಸಾಂಪ್ರದಾಯಿಕ ನಂಬಿಕೆಗಳು ಆರೋಗ್ಯವನ್ನೇ ಕುರಿತಂಥವು. ಇದೇ ರೀತಿ "ಬಸುರೀಲಿಗೇದುಣ್ಣು, ಬಾಣಂತೀಲಿ ಕೂತುಣ್ಣು" "ಅಣ್ಣೆ ಸೊಪ್ಪು ಆಯಬ್ಯಾಡ, ಹರಿವೆಸೊಪ್ಪಿನೆಲೆ ಬಿಡಬ್ಯಾಡ" ಎಂಬ ಗಾದೆಗಳಾಗಲೀ ಮತ್ತು ತುಳಸಿ, ಅರಳಿ, ಬನ್ನಿ ಮುಂತಾದ ಮರಗಳು ಪೂಜ್ಯನೀಯವಾಗಿದ್ದು ಅವುಗಳ ಸಂಸರ್ಗದಿಂದ ಕೆಲವು ರೋಗಗಳು ಸುಳಿಯುವುದಿಲ್ಲ ಎಂಬ ಆರೋಗ್ಯದ ಬಗೆಗಿನ ಸಾಂಪ್ರದಾಯಿಕ ನಂಬಿಕೆಗಳಾಗಿ ಮುಂದುವರಿದುಕೊಂಡು ಬಂದಿವೆ.

### ೨. ದೈವಮೂಲ ನಂಬಿಕೆಗಳು

ಜಗತ್ತಿನ ಜೀವ ವ್ಯಾಪಾರಗಳಿಗೆಲ್ಲಾ ದೇವರೆ ಕಾರಣ ಕರ್ತ ಎಂಬುದು ಅಚಲವಾದ ಜನಪದರ ನಂಬಿಕೆ. ಒಳ್ಳೆಯದು ಹಾಗೂ ಕೆಟ್ಟದಕ್ಕೆ ದೇವರೆ ಕಾರಣ. ಮನುಷ್ಯ ತನಗೆ ಮಿಕ್ಕಿದ ವಿಷಯವನ್ನು ತನ್ನ ಮೇಲೆ ಯಾವ ಕಾಲಕ್ಕೂ, ಯಾವ ಕಾರಣಕ್ಕೂ ಹಾಕಿಕೊಳ್ಳಲಾರ. ಇದರಲ್ಲಿ ಈ ಬುದ್ಧಿಜೀವಿ ಬಹಳ ಹುಷಾರು. ಸುಖವಿರುವಾಗ ಯಾವುದನ್ನು ಪರಿಗಣಿಸದ ವ್ಯಕ್ತಿ ಸಂಕಟ ಬಂದಾಗ ವೆಂಕಟರಮಣ ಎನ್ನದೆ ಇರಲಾರ. ಎಲ್ಲವನ್ನು ದೇವರಿಗೆ ಆರೋಪಿಸುತ್ತ "ನಮ್ಮ ಕೈಯಲ್ಲಿ ಏನಿದೆ ಅವನ ಇಚ್ಛಾ ಇದ್ದಂಗ ಆಗತೈತಿ" ಎಂದು ಕೈಜಾಡಿಸಿ ಕುಳಿತು ಕೊಳ್ಳುತ್ತಾರೆ. ಇಲ್ಲಿ ನಂಬಿದ ದೇವರು ಕೆಟ್ಟದ್ದನ್ನೇ ಮಾಡುತ್ತಾನೆಯೇ? ದ್ರೋಹಿಯಾಗುತ್ತಾನೆಯೇ? ಎಂಬ ಪ್ರಶ್ನೆ ಹೇಳಬಹುದು. ಮನುಷ್ಯರೆಲ್ಲ ದೇವರ ಮಕ್ಕಳು. ಮಕ್ಕಳನ್ನೇ ತಂದೆ ಜೋಪಾನ ಮಾಡಬೇಕೆಂದರೆ ಮಕ್ಕಳಾಗಿದ್ದವರು ತಂದೆಗೆ ವಿಧೇಯರಾಗಿದ್ದರೆ ತಾನೆ ಆದ್ದರಿಂದ ಸರ್ವಾಂತರ್ಯಾಮಿಯನ್ನು ಈ ಸಕಲ ಜೀವಿಗಳು ಸದಾ ಸಂತೃಪ್ತಿಯಿಂದ ಇಡಬೇಕಾಗುತ್ತದೆ. ಒಂದು ವೇಳೆ ಮನುಷ್ಯ ಸುಖಾಂಧನಾಗಿ ಇವನ್ನೆಲ್ಲವನ್ನು ಮರೆತರೆ ಸಿಟ್ಟಿಗೆದ್ದ ದೇವರು ಆ ವ್ಯಕ್ತಿಗೆ ರೋಗ ಬೇನೆಗಳನ್ನು ತರುತ್ತಾನೆ. ಇದು ಜನಪದ ಜೀವನದಲ್ಲಿ ಬೇರೂರಿರುವ ಬಲವಾದ ನಂಬಿಕೆ ಮತ್ತು ರೋಗ ಬರುವಿಕೆಗೆ ಕಾರಣ ಕೂಡ ಆಗಿದೆ". ಎಂದು ಡಾ.ವೀರೇಶ ಬಡಿಗೇರ ಅವರು ದೈವಮೂಲ ನಂಬಿಕೆ ಕುರಿತಂತೆ ಸಂಸ್ಕೃತಿ ಸಂಕಥನದಲ್ಲಿ (ಪು.೧೪೦) ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಕಾರಣದಿಂದ ರೋಗಕ್ಕೆ ತುತ್ತಾದಾಗ ದೇವರಿಗೆ ಧೂಪ, ದೀಪ, ಬಲಿ, ನೈವೇದ್ಯಗಳನ್ನು ಮಾಡುತ್ತಾರೆ. ಅಂಥ ನಂಬಿಕೆಗಳು ಈ ಕೆಳಗಿನಂತಿವೆ.

೨ ದಿನ ೨ನೆ ಮಾಸ ೨ನೆ ವರ್ಷದಲ್ಲಿ ಬಾಲಕನು ನಾಲ್ಕನೆ ದಿನದಲ್ಲಿ ಅತ್ತಿ, ಅರಳಿ, ಅಲ್ಲಾ ಮತ್ತು ನೆಲ್ಲಿ ಯಿ ೪ಬಗೆ ಪಲ್ಲವನಿರಸಿಸುವಿಗೆ ಪ್ರಕ್ಷಿಸುವುದು। ಬ್ರಹ್ಮನಿಗೆ ಅಂನವನಿಕ್ಕಿಸುವದು। ಬ್ರಹ್ಮಾಂತಿಗಾದರು ಅಂನ್ನವನಿಕ್ಕಿಸುವುದು। ಯತಶಕ್ತಿಯಿಂದಾನವ ಮಾಡುವ ಸುನಂದೆಯೆಂಬ ದೇವತೆ ಪಿಡಿಗುಂ। ಆ ಮಗುವಿಗೆ ಮುಂಚಿತ್ತಾಗಿ ಜ್ವರಮಕ್ಕು। ಹಲ್ಲು ಕಚ್ಚುವದೂ। ಕಂಣು ಬಿಡದು। ಹಗಲಿರಳು ಅಳುವದು। ಮೊಲೆಯನುಣ್ಣದು। ಮೈಮುರಿವುದು। ಕೈಕಾಲನಿಗರಿಸುವುದು। ಮತ್ತು ಕೈಕಾಲನಡುಗಿಸುವದೂ। ಅದಕ್ಕೆ ೧ಬಳ್ಳ ಅಕ್ಕಿಯ ಹಿಟ್ಟಿನಲ್ಲಿ ೧ ಪ್ರಥುಮೆಯ ಮಾಡಿ ಬಿಳಿಯ ವಸ್ತ್ರ। ಬಿಳಿಯ ಹೂವು। ಬಿಳಿಯ ಗಂಧ। ಬಿಳಿಯ ಅಕ್ಷತೆಗಳಿಂದ ಪೂಜೆಯ ಮಾಡಿ ೨ ಮಾನ ಅಕ್ಕಿಯ ಬೆಯಿಸಿ ೧ ಬಕ್ಕಲೆಯಲ್ಲಿ ಸುರಿದು ಆ ಅಂನದ ಮೇಲೆ ೧೩ ಸ್ವಸ್ತಿಕ ।೧೩ ಠಕ್ಕಿಗಳನಿಟ್ಟು। ದೋಸ ಮತ್ಯಮಂಸಗಳನೂ ಆ ಬಕ್ಕರೆಯಲ್ಲಿ ಯಿಕ್ಕಿ ಆ ಪ್ರತಿಮೆಯ ಮುಂದಿಟ್ಟು॥ ಓಂ ನಮೋ ಭಗವತೆ ಸುನಂದೆ। ಬಲಿಂವಿಷ್ಟು=ಬಾಲಕಂ। ಮುಂದ=ಸ್ವಾಹಂ॥ ಯೆಂದು ಆ ಬಕ್ಕರೆಯ ಕೊಳ್ಳ ಬಲಿಯ ಕೊಟ್ಟು ತಾಂಬೂಲದಕ್ಷಿಣೆಗಳನೂ ಆ ಬಕ್ಕರೆಯಲ್ಲಿಕ್ಕಿ ಆ ಪ್ರಥಮೆಯನೂ। ಆ ಬಕ್ಕರೆಯಲ್ಲಿಯಿರಿಸಿ। ಪಶ್ಚಿಮ ದಿಕ್ಕಿನಲ್ಲಿ ಸಾಯಂಕಾಲದಲ್ಲಿ ೫ದಿನ ಯಿ ಮರಿಯದೆಯಲ್ಲಿ ಬಲಯ ಹಾಕಿಸುವುದೂ। ಪಂಚ ಪಲ್ಲವದ ನಿರುಗಳಿಂದನ್ನಾನ ಮೊದಲು ಉಳಿದ ಮರ್ಯ್ಯಾದಿಯಲ್ಲಿ ಮಾಡಿಸುವುದು ಸಿಸುವಿಗೆ ಸ್ವಸ್ತವಹುದೂ"[೯] ಎಂಬುದು ಒಂದು ಸಾಂಪ್ರದಾಯಿಕ ನಂಬಿಕೆ. ಹುಟ್ಟಿದಂದಿನಿಂದ ೧೬ ವರ್ಷದವರೆಗೂ ವಿವಿಧ ದೇವತೆಯ ಪಿಡುಗು ಬರುತ್ತದೆ ಎಂದು ನಂಬಿರುತ್ತಾರೆ. ಆಗ ಗ್ರಾಮದ ಜನರೆಲ್ಲ ಕೂಡಿ ಮೇಲಿನಂತೆ ಆಚರಣೆಯನ್ನು ಆಚರಿಸುತ್ತಾರೆ.

ಅಲ್ಲದೆ ರೋಗ ನಿವಾರಣೆಗಾಗಿ ದೇವರಿಗೆ ಹರಕೆ ಹೋರುವುದು, ಕೆಂಡ ಹಾಯುವುದು, ದಿಂಡುರುಳು ಸೇವೆ ಮಾಡುವುದು, ಕೊಂಡಕ್ಕೆ ಉಪ್ಪು ಹಾಕುವುದು, ರೋಗಿಯ ತೂಕ ಸಕ್ಕರೆ ಅರ್ಪಿಸುವುದು, ಬಲಿ ಕೊಡುವುದು ಇತ್ಯಾದಿ ದೈವ ಮೂಲ ನಂಬಿಕೆಗಳು ಎಲ್ಲವೂ ಮಾನವ ಅವ್ಯಕ್ತ ಶಕ್ತಿಯೊಡನೆ ಮಾಡಿಕೊಳ್ಳುವ ಒಪ್ಪಂದಗಳಾಗಿವೆ. ಈ ದೈವ ಮೂಲ ಸಾಂಪ್ರದಾಯಿಕ ನಂಬಿಕೆಗಳಲ್ಲಿ ದೈವದ ಅಂಶ ತೀರ ಗೌಣ. ಇಲ್ಲಿ ಕೇವಲ ದೈವದ ಬಗೆಗಿನ ಶ್ರದ್ಧೆ ನಂಬಿಕೆಗಳಿಗೆ ಇಲ್ಲಿ ಪ್ರಾಮುಖ್ಯತೆ ಇದೆ. ರೋಗಿಯ ರೋಗವಾಸಿಯಾಗಲು ದೇವರ ಮೇಲೆ ಇಟ್ಟ ನಂಬಿಕೆಯ ಪ್ರತಿಫಲವಾಗಿ ರೋಗಿ ಸತ್ತರೆ ದೇವರು ಕರಕೊಂಡ ಎನ್ನುವುದು ಬದುಕಿದರೆ ದೇವರ ಸಹಾಯ ಎನ್ನುವುದು ಇಲ್ಲಿ ಗಮನಿಸಬೇಕಾದ ಅಂಶ.

**೩. ಯಂತ್ರ-ಮಂತ್ರ ಮೂಲ ನಂಬಿಕೆಗಳು**

ಪ್ರಾಚೀನ ಸಮಾಜಗಳಲ್ಲಿ ವೈದ್ಯಕೀಯ ಅವಿಭಾಜ್ಯ ಅಂಗವಾಗಿ ತೋರಿಬರುತ್ತಿರುವ ಯಂತ್ರ-ಮಂತ್ರಗಳು ಮನಶಾಸ್ತ್ರೀಯ ಹಿನ್ನೆಲೆಯಲ್ಲಿ ದಾಖಲಾಗಿವೆ. ರೋಗಿಯ ಶುಶ್ರೂಷೆಯು ಮಂತ್ರ ಪೂರ್ವಕವಾಗಿ ನಡೆಯುವಾಗ ಮಂತ್ರಕ್ಕೆ ಹೆಚ್ಚು ಪ್ರಾಶಸ್ತ್ಯವಿದೆಯೋ ಅಥವಾ ಶುಶ್ರೂಷೆಗೋ ಎಂಬ ಪ್ರಶ್ನೆ ತಾನಾಗಿಯೇ ಉದ್ಭವಿಸುತ್ತದೆ. ಯಾವುದೋ ಖಾಯಿಲಿಗೆ ಮೂಲಿಕೆಯನ್ನು ಯಂತ್ರ-ಮಂತ್ರಗಳೊಂದಿಗೆ ಕೊಟ್ಟರೆ ಮೂಲಿಕೆಗೆ ಗುಣಪಡಿಸುವ ಶಕ್ತಿ ಇದೆಯೋ ಅಥವಾ ಯಂತ್ರ-ಮಂತ್ರಗಳಿಗಿದೆಯೋ ಎಂಬುದನ್ನು ನಿಗದಿತವಾಗಿ ವಿಶ್ಲೇಷಿಸಬೇಕಾದರೆ ರೋಗಿಗೆ ಒಂದನ್ನು ಬಿಟ್ಟು ಇನ್ನೊಂದನ್ನು ಮಾತ್ರ ಕೊಟು ಪ್ರಯೋಗ ನಡೆಸಬಹುದು. ಆದರೆ ಇವೆರಡೂ ಒಂದನ್ನು ಬಿಟ್ಟು ಇನ್ನೊಂದಿರಲಾರದು ಎಂಬ ರೀತಿಯಲ್ಲೇ ನಡೆದುಕೊಂಡು ಬಂದಿವೆ.

ಇಂಥ ಸಾಂಪ್ರದಾಯಿಕ ನಂಬಿಕೆಗಳು ವಿಷ ಚಿಕಿತ್ಸಾ ಸಂದರ್ಭದಲ್ಲಿ ಮತ್ತು ಶಿಶು ಚಿಕಿತ್ಸಾ ಸಂದರ್ಭದಲ್ಲಿ ಬಳಕೆಯಾಗುವುದು ಹೆಚ್ಚು.

ಮಾಂತ್ರಿಕರಿಂದ ತೆಂಗಿನಕಾಯಿ ಕಟ್ಟುಮಾಡಿಸಿ ಮನೆಗೆ ಕಟ್ಟುವುದು, ನಿಂಬೆಹಣ್ಣು ಮಂತ್ರಿಸಿಕೊಂಡು ಬಂದು ಪೂಜಿಸುವುದು, ಮಂತ್ರದ ನೀರು ಚಿಮುಕಿಸುವುದು, ಮಂತ್ರದ ಎಣ್ಣೆ ಹಚ್ಚುವುದು, ಯಂತ್ರ ಬರೆಸಿ ಕಟ್ಟಿಸುವುದು, ಹಾವು ಕಡಿತಕ್ಕೆ ಮಂತ್ರ ಹಾಕಿಸುವುದು ಇವೆಲ್ಲ ಸಾಮಾನ್ಯವಾದ ನಂಬಿಕೆಗಳು. ಹಾವು ಕಡಿದಾಗ ವಿಷ ಇಳಿಸುವ ಬಗ್ಗೆ ಮಂತ್ರ ಹೀಗಿದೆ;

ಓಂ ಮೇಘಮಾಲೆ, ವಿಮಳೆ ಹರ ವಿಷವೇಗಂ ಹಾಂ, ಹಂ ಶಂಬರಿ ಅ(ಚರಿ) ಚಿ(ಅಚರಿ) ಲೆಚಿ ಸರ್ವವಿಷನಾಶಿನಿ ಮಹಾಮಾಯೆ ಹಂ(ಹಂ) ಸಃ (ಉಂ) ಠ ಸವಾಹಾ(ಜ).

ಓಂ ನಮೋ ಅನಂತಾಯ ಮಹಾನಾಗಹೃದಯಾಯ ಸರ್ವ ನಾಗವಶಂಕರಾಯ ಸ್ವಾಹಾ”[೯]

ಓಂ ನಮೋ ಭಗವತೇ ಪಾರ್ಶ್ವತೀರ್ಥಕರಾಯ ದುಂದುಭಿಸ್ವನ ಮೇಘವಾರಣ ಧುಂ (ದಂ) ನಂ, ಕಂಪ, ಶೀಘ್ರ, ಆವೇಶಯ, ರರರಾರಾ ಹ್ಮ್ಲ್ವ್ಯಂ ಝುಂ ಕ್ಷಿತಿ ಸರ್ವ ವಿಷಂ ನಿರ್ವಿಷಂ ಕುರು ಸ್ವಾಹಾ

ಇಲೆಜಯ ವಿಜಯ ಜಸ್ವಾಹಾಂ ಓಂ ನಮೋ ಭಗವತೇ ಪಾರ್ಶ್ವನಾಥಾಯ ಧರಣೇಂದ್ರ ಪದ್ಮಾವತೀ ಸಹಿತಾಯ ಔಂ ಹ್ಮ್ಲ್ವ್ಯ ಹ್ರಾಂ ಹ್ರೀಂ ಹ್ರೂಂ ಹ್ರೌಂ ಹ್ರಃ ಅನಂತ ವಾಸುಕಿ ತಕ್ಷಕ ಕಾರ್ಕೋಟಕ ಪದ್ಮ ಮಹಾಪದ್ಮ ಶಂಖ ಕುಳಿಕ ಜಯ ವಿಜಯ ನಾಗಾನ್ ಏಹಿ ಆವೇಶಯ ದಹ ಪಚ ಧು(ಮ)ನ ಕಂಪ ಶೀಘ್ರಂ ಸ್ತೋಭಯ ಘೇ ಸಂ ವೌಷಟ್”[೧೦]

ಈ ಯಂತ್ರ-ಮಂತ್ರ ಮೂಲದ ನಂಬಿಕೆಗಳಿಗೆ ಬಹುತೇಕ ಭೀತಿ ಕಾರಣವಾಗಿರಬಹುದು. ಖಾಯಿಲೆಯನ್ನು ಯಾವ ವೈದ್ಯರು ವಾಸಿ ಮಾಡಲು ಆಗದಿದ್ದಾಗ ಮತ್ತು ದೈವದಿಂದಲೂ ವಾಸಿ ಮಾಡದಿದ್ದಾಗ ಸಾಮಾನ್ಯವಾಗಿ ಈ ಅತೀತ ಶಕ್ತಿಗಳಾದ ಯಂತ್ರ-ಮಂತ್ರಗಳಿಗೆ ಮಾನವ ಮೊರೆಹೋಗಬೇಕಾಗುತ್ತದೆ. ಆ ದೃಷ್ಟಿಯಲ್ಲಿ ಯಂತ್ರ-ಮಂತ್ರ ಮೂಲ ಸಾಂಪ್ರದಾಯಿಕ ನಂಬಿಕೆಗಳು ಹುಟ್ಟಿಕೊಂಡಿರಬೇಕು. ಕೆಲವೊಮ್ಮೆ ರೋಗಿಗೆ ವೈದ್ಯನಿಗಿಂತ ಮಂತ್ರದ ಬಗೆಗೆ ನಂಬಿಕೆ ಹೆಚ್ಚು ಆ ನಂಬಿಕೆಯೇ ಖಾಯಿಲೆಯನ್ನು ವಾಸಿ ಮಾಡುತ್ತದೆ. ವೈದ್ಯದ ಬಗೆಗಿನ ಎಲ್ಲ ನಂಬಿಕೆಗಳು ನಿಜವಲ್ಲ. ಕೆಲವು ಹಾನಿಕಾರಕವೂ ಮತ್ತೆ ಕೆಲವು ಔಪಯೋಗಿಕವೂ ಆಗಿರಬಹುದು.

ಇಷ್ಟು ವಿಭಾಗಗಳುಳ್ಳ ಬಹಳ ವಿಸ್ತೃತವಾದ ನಮ್ಮ ವೈದ್ಯಶಾಸ್ತ್ರ ಗ್ರಂಥಗಳನ್ನು ನೋಡಿದರೆ ವೈದ್ಯವಿಷಯದಲ್ಲಿ ನಮ್ಮ ಪೂರ್ವಿಕರು ಎಷ್ಟು ಉನ್ನತಿಯನ್ನು ಹೊಂದಿದ್ದರು, ವಿಷ್ಣಾತರಾಗಿದ್ದರೆಂದು ತಿಳಿಯಬಹುದು. ಹಿಂದೂಧರ್ಮದ ಪ್ರಕಾರ

“ಪೂರ್ವಜನ್ಮಕೃತಂ ಪಾಪಂ ರೋಗರೂಪೇಣ ಜಾಯತೇ
ತಚ್ಛಾನ್ತಿರೌಷಧೈರ್ದಾನೈರ್ಜಪಹೋಮಾರ್ಚನಾದಿಭಿಃ॥”

ಎಂದು ಬಾಹಟದಲ್ಲಿ ಹೇಳಿದಂತೆ ಜನ್ಮಾಂತರಕೃತ ಪಾಪಗಳ ಫಲವಾಗಿ ಈ ಜನ್ಮದಲ್ಲಿ ರೋಗಗಳು ಉದ್ಭವಿಸುವದರಿಂದ ಜಪಹೋಮಾದಿಗಳಿಂದ ಆ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿ ನಂತರ ಚಿಕಿತ್ಸೆಯನ್ನು ಮಾಡಿದಲ್ಲಿ ಅಸಾಧ್ಯವದ ರೋಗಗಳು ಗುಣವಾಗುವವು ಎಂದು ನಮ್ಮ ಆಯುರ್ವೇದದ ಸಿದ್ಧಾಂತ”[೧೧].

ಆದುದರಿಂದಲೇ ನಮ್ಮ ಕನ್ನಡ ವೈದ್ಯಶಾಸ್ತ್ರ ಗ್ರಂಥಗಳಲ್ಲಿಯೂ ವೈದ್ಯವಿಷಯ (ಗಿಡಮೂಲಿಕೆ) ಮಾತ್ರವಲ್ಲದೆ ಯಂತ್ರ-ಮಂತ್ರ ಸೇರಿಸಲ್ಪಡಲು ಕಾರಣವಾಗಿದೆ. ಉದಾಹರಣೆಗೆ ವಲ್ಲಬೇಂದ್ರನ ವೈದ್ಯಚಿಂತಾಮಣಿ ಗ್ರಂಥದಲ್ಲಿ ರೋಗಗಳಿಗೆ ಚಿಕಿತ್ಸೆಯನ್ನು ಹೇಳುವ ಮೊದಲು ರೋಗಗಳ ಉತ್ಪತ್ತಿಗೆ ಕಾರಣವಾದ ಪೂರ್ವಜನ್ಮದಲ್ಲಿ ಮಾಡಲ್ಪಟ್ಟ ಪಾಪವಾವುದೆಂದು ಕರ್ಮವಿಪಾಕವನ್ನೂ ಆ ಪಾಪದ ಪರಿಹಾರಕ್ಕಾಗಿ ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೇಳಿ ಗ್ರಹದೋಷಗಳಿಗೆ ತಕ್ಕ ಶಾಂತಿ, ದಾನ, ಪೂಜೆ ಮೊದಲಾದವುಗಳನ್ನು ನಿರೂಪಿಸಿ ರೋಗಗಳ ನಿದಾನ ಮತ್ತು ಚಿಕಿತ್ಸೆಗಳು ನಿರೂಪಿತವಾಗಿವೆ.

ಸಾಂಪ್ರದಾಯಿಕ ನಂಬಿಕೆಗಳು ಜನಪದ ಸಂಸ್ಕೃತಿಯ ಯಾವುದೋ ನಿರ್ದಿಷ್ಟ ಸಾಮಾಜಿಕ ವರ್ಗಕ್ಕೆ ಮಾತ್ರವೇ ಸೀಮಿತವಾಗಿರುವುದಿಲ್ಲ. ಅವು ವಿಶಾಲವಾದ ಇಡೀ ಸಮಾಜದ ಜೀವನ ವಿಧಾನವಾಗಿ ಬೆಳೆದು ಬಂದಿವೆ. ಈ ನಂಬಿಕೆಗಳು ರೋಗ ನಿವಾರಕ ಮತ್ತು ನಿರ್ರೋಧಕ ಶಕ್ತಿಯಾಗಿ ವೈಜ್ಞಾನಿಕ ವೈದ್ಯಕ್ಕೆ ಸವಾಲಾಗಿ ನಿಂತಿವೆ. ಅಷ್ಟೇ ಅಲ್ಲ ಇವು ಸಮಾಜಕ್ಕೆ ಬಹುಪಯುಕ್ತವಾಗಿರುವ ಅಮೂಲ್ಯ ಆರೋಗ್ಯ ಸಾಧಕವೂ ಆಗಿವೆ.

## ಅಡಿಟಿಪ್ಪಣಿಗಳು

೧. ಸಂಜೀವಿನಿ ಇದೋ ಸಿಕ್ಕೇ ಬಿಟ್ಟಿತು; ಸಂಧ್ಯಾ ಹೆಗಡೆ, ಪ್ರಜಾವಾಣಿ ೧೫ನೇ ಸೆಪ್ಟಂಬರ್, ೨೦೦೯
೨. ಧನ್ವಂತರಿ ಮಹಿಮೆ; ಬಿಂದುಸಾರ, ಪ್ರಜಾವಾಣಿ ಭಾನುವಾರ ೨೪ನೇ ಫೆಬ್ರುವರಿ, ೨೦೦೮
೩. ಆಯುರ್ವೇದ ಸಾರ ಭಾಗ-೧; ೧೯೭೭, (ಸಂ) ಪ.ರಾಮಕೃಷ್ಣಯ್ಯ, ಉಪೋದ್ಘಾತ, ಪು.೪೪
೪. ಮಲೆನಾಡು ಜಾನಪದ; (ಸಂ) ಎಚ್.ಜೆ.ಲಕ್ಕಪ್ಪಗೌಡ, ಪು.೨೩೦
೫. ಸಾಹಿತ್ಯ ಸರಸ್ವತಿ; ೧೯೭೦, ಪ್ರೊ.ದೊಡ್ಡರಂಗೇಗೌಡ, ಪು.೨೩
೬. ಸಂಸ್ಕೃತಿ ಸಂಕಥನ; ೨೦೦೯, ಡಾ.ವೀರೇಶ ಬಡಿಗೇರ, ಪು.೧೪೦
೭. ಜನಪದ ವೈದ್ಯ; ೧೯೮೯, ವಿ.ಎನ್.ಶಿವರಾಮು, ಕರ್ನಾಟಕ ಜನಪದ; (ಸಂ) ಎಸ್.ಕೆ.ಕರಿಂಖಾನ್, ಪು.೩೦೬
೮. ಬಾಲಗ್ರಹ ಚಿಕಿತ್ಸೆ; ರಾಷ್ಟ್ರೀಯ ಪ್ರಾಕೃತ ಅಧ್ಯಯನ ಸಂಸ್ಥೆ ಶ್ರವಣಬೆಳಗೊಳ ಹಸ್ತಪ್ರತಿ ಸಂಖೆ.೩೫೮
೯. ಖಗೇಂದ್ರಮಣಿದರ್ಪಣ; ೨೦೦೪, (ಸಂ) ಬಿ.ಎಸ್.ಸಣ್ಣಯ್ಯ, ಪು.೮೮
೧೦. ಅದೇ ಪು.೮೬
೧೧. ವೈದ್ಯಸಾರ ಸಂಗ್ರಹ ಭಾಗ-೧; ೧೯೫೧, (ಸಂ) ಶ್ರೀನಿವಾಸಮೂರ್ತಿ, ಮುನ್ನುಡಿ XIII

□□□

೭

# ಸಮಾರೋಪ

ಕನ್ನಡ ಸಾಹಿತ್ಯದಲ್ಲಿ ಕಾಣಸಿಗುವ ಲೌಕಿಕ ಮತ್ತು ಅಲೌಕಿಕ ಶಾಸ್ತ್ರ ಗ್ರಂಥಗಳ ಪ್ರಮಾಣ ಮತ್ತು ಪ್ರಯೋಜನದ ದೃಷ್ಟಿಯಿಂದ ಈ ಅಧ್ಯಯನವನ್ನು ಆಯ್ಕೆ ಮಾಡಿಕೊಂಡಿರುವುದು. ಲೌಕಿಕ ಬದುಕಿಗೆ ಆಸರೆಯಾಗಿ ಪ್ರಾಚೀನ ಕಾಲದಲ್ಲಿ ರಚನೆಯಾದ ಗಜಶಾಸ್ತ್ರ, ಅಶ್ವಶಾಸ್ತ್ರ, ಸೂಪಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಕಾಮಶಾಸ್ತ್ರ, ವೈದ್ಯಶಾಸ್ತ್ರ ಮುಂತಾದ ಶಾಸ್ತ್ರ ಕೃತಿಗಳನ್ನು ಪ್ರತ್ಯೇಕವಾಗಿ ಮತ್ತು ಪರಸ್ಪರ ತೌಲನಿಕವಾಗಿ ಅಧ್ಯಯನ ಮಾಡಲು ಅವಕಾಶವಿದೆ. ಕನ್ನಡದಲ್ಲಿ ರಚನೆಯಾದ ವೈದ್ಯಶಾಸ್ತ್ರ ಗ್ರಂಥಗಳನ್ನು ಒಂದೊಂದನ್ನು ಪ್ರತ್ಯೇಕವಾಗಿ ಸಾಂಸ್ಕೃತಿಕ ಮತ್ತು ವೈಜ್ಞಾನಿಕ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಲು ಅವಕಾಶಗಳಿವೆ. ಈ ಉಪಕ್ರಮಗಳನ್ನು ಚಿತ್ತವೃತ್ತಿಯಲ್ಲಿ ಇಟ್ಟುಕೊಂಡು ಕನ್ನಡದಲ್ಲಿ ರಚನೆಗೊಂಡ ಎಲ್ಲಾ ವೈದ್ಯಶಾಸ್ತ್ರದ ಹಸ್ತಪ್ರತಿಗಳನ್ನು ಮತ್ತು ಸಾಹಿತ್ಯ ಕೃತಿಗಳಲ್ಲಿ ಪ್ರಸ್ತಾಪಗೊಂಡಿರುವ ವೈದ್ಯದ ವಿಚಾರಗಳನ್ನೆಲ್ಲ ಒಂದೆಡೆ ಕಲೆಹಾಕಿ ಸಾಂಸ್ಕೃತಿಕ ವಿಶ್ಲೇಷಣೆಗೆ ಇಲ್ಲಿ ಒಳಪಡಿಸಲಾಗಿದೆ.

ದೇಶಿಯ ವೈದ್ಯಶಾಸ್ತ್ರವು ಅತ್ಯಂತ ಪ್ರಾಚೀನತೆಯನ್ನು ಹೊಂದಿದ ಶಾಸ್ತ್ರವಾಗಿದೆ. ದೀರ್ಘ ಇತಿಹಾಸ ಇರುವ ಈ ಶಾಸ್ತ್ರದ ನಿಖರತೆ ಸಿಗುವುದು ಇತ್ತೀಚಿಗೆ ಮಾತ್ರ. ಬೇರು, ನಾರು, ಕಾಂಡ, ಎಲೆಗಳ ಮೂಲವಿರುವ ಈ ವೈದ್ಯಶಾಸ್ತ್ರಕ್ಕೆ ಸ್ವಷ್ಟರೂಪ ಬಂದದ್ದು ಕ್ರಿ.ಪೂ.೩೦೦೦ ವರ್ಷದಲ್ಲಿ. ಅದರ ನೆಲೆಗಳು ನಮ್ಮ ಪ್ರಾದೇಶಿಕ ಸಂಸ್ಕೃತಿಯ ಆಂತರ್ಯದಲ್ಲಿ ಇಂದಿಗೂ ಜೀವಂತವಾಗಿ ಉಳಿದುಕೊಂಡಿವೆ. ಮಾನವನ ಸರ್ವ ರೋಗಗಳಿಗೆ ಈ ಪ್ರಾಚೀನ ವೈದ್ಯಪದ್ಧತಿಯಲ್ಲಿ ಗಿಡಮೂಲಿಕೆಗಳಿಂದ ಔಷಧಗಳನ್ನು ತಯಾರಿಸಿ ಕ್ರಮಾನುಗತವಾಗಿ ಬಳಸುತ್ತಿದ್ದರೆಂಬುದಕ್ಕೆ ಕನ್ನಡ ಹಸ್ತಪ್ರತಿಗಳಲ್ಲಿ ನೂರಾರು ಪ್ರಯೋಗಗಳಿವೆ.

೧. ಕನ್ನಡದಲ್ಲಿ ರಚನೆಯಾದ ವೈದ್ಯಶಾಸ್ತ್ರ ಕೃತಿಗಳು ಜನಪ್ರಿಯತೆಯನ್ನು ಪಡೆದುಕೊಂಡಿರುವುದಕ್ಕೆ ಅನೇಕ ಕಾರಣಗಳಿವೆ. ಧರ್ಮ-ಮತ-ಜಾತಿ ವಲಯಗಳನ್ನು ಮೀರಿ ಬೆಳೆದಿರುವ ಅವುಗಳ ಜನಪ್ರಿಯತೆ ಮತ್ತು ಜನಾಧರಣೀಯ ಸತ್ವಗಳು, ಈ ಕೃತಿಗಳು ಬೆಳೆಯಲು ಸಾಧ್ಯವಾಗಿದೆ. ಈಗ ದೊರಕುವ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳೆಲ್ಲವೂ ವೈವಿಧ್ಯಮಯ ಸಾಮಾಜಿಕ ರಚನೆಯ ಪ್ರತೀಕಗಳು. ಇವು ಎಲ್ಲವೂ

ಬದುಕಿನ ಭಿನ್ನ ದೃಷ್ಟಿಕೋನಗಳಲ್ಲಿ ಅರಳಿದಂಥವು. ದಾನಕ್ಕಾಗಿ, ಓದಿಗಾಗಿ, ಕೆಳುವಿಕೆಗಾಗಿ, ಕೂಲಿಗಾಗಿ, ರೋಗ ನಿವಾರಣಾರ್ಥವಾಗಿ, ವಿದ್ಯಾರ್ಜನೆಗಾಗಿ, ಮೋಕ್ಷಸಂಪಾದನೆಗಾಗಿ, ಸಂಕಷ್ಟಪರಿಹಾರಾರ್ಥವಾಗಿ, ಸ್ವ-ಪರ ಬಳಕೆ ಮತ್ತು ಪ್ರಗತಿಗಾಗಿ, ಪುತ್ರ ಸಂತಾನಕ್ಕಾಗಿ, ಮುಂದಿನ ಪೀಳಿಗೆಗಾಗಿ-ಹೀಗೆ ಹತ್ತು ಹಲವು ರೀತಿಯ ಫಲಾಪೇಕ್ಷೆಗಳು ಮತ್ತು ಜೀವನ ದೃಷ್ಟಿಗಳಿಗಾಗಿ ಬರೆಯಿಸಿಕೊಂಡಂಥವು, ಪ್ರಗತಿಗೊಂಡಂಥವು. ಹೀಗೆ ಕೃತಿಗಳು ಆಕೃತಿಗೊಳ್ಳುವ ಅಥವಾ ಪ್ರತೀಕರಣಗೊಳ್ಳುವುದರ ಹಿಂದೆ ಸಮಾಜಗಳ ನಿರ್ದಿಷ್ಟ ಉದ್ದೇಶಗಳಿರುವುದು ಸ್ಪಷ್ಟವಾಗುತ್ತದೆ.

೨. ನಮ್ಮ ದೇಶಿ ವೈದ್ಯಶಸ್ತ್ರವು ಯಾವುದೇ ಕಾಲದ ಅಗತ್ಯವಲ್ಲದ ಶಾಸ್ತ್ರವಲ್ಲ. ಪ್ರಾಚೀನ ಮತ್ತು ಆಧುನಿಕ ಎನ್ನುವ ಕಾಲ ವಿಭಜನೆಯ ಪರಿಕಲ್ಪನೆಯಲ್ಲಿ ಅದನ್ನು ಇಂದು ಉಪೇಕ್ಷಿಸಿದ್ದುಂಟು. ಆದರೆ ಅದಕ್ಕೆ ತನ್ನದೇ ಆದ ಸ್ಥಾನವುಂಟು. ಕನ್ನಡ ಸಮಾಜ ಮತ್ತು ಸಂಸ್ಕೃತಿಗಳ ಕ್ರಿಯಾಶೀಲ ನಡವಳಿಕೆಯಲ್ಲಿ ವಿವಿಧ ಆಯಾಮಗಳಲ್ಲಿ ವಿಸ್ತಾರಗೊಳ್ಳುತ್ತ ಬೆಳೆದು ಬಂದಿದೆ. ಅದು ಜನಮಾನಸದಲ್ಲಿ ಮತ್ತು ಕನ್ನಡ ಹಸ್ತಪ್ರತಿಗಳಲ್ಲಿ ವಿವಿಧ ಮಜಲುಗಳನ್ನು ಪಡೆಯುತ್ತ ವಿಸ್ತೃತಗೊಳ್ಳುತ್ತ ಬಂದಿದೆ. ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳನ್ನು ಸಂಸ್ಕೃತ ಜಗತ್ತಿನ ಸಾಮ್ರಾಜ್ಯಶಾಹಿ ಧೋರಣೆಯಿಂದ ಹಿಡಿದು ನವವಸಾಹತುಶಾಹಿ ಕಾಲದವರೆಗೂ ಅಧಿಕಾರ, ಅಭಿವ್ಯಕ್ತಿ ಹಾಗೂ ಧರ್ಮಗಳು ತಮಗನುಕೂಲಕರವಾದ ರೀತಿಯಲ್ಲಿ ಬೆಳೆಸಿಕೊಂಡು ಬಂದಿವೆ. ಅವುಗಳು ಭಾರತೀಯ ಸಂಸ್ಕೃತಿ ಎನ್ನುವ ಅಖಂಡ ಹಾಗೂ ಸಾಂಪ್ರದಾಯಿಕ ನೆಲೆಗಳಿಂದ ರೂಪಗೊಂಡಂಥವು.

೩. ವೈದ್ಯಶಾಸ್ತ್ರ ಸಾಹಿತ್ಯ ಸಂಪತ್ತನ್ನು ಗರ್ಭೀಕರಿಸಿಕೊಂಡಿರುವ ಕನ್ನಡ ಹಸ್ತಪ್ರತಿಗಳನ್ನು ತುಂಬಾ ಸೂಕ್ಷ್ಮವಾಗಿ ಅಧ್ಯಯನಿಸುವ ಮೂಲಕ ಅವುಗಳ ಸಂವಹನಾ ಪಾತಳಿಯನ್ನು ಮರು ಸಂಯೋಜಿಸಿಕೊಳ್ಳಲಾಗಿದೆ. ಈ ಹಸ್ತಪ್ರತಿಗಳು ಇಂಥ ಶಾಸ್ತ್ರವನ್ನು ಪ್ರತಿಪಾದಿಸಲು ಸೀಮಿತ ಮನಸ್ಸಿನ ನಮ್ಮ ಕಣ್ಣುಗಳನ್ನು ತೆರೆಸಿವೆ. ಪ್ರಾಚೀನ ವೈದ್ಯಶಾಸ್ತ್ರವು ತ್ರಿದೋಷದ ಆಧಾರದ ಮೇಲೆ ರಚನೆಗೊಂಡಿದ್ದು, ಮನುಷ್ಯನ ಎಲ್ಲಾ ತೆರನಾದ ರೋಗರುಜಿನಗಳನ್ನು ಹೋಗಲಾಡಿಸುವ ಔಷಧೋಪಚಾರವನ್ನು ಹೊಂದಿವೆ. ಪ್ರಕೃತಿಜನ್ಯ ವಸ್ತುಗಳನ್ನು ಒಳಗೊಂಡಿದ್ದು ರೋಗಿಯನ್ನು ರೋಗದಿಂದ ಮುಕ್ತಗೊಳಿಸುವ ಮತ್ತು ರೋಗ ಬಾರದಂತೆ ಸಂರಕ್ಷಿಸುವ ವಿಷಯ ವೈವಿಧ್ಯತೆಯನ್ನು ನಿರ್ದೇಸಿಸುತ್ತದೆ. ಮನುಕುಲದ ಏಳ್ಗೆಗಾಗಿ ಅವತರಿಸಿದ ಈ ಶಾಸ್ತ್ರವು ಜನಸಮುದಾಯದಲ್ಲಿ ಮಾನವೀಯತೆ ಮತ್ತು ಧಾರ್ಮಿಕತೆಯ ಹಿನ್ನೆಲೆಯಲ್ಲಿ ಬೆಳೆದುದಾಗಿದೆ. ಸಕಲ ಜೀವಿಗಳಿಗೂ ಲೇಸನ್ನು ಬಯಸುವ ವೈದ್ಯಶಾಸ್ತ್ರವು ಶ್ರೇಯಸ್ಸಿಗಾಗಿ ದಾನದ ರೂಪದಲ್ಲಿಯೂ ಬೆಳೆದುಕೊಂಡು ಬಂದಿದೆ.

೪. ಬಹುಮುಖ್ಯವಾಗಿ ಮೌಖಿಕ ಸಂಪ್ರದಾಯ ಮತ್ತು ಪ್ರಕೃತಿ (ಪರಿಸರ)ಯನ್ನು ಹೆಚ್ಚು ಒಳಗೊಂಡಿರುವ ದೇಶಿ ವೈದ್ಯಶಾಸ್ತ್ರವು ಸಾಹಿತ್ಯ ವಲಯದಲ್ಲಿ ಲೌಕಿಕ ಸಾಹಿತ್ಯ ಎಂದು ಕರೆಸಿಕೊಳ್ಳುವ ಮೂಲಕ ಉಪೇಕ್ಷೆಗೆ ಒಳಗಾಗಿದೆ. ಇಂದು ದೊರಕುವ ನೂರಾರು ಹಸ್ತಪ್ರತಿಗಳು ಒಂದು ನಂಬಿಕೆ ಪ್ರಧಾನವಾದ ಮನುಷ್ಯ ಬದುಕಿನ ಸಂಗತಿಗಳನ್ನು ಎತ್ತಿ ಹೇಳುತ್ತವೆ. ಈ ಕನ್ನಡ ವೈದ್ಯಶಾಸ್ತ್ರ ಹಸ್ತಪ್ರತಿಗಳು ವೈದಿಕ ಶಾಹಿ ಮತ್ತು ವಸಾಹತುಶಾಹಿ ಗುಂಗಿನಿಂದ ಹೊರ ಬಂದು ಜನ ಸಮುದಾಯದವನ್ನು

ತಮ್ಮೆಡೆ ಬರುವಂತೆ ಈ ಪರಂಪರೆಯ ಪ್ರಯೋಗಿಕ ನೆಲೆಯನ್ನು ಬಿತ್ತರಿಸಲು ಸಾಕ್ಷಿಯಾಗಿವೆ. ಹೀಗೆ ಭಾರತೀಯ ಪರಂಪರೆಯ ವೈದ್ಯಶಾಸ್ತ್ರವು ಸಮಾಜದ ಸಹಜ ಬೆಳವಣಿಗೆಯೊಂದಿಗೆ ಥಳಕು ಹಾಕಿಕೊಂಡು ಶುದ್ದ ಮತ್ತು ಪಾವಿತ್ರ್ಯದ ಹೆಸರಿನಲ್ಲಿ ಸಾಮಾಜಿಕ ವಾಸ್ತವಗಳನ್ನು ಅದರ ಬಹುಮುಖ ಕೋನಗಳನ್ನು ಧಿಕ್ಕರಿಸಿ ಯಾವಾಗಲೂ ಕ್ರಿಯೆ ಮತ್ತು ಅರಿವು, ಬುದ್ಧಿ ಮತ್ತು ಭಾವದ ಸಂಯೋಜನೆಯಿಂದ ಸೃಷ್ಟಿ ಕ್ರಿಯೆಯ ದಾರಿಗಳನ್ನು ರೂಪಿಸಿಕೊಂಡು ಹೋಗುತ್ತಿದೆ. ಇವುಗಳ ಬಹುಮುಖ್ಯ ಗುಣವೇ ಪ್ರಯೋಜನ ಮುಖಿಯಾದದ್ದು. ಈ ಜನೋಪಕಾರಿ ವೈದ್ಯಶಾಸ್ತ್ರ ಕೃತಿಗಳು ಸಂಸ್ಕೃತಿಮುಖಿ ನಿರ್ವಚನದ ದೃಷ್ಟಿಯಿಂದ ಮುಖ್ಯವಾದಂಥವು. ಇವುಗಳು ಸಾಂಸ್ಕೃತಿಕ ಅಧ್ಯಯನದ ಪರಿಕಲ್ಪನೆಯಲ್ಲಿ ಸಮಾಜದ ಹಲವು ಕ್ಷೇತ್ರಗಳಲ್ಲಿ ಒಂದು ಪ್ರಭಾವಶಾಲಿ ಸ್ಥಾನ ಪಡೆದಿವೆ. ಇವುಗಳ ಸೃಷ್ಟಿಯ ಹಿಂದೆ ಆಯುರಾರೋಗ್ಯಭಾಗ್ಯ, ಸಂತಾನಪ್ರಾಪ್ತಿ, ಜೀವನಸುಖ, ಮೋಕ್ಷ ಸಂಪಾದನೆಯಂಥ ಬಹುಮುಖಿ ಉದ್ದೇಶಗಳನ್ನು ಹೊಂದಿದೆ.

೫. ಕನ್ನಡ ವೈದ್ಯಶಾಸ್ತ್ರ ಕೃತಿಗಳ ಪರಂಪರೆ ಆರಂಭಗೊಳ್ಳುವುದೇ ಜೈನರಿಂದ. ನಂತರ ವೀರಶೈವ ವೈದಿಕ ಸಾಂಪ್ರದಾಯದ ಕೃತಿಗಳು ರಚಿತವಾದರೂ ಅವೆಲ್ಲವೂಗಳ ಘೋಷಿತ ಉದ್ದೇಶ, ಆರೋಗ್ಯವಂತ ಸಮಾಜದ ನಿರ್ಮಾಣವೆಂಬುದು ವಿಶೇಷ. ಗಳಿಕೆ ಅಥವಾ ಶೋಷಣೆಗಿಂತ ಸೇವೆ ಅವುಗಳ ನಿತ್ಯ ಉದ್ದೇಶವಾಗಿತ್ತು. ಸರ್ವಜನೋಪಕಾರ ಅವುಗಳ ತಾತ್ವಿಕತೆಯಾಗಿತ್ತು.

೬. ಸಾಮಾನ್ಯವಾಗಿ ಆಯುರ್ವೇದ ಅಥವಾ ದೇಶಿ ವೈದ್ಯವನ್ನು ಅನುಪಯುಕ್ತ ಅಳಲೆಕಾಯಿ ವೈದ್ಯ ಎಂದು ಉಪೇಕ್ಷೆ ಅಥವಾ ವಿಡಂಬಣೆ ಮಾಡುತ್ತ ಬರಲಾಗಿದೆ. ಈ ವೈದ್ಯ ಪದ್ಧತಿಯಲ್ಲಿ ಕಾಣುವ ಬಾಲ, ಸ್ತ್ರೀ, ಪುರುಷ, ವಿಷ ಮತ್ತು ಪ್ರಾಣಿವೈದ್ಯ ಎಂಬ ಪ್ರಕಾರಗಳಲ್ಲಿ ರೋಗನಿಧಾನದ ವಿಧಾನಗಳು, ಔಷಧಿ ವೈವಿಧ್ಯತೆ ಹಾಗೂ ತಯಾರಿಕೆಯ ವಿಧಾನಗಳು ಇವೆಲ್ಲ ತುಂಬ ಕುತೂಹಲಕರವಾದಂತ ಸಂಗತಿಗಳಾಗಿವೆ. ನಿಸರ್ಗದೊಂದಿಗೆ ಸಾವಯವ ಸಂಬಂಧ ಹೊಂದಿರುವ ಇವು ಮನುಷ್ಯನ ಆರೋಗ್ಯ ರಕ್ಷಣೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತ ಬಂದಿದೆ. ಇಲ್ಲಿನ ಸೂಕ್ಷ್ಮ ವೈವಿಧ್ಯತೆಯೇ ಬಹುಶಃ ಇವತ್ತಿನ ಆಧುನಿಕ ವೈದ್ಯಕೀಯ ಕ್ಷೇತ್ರದ ವಿವಿಧ ಪರಿಣತಿಗಳಿಗೆ ಪ್ರೇರಣೆಯಾಗಿವೆ. ಇಂದು ಮಾನವ ದೇಹವನ್ನು ಅಡ್ಡ ಉದ್ದ ಕತ್ತರಿಸಿ ಅಂಗಗಳಿಗೊಬ್ಬ ತಜ್ಞ ವೈದ್ಯ ಇರುವುದನ್ನ ಕಾಣುತ್ತೇವೆ.

೭. ಈ ಅಧ್ಯಯನದಿಂದ ಕಂಡ ಮತ್ತೊಂದು ವಿಶೇಷತೆ ಎಂದರೆ ವೈದ್ಯಶಾಸ್ತ್ರ ಎನ್ನುವುದು ಒಟ್ಟು ಕನ್ನಡ ಸಾಹಿತ್ಯ ಸಂಸ್ಕೃತಿಯೊಳಗೆ ಒಂದು ಜನವಿದೂರ ಶಾಸ್ತ್ರ ಪದ್ಧತಿಯಾಗಿರದೆ 'ಸುಜ್ಞಾನ ದಾಸೋಹ'ವಾಗಿ ಬೆಳೆದು ಬಂದಿರುವುದು. ವಿಶೇಷವಾಗಿ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಸಿಗುವ ಉಲ್ಲೇಖಗಳು ಲೋಕೋಪಯೋಗಿ ವೈದ್ಯದ ಕುರಿತು ಮಾಹಿತಿ ನೀಡುತ್ತವೆ. ಯುದ್ದ ಸಂದರ್ಭ, ಕ್ಷಾಮ, ವಿಷಪ್ರಾಶನ ಇತ್ಯಾದಿ ಸಂದರ್ಭಗಳಲ್ಲಿ ಕಾಣುವ ಹೆಚ್ಚಿನ ಚಿಕಿತ್ಸಾ ಕ್ರಮಗಳು ವೈದ್ಯಶಾಸ್ತ್ರದ ನಿರ್ದಿಷ್ಟತೆಗಿಂತ ಅದರ ಕ್ರಿಯಾಶೀಲ ನೆಲೆಗಳನ್ನು ಗ್ರಹಿಕೆಗೆ ತರುತ್ತದೆ. ವೈದ್ಯವೆಂದರೆ ಅದು ಬರೀ ಒಂದು ಚಿಕಿತ್ಸಾ ವಿಧಾನವಲ್ಲ ಅದು ಬದುಕುವ ಹಾಗೂ ಇರುವಿಕೆಯ ವಿಧಾನವೂ ಆಗಿದೆ.

೮. ವೈದ್ಯಕೀಯ ಸೇವೆಗೂ ಹಾಗೂ ಪುರುಷಾರ್ಥ ಫಲಪ್ರಾಪ್ತಿಗೂ ಇರುವ ಸಂಬಂಧ ಸ್ರಾಂಪ್ರದಾಯಿಕ ವೈದ್ಯಕೀಯದಲ್ಲಿ ಮುಖ್ಯವಾದದ್ದು. ಧರ್ಮ ಅರ್ಥ ಕಾಮ ಮೋಕ್ಷಗಳ ಪೂರ್ಣಪ್ರಾಪ್ತಿಯಾಗಬೇಕಾದರೆ ಮನುಷ್ಯನಿಗೆ ಆರೋಗ್ಯ ಮುಖ್ಯ. ವೈದಿಕ ಪ್ರಣೀತ ಇಂಥ ಆಲೋಚನೆಗಳು ವೈದ್ಯಶಾಸ್ತ್ರವನ್ನು ಕರ್ಮಟಗೊಳಿಸಿದ್ದೇನೋ ನಿಜ. ಆದರೆ ಕನ್ನಡ ಕೃತಿ ಹಾಗೂ ಸಂಸ್ಕೃತಿಗಳು ಇದನ್ನು ಭಿನ್ನವಾಗಿ ನಿರ್ವಚಿಸಿಕೊಂಡಿದ್ದು ವಿಶೇಷವಾಗಿದೆ. ಮನುಷ್ಯ ಶರೀರವು ಪಂಚಭೂತಗಳಿಂದಾದದ್ದು. ಇವುಗಳಿಗೆ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೇ ಮೂಲವೆಂದು ಈ ಪಂಚಭೂತ ಮತ್ತು ತ್ರಿದೋಷಗಳ (ವಾತ, ಪಿತ್ತ, ಕಫ) ಫಲವಾಗಿ ಮನುಷ್ಯ ಶರೀರ ಸಕಲ ರೋಗಗಳಿಗೆ ಕಾರಣವಾಗುತ್ತದೆಂದು ಹೇಳಲಾಗುತ್ತದೆ. ಋತುಮಾನಕ್ಕನುಗುಣವಾಗಿ ಕಾಣಿಸುವ ಈ ತ್ರಿದೋಷಗಳಿಗೆ ಅಷ್ಟೇ ಸಾವಯವ ರೂಪದ ಔಷಧಿ ಮಾಡುವುದು ಮತ್ತೊಂದು ವಿಶೇಷವಾಗಿದೆ.

೯. ಕನ್ನಡ ಸಂಸ್ಕೃತಿಯಲ್ಲಿ ವೈದ್ಯ ಎನ್ನುವುದು ಒಂದು ಅಮೂರ್ತ ಹಾಗೂ ಅತಿಮಾನುಷ ಕಲ್ಪನೆಯಾಗಿರದೆ, ಅದು ಅನುಭವವನ್ನು ಮಾನುಷ ಕ್ರಿಯೆಯಾಗಿಸುವುದು. ಋತುಮಾನಕ್ಕನುಗುಣವಾಗಿ ದೇಹ ಹಾಗೂ ಮನಸ್ಸುಗಳಲ್ಲಾಗುವ ವ್ಯತ್ಯಾಸಗಳನ್ನು ನಿಧಾನಗೊಳಿಸುವ ಪ್ರಯೋಗಶೀಲ ಶಾಸ್ತ್ರವಾಗಿ ಅದು ಬಳಕೆಯಲ್ಲಿರುವುದು.

೧೦. ಇಂದು 'ಸ್ತ್ರೀವಾದ' ಮಹಿಳಾ ಅಧ್ಯಯನ ಮಹಿಳಾ ಆರೋಗ್ಯ ಎಂದು ಹೊಸ ಶಿಸ್ತುಗಳೇ ಪ್ರಚಲಿತವಿರಬಹುದು. ವಿಶೇಷವೆಂದರೆ ಸ್ತ್ರೀರೋಗ-ಕಾರಣ ಪರಿಹಾರಗಳಿಗೆ ಸಂಬಂಧಿಸಿದ ಸ್ತ್ರೀ ವೈದ್ಯ ಗ್ರಂಥವನ್ನು ತಿಮ್ಮಣ್ಣನೆಂಬ ಕವಿ ಆ ಕಾಲದಲ್ಲೆ ರಚಿಸಿದ್ದು ವಿಶೇಷ ಸಂಗತಿ. ಇದೂ ಅಲ್ಲದೆ ಲೋಕೋಪಕಾರ, ಸಕಲವೈದ್ಯ ಸಂಹಿತಸಾರಾರ್ಣವಂ, ಕಲ್ಯಾಣಕಾರಕದಂತಹ ಕೃತಿಗಳಲ್ಲಿ – ಮುಟ್ಟಿನ ತೊಂದರೆ, ಕೆಂಪು ಸೆರಗು, ಬಿಳಿಸೆರುಗು, ಸ್ತನರೋಗ, ಬಂಜೆರೋಗ, ಗರ್ಭಪಾತ, ಎದೆಹಾಲು ವೃದ್ಧಿ ಇತ್ಯಾದಿ ಸ್ತ್ರೀ ಸಂಬಂಧಿ ಸೂಕ್ಷ್ಮಗಳಿಗೆಲ್ಲಾ ರೋಗಲಕ್ಷಣಗಳು, ಅದರ ಚಿಕಿತ್ಸಾ ವಿಧಾನಗಳು, ಔಷಧಿ ಹೆಸರುಗಳು ಕೊಡುವ ಪದ್ಧತಿ ಕುರಿತು ಅತ್ಯಂತ ನಿಖರವಾಗಿ ಹೇಳಲಾಗಿದೆ. ಇವತ್ತಿನ ಹಾಗೆ ಅಂದು ಶಿಶುಗಳಿಗೆ ವಿಷ ಪ್ರಾಶನ ಮಾಡಿಸುವುದು, ಹೆಣ್ಣು-ಗಂಡು ಎಂದು ನಾಡಿ ಚಲನೆ ಮೇಲೆ ಗುರುತಿಸಿ ನಿರ್ಧರಿಸುವ ಸಂಗತಿಗಳಿದ್ದದ್ದು ಕುತೂಹಲವಾದುದ್ದಾಗಿದೆ.

೧೧. ವೈದ್ಯಶಾಸ್ತ್ರ – ಯೋಗಶಾಸ್ತ್ರ, ಸೂಪಶಾಸ್ತ್ರ, ಸಸ್ಯಶಾಸ್ತ್ರ, ಮನಶಾಸ್ತ್ರ ಇವುಗಳ ಪರಸ್ಪರ ಅಂತರ್ ಸಂಬಂಧ ಹೊಂದಿರುವ ಸಂಗತಿಗಳನ್ನಿಲ್ಲಿ ಮುಖ್ಯವಾಗಿ ಚರ್ಚಿಸಲಾಗಿದೆ. ಇಡೀ ಆಯುರ್ವೇದ ಪದ್ಧತಿಯು ರೋಗಿಯ ಚಲನವಲನ, ಮನಸ್ಥಿತಿ ಆರೋಗ್ಯ ಹದಗೆಡಲಿಕ್ಕೆ ಕಾರಣವಾದ ಸಂಗತಿಗಳನ್ನು ಸಾಧ್ಯಾಂತವಾಗಿ ತಿಳಿದುಕೊಂಡ ಮೇಲೆ ಸಮಸ್ಯೆಗನುಗುಣವಾಗಿ ಚಿಕಿತ್ಸಾಕ್ರಮ ಅನುಸರಿಸುವುದು ವಿಶೇಷ. ವೈದ್ಯ ಮುಖ್ಯವಾಗಿ ರೋಗಿಯೊಂದಿಗೆ ಮಾತನಾಡುವ ರೀತಿ, ಸ್ಪರ್ಷ, ವಿಶ್ವಾಸ ಇವು ಇಂದಿನ ಟಚ್‌ಥೆರಪಿಯನ್ನೇ ಧ್ವನಿಸುವಂತಿವೆ. ರೋಗ-ಕಾರಣ ಹಾಗೂ ಪರಿಹಾರ ವಿಧಿವಿಧಾನಗಳನ್ನು ಸಾಂಸ್ಕೃತಿಕ ಸಂಸರ್ಗದೊಂದಿಗೆ ಮಾಡುವುದನ್ನು ಇಲ್ಲಿ ಕಾಣುತ್ತೇವೆ. ಆ ಮೂಲಕ ವ್ಯಕ್ತಿ ಧನಾತ್ಮಕ ಮನೋಧೋರಣೆಯನ್ನು

ಬೆಳೆಸಿಕೊಳ್ಳಲು ಅಗತ್ಯವಾದ ಮಾರ್ಗೋಪಾಯಗಳನ್ನು ಸೂಚಿಸಿ ವ್ಯಕ್ತಿ ಮಾನಸಿಕ ಸಮತೋಲನ ಪಡೆಯಲು ನೆರವಾಗುವುದು. ವ್ಯಕ್ತಿ ತನ್ನ ಸುತ್ತ ಮುತ್ತಲ ಸಾಮಾಜಿಕ ವಾತಾವರಣಕ್ಕೆ ಹೊಂದಾಣಿಕೆ ಮಾಡಿಕೊಂಡು ಬದುಕಲು ಬೇಕಾದ ಅಗತ್ಯ ದೈಹಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಸಾಧನೆಗೆ ನೆರವಾಗುವುದು ಈ ವೈದ್ಯ ಪದ್ಧತಿಯ ಗುಣವಾಗಿದೆ.

೧೨. ವಾತ, ಪಿತ್ತ, ಕಫ ಈ ತ್ರಿದೋಷಗಳು ಮಾನವ ದೇಹದ ಭೌತಿಕ, ರಾಸಾಯನಿಕ ಹಾಗೂ ಮಾನಸಿಕ ಕ್ರಿಯೆಗಳನ್ನು ನಿಯಂತ್ರಿಸುವ ಮೂರು ನೈಸರ್ಗಿಕ ತತ್ವಗಳು. ಇವುಗಳಲ್ಲಿ ಕಫವು ಬೆಳವಣಿಗೆಯನ್ನೂ, ಪಿತ್ತವು ಬದಲಾವಣೆಯನ್ನೂ, ವಾತವು ನಿಯಂತ್ರಣ ಹಾಗೂ ಸಮತೂಕವನ್ನೂ ಪ್ರತಿನಿಧಿಸುತ್ತದೆ. ಈ ಮೂರು ತತ್ವಗಳ ಮೇಲೆ ಪ್ರಭಾವ ಬೀರುವ ಔಷಧಿ ಸಸ್ಯಗಳ ಗುಣ ಸಾಮರ್ಥ್ಯವನ್ನು ಮಾನವನ ಜೀರ್ಣಕ್ರಿಯೆಯ ಮೂಲಕ ತಿಳಿಯುವ ವಿಶಿಷ್ಟ ಸಿದ್ಧಾಂತ ದೇಶಿ ವೈದ್ಯಪದ್ಧತಿಯಲ್ಲಿದೆ.

೧೩. ಒಟ್ಟಿನಲ್ಲಿ ಇಡೀ ವೈದ್ಯಪದ್ಧತಿ ಪ್ರಕೃತಿ ಹಾಗೂ ಋತುಮಾನಗಳ ಚಲನೆಯನ್ನಾಧರಿಸಿದ್ದು ಬಹುಮುಖ್ಯ ವಿಚಾರ. ಧಾರ್ಮಿಕ, ಸಾಮಾಜಿಕ, ಭೌಗೋಳಿಕ, ವೈವಿಧ್ಯತೆಯನ್ನು ಪ್ರಧಾನವಾಗಿ ನೆಚ್ಚಿಕೊಂಡಿದೆ. ಹೀಗಾಗಿ ಅದೊಂದು ಬಹು ಆಯಾಮವುಳ್ಳ ಪರಸ್ಪರ ಅಂತಸಂಬಂಧವುಳ್ಳ ತಿಳುವಳಿಕೆಯಾಗಿದೆ. ಈ ದೃಷ್ಟಿಯಿಂದ ಸಂಸ್ಕೃತಿ ಅಧ್ಯಯನಕ್ಕೆ ಕುತೂಹಲ ಸಂಗತಿಗಳನ್ನೊದಗಿಸುವ ಶಿಸ್ತು ಆಗಿದೆ ಎನ್ನುವುದು ಈ ಅಧ್ಯಯನದ ಮುಖ್ಯ ತಾತ್ಪರ್ಯವಾಗಿದೆ.

ಈ ಕುರಿತು ಮುಂದಿನ ಅಧ್ಯಯನಕ್ಕೆ ಕೆಳಗಿನ ಸೂಚನೆಗಳನ್ನು ನೀಡಬಹುದಾಗಿದೆ.

* ಮಧ್ಯಕಾಲೀನ ಕರ್ನಾಟಕದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ಸಕಲ ಪ್ರಾಣಿಗಳ ದೈಹಿಕ, ಮಾನಸಿಕ ನೆಮ್ಮದಿಗಾಗಿ ರಚನೆಗೊಂಡ ವೈದ್ಯಶಾಸ್ತ್ರದ ಹಸ್ತಪ್ರತಿಗಳನ್ನು ಪ್ರಕಟಿಸುವ ತುರ್ತು ಇದೆ.
* ಈ ಅಧ್ಯಯನದಲ್ಲಿ ಗುರುತಿಸಿದ ಕರ್ತೃ, ಕಾಲ ಮತ್ತು ಸಮಗ್ರ ಕೃತಿಗಳನ್ನು ಒಂದೊಂದೆ ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದಾಗಿದೆ.
* ಕರ್ನಾಟಕ ಮತ್ತು ಹೊರ ರಾಜ್ಯಗಳಲ್ಲಿರುವ ಎಲ್ಲಾ ವೈದ್ಯಶಾಸ್ತ್ರ ಹಸ್ತಪ್ರತಿಗಳನ್ನು ಪರಿಶೀಲಿಸಿ ಅವುಗಳನ್ನು ಡಿಜಿಟಲೈಜೆಷನ್, ಸ್ಕ್ಯಾನರ್, ಕಂಪ್ಯೂಟರ್‌ನಂಥ ಆಧುನಿಕ ಸೌಲಭ್ಯಗಳ ಸಹಾಯದಿಂದ ತುಂಬ ಕ್ಷೀಣಸ್ಥಿಯಲ್ಲಿರುವ ಹಸ್ತಪ್ರತಿಗಳನ್ನು ಸಂರಕ್ಷಿಸಬೇಕಾಗಿದೆ.

❑❑❑

# ಅನುಬಂಧಗಳು

೧. ಆಕರ ಗ್ರಂಥಗಳು

೧.೧. ಪುಸ್ತಕಗಳು

೧.೨. ಹಸ್ತಪ್ರತಿಗಳು

೧.೩. ಲೇಖನಗಳು

೨. ಸಂಕ್ಷೇಪ ಸೂಚಿ

## ೧. ಆಕರ ಗ್ರಂಥಗಳು

### ೧.೧. ಪುಸ್ತಕಗಳು


೧. ಅಂಬಳಿಕೆ ಹಿರಿಯಯಣ್ಣ, ೧೯೮೭, ಜಾನಪದ ವೀಕ್ಷಣೆ, ಪ್ರಜ್ವಲ ಪ್ರಕಾಶನ, ಮೈಸೂರು

೨. ಅಂಬಳಿಕೆ ಹಿರಿಯಣ್ಣ, ೧೯೯೪, ಜಾನಪದ ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೩. ಅನಂತರಾಮನ್ ಎನ್., ೧೯೯೧, ಔಷಧಿಯ ಸಸ್ಯಗಳು, ಭಾರತೀಯ ವೈದ್ಯಪದ್ಧತಿಗಳ ನಿರ್ದೇಶನಾಲಯ, ಬೆಂಗಳೂರು

೪. ಅನಂತರಂಗಾಚಾರ್ (ಸಂ), ೧೯೭೩, ಕರ್ನಾಟಕ ಪಂಚತಂತ : ದುರ್ಗಸಿಂಹ, ಶಾರದಾ ಮಂದಿರ, ಮೈಸೂರು

೫. ಅನಂತರಂಗಾಚಾರ್ ಎನ್., (ಸಂ), ೧೯೭೭, ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ಸಾಹಿತ್ಯ ಪರಿಷತ್ತು, ಬೆಂಗಳೂರು

೬. ಅನಂತರಂಗಾಚಾರ್ ಎನ್., ೧೯೭೦, ಸಾಹಿತ್ಯ ಭಾರತೀ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು

೭. ಅನಂತರಂಗಾಚಾರ್ ಎನ್., ೧೯೭೨ ಸೂಕ್ತಿಸುಧಾರ್ಣವಂ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೮. ಅಯ್ಯಂಗಾರ ಬಿ.ಎಸ್.(ಮೂಲ), (ಅನು)ಗಗನ, ೨೦೦೦, ಆರೋಗ್ಯಯೋಗ, ಹೇಮಗಿರಿ ಗ್ರಾಫಿಕ್ಸ್, ಚಾಮರಾಜಪೇಟೆ

೯. ಆಲೂರು ಕೆ.ಆರ್., ೧೯೭೪, ಪಶುವೈದ್ಯಕೀಯ ವಿಜ್ಞಾನ, ಕನ್ನಡ ಅಧ್ಯಯನ ವಿಭಾಗ ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

೧೦. ಆಯುರ್ವೇದಾಚಾರ್ಯ ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳವರು, ೧೯೯೯, ಆರೋಗ್ಯ ದರ್ಪಣ, ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು

೧೧. ಉತ್ತಂಗಿ ಚನ್ನಪ್ಪ (ಸಂ), ೨೦೦೪, ಸರ್ವಜ್ಞನ ತ್ರಿಪದಿಗಳು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

೧೨. ಕಲಬುರ್ಗಿ ಎಂ.ಎಂ. (ಪ್ರ.ಸಂ), ಕನ್ನಡ ಅಧ್ಯಯನ ಪಿಠದ ಹಸ್ತಪ್ರತಿ ಸೂಚಿ ಸಂಪುಟಗಳು–೧–೮, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೩. ಕಲಬುರ್ಗಿ ಎಂ.ಎಂ, ೧೯೭೩, ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೪. ಕಲಬುರ್ಗಿ ಎಂ.ಎಂ, ೨೦೦೪, ಮಾರ್ಗ–೪, ಸಪ್ನಬುಕ್‌ಹೌಸ್, ಬೆಂಗಳೂರು

೧೫. ಕಲಬುರ್ಗಿ ಎಂ.ಎಂ. (ಪ್ರ.ಸಂ), ೧೯೯೬, ಮಾನಸೊಲ್ಲಾಸ ಸಂಪುಟ–೧, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೬. ಕುಮುದಿನಿ (ಅನು), ೧೯೮೨, ಪ್ರಾಚೀನ ಭಾರತದಲ್ಲಿ ಬೇಸಾಯ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

೧೭. ಕುವೆಂಪು, ಮಾಸ್ತಿ ವೆಂಕಟೇಶ ಐಯ್ಯಂಗಾರ್ (ಸಂ), ೧೯೭೪, ಕರ್ಣಾಟಕ ಭಾರತ ಕಥಾ ಮಂಜರಿ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೮. ಕೃಷ್ಣಜೋಯಿಸ ಎಸ್.ಎನ್. (ಸಂ), ೧೯೬೯, ಸೂಪಶಾಸ್ತ್ರ : ಮಂಗರಸ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೯. ಗೀತಾಚಾರ್ಯ ನಾ., ೨೦೦೧, ಹಸ್ತಪ್ರತಿಶಾಸ್ತ್ರ ವಿವೇಚನ, ಸ್ನೇಹನಿಧಿ ಬಳಗ, ಬೆಂಗಳೂರು

೨೦. ಗುಂಡ್ಮಿ ಚಂದ್ರಶೇಖರ ಐತಾಳ್, ೨೦೦೯, ದುರ್ಗಸಿಂಹ ಕವಿಯ ಕರ್ನಾಟಕ ಪಂಚತಂತ್ರ (ಗದ್ಯಾನುವಾದ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨೧. ಗುರುರಾಜ ಮೆಸರ್ಸ ಟಿ. ನಾರಾಯಣ, ೧೯೯೭, ಆಯುರ್ವೇದ ಕೈಪಿಡಿ, ಅಯ್ಯಂಗಾರ್ ಪ್ರಕಾಶನ ಬಳಪೇಟೆ, ಬೆಂಗಳೂರು

೨೨. ಗೋಪಾಲಕೃಷ್ಣರಾವ್ ಎಂ., ೧೯೮೪, ಆಯುರ್ವೇದಿಯ ಪ್ರಕೃತಿ ಚಿಕಿತ್ಸೆ; ಸಾಹಿತ್ಯ ಭಂಡಾರ, ಬೆಂಗಳೂರು

೨೩. ಗೋಪಾಲಕೃಷ್ಣರಾವ್ ಎಂ., ೧೯೭೪, ಉಪಯುಕ್ತ ಗಿಡಮೂಲಿಕೆಗಳು, ಸಾಹಿತ್ಯ ಭಂಡಾರ, ಬೆಂಗಳೂರು

೨೪. ಚಂದ್ರಶೇಖರ ಕಂಬಾರ, ೨೦೦೪, ದೇಶೀಯ ಚಿಂತನ, ಅಂಕಿತ ಮಸ್ತಕ ಪ್ರಕಾಶನ, ಬೆಂಗಳೂರು

೨೫. ಚಂದ್ರಮೌಳಿ ಎಸ್.ನಾಯ್ಕರ, ೧೯೯೯, ಆಯುರ್ವೇದ ಪದಾರ್ಥ ವಿಜ್ಞಾನ, ಮೇಧಾ ಪಬ್ಲಿಶರ್ಸ ಸಂಕಲ್ಪ ಧಾರವಾಡ

೨೬. ಚಿದಾನಂದಮೂರ್ತಿ ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೭. ಡಿ.ವಿ.ಜಿ., ೨೦೦೬, ಸಂಸ್ಕೃತಿ, ಕಾವ್ಯಾಲಯ ಪ್ರಕಾಶನ, ಜಯನಗರ ಮೈಸೂರು

೨೮. ತಿಪ್ಪೆರುದ್ರಸ್ವಾಮಿ ಎಚ್. (ಪ್ರ.ಸಂ), ೧೯೮೫, ಮನೋರೋಗ ವಿಜ್ಞಾನ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೯. ತಿರುಕ, ೧೯೯೪, ಸ್ವಯಂ ವೈದ್ಯ, ಅನಾಥಸೇವಾಶ್ರಮ ವಿಶ್ವಸಮಿತಿ, ಮಲ್ಲಾಡಿ ಹಳ್ಳಿ

೩೦. ತಿರುಕ, ೧೯೭೩, ಪ್ರಾಣಾಯಾಮ (ದೇಹಸ್ವಾಸ್ಥ್ಯ ಮತ್ತು ಸಾಕ್ಷಾತ್ಕಾರ), ಅನಾಥಸೇವಾಶ್ರಮ ವಿಶ್ವಸಮಿತಿ, ಮಲ್ಲಾಡಿಹಳ್ಳಿ

೩೧. ದೇವರಾಜ ಟಿ.ಎಲ್., ೧೯೮೮, ಅಡಿಗೆ ಮನೆಯಲ್ಲಿ ಔಷಧ, ಭಾರತೀಯ ವೈದ್ಯ ಪದ್ಧತಿಗಳ ನಿರ್ದೇಶನಾಲಯ, ಬೆಂಗಳೂರು

೩೨. ದೇವೀರಪ್ಪ ಹೆಚ್., ೧೯೭೭, ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩೩. ದೇವೀರಪ್ಪ ಹೆಚ್., ೧೯೮೪, ಸಂಶೋಧನ ಸಂಪುಟ, ಶಿವಕುಮಾರ ಪ್ರಕಾಶನ, ಬೆಂಗಳೂರು

೩೪. ದೇವರಾಜ ಬಿ.ಎಲ್., ೧೯೮೧, ಆಯುರ್ವೇದದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಧನ್ವಂತರಿ ಓರಿಯಂಟಲ್ ಪಬ್ಲಿಕೇಷನ್ಸ್, ಬೆಂಗಳೂರು

೩೫. ಧನ್ಯಕುಮಾರ ಇಜಾರಿ, ೨೦೦೩, ಜೈನ ವೈದ್ಯಕೀಯ ಪರಂಪರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೬. ಧನ್ಯಕುಮಾರ ಇಜಾರಿ, ೧೯೭೦, ಆಯುರ್ವೇದ ವಿಜ್ಞಾನ, ಪಠ್ಯಪುಸ್ತಕ ನಿರ್ದೇಶನಾಲಯ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೩೭. ನರಸಿಂಹಾಚಾರ್ ಡಿ.ಎಲ್. (ಸಂ), ೧೯೯೮, ವಡ್ಡಾರಾಧನೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೩೮. ನರಸಿಂಹಾಚಾರ್ ಡಿ.ಎಲ್., ೨೦೦೫, ಪೀಠಿಕೆಗಳು ಲೇಖನಗಳು, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು

೩೯. ನರಸಿಂಹಾಚಾರ್ಯ ಆರ್, ೨೦೦೫, ಕರ್ನಾಟಕ ಕವಿಚರಿತೆ ಸಂಪುಟ-೧,೨,೩, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೦. ನಾಗರತ್ನಮ್ಮ ಹೊ., ೧೯೯೮, ಆಯುರ್ವೇದ ದರ್ಶನ, ಸ್ವಾಮಿ ಪ್ರಿಂಟರ್, ಬೆಂಗಳೂರು

೪೧. ನಾಗರಾಜ ಡಿ.ಆರ್., ೨೦೦೨, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೪೨. ನಾಗಲೋಟಿಮಠ ಎಸ್.ಜಿ., ೧೯೮೭, ಶ್ರೀಸಾಮಾನ್ಯ ಮತ್ತು ವೈದ್ಯ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೪೩. ಪರಮಶಿವಯ್ಯ ಜೀ.ಶಂ. ಮತ್ತು ವಿಲಿಯಂ ಮಾಡ್ತಾ (ಸಂ), ೧೯೮೯, ಜನಪದ ವೈದ್ಯ-ಕರ್ನಾಟಕ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಣೆ, ಬೆಂಗಳೂರು

೪೪. ಪಲ್ತಾಡಿ ರಾಮಕೃಷ್ಣ ಆಚಾರ್, ೧೯೯೦, ಜಾಪದ ಸ್ಪದನ, ಸುಪ್ರಿಯ ಪ್ರಕಾಶನ, ಮಾಡಾವು(ದ.ಕ.)

೪೫. ಪಾಟೀಲ ಎಸ್.ಬಿ., ೧೯೯೩, ವೈದ್ಯತಜ್ಞನ ಹೃದಯ ಬಿಚ್ಚಿದಾಗ, ಬಸವೇಶ್ವರ ಪ್ರಕಾಶನ, ಬಿಜಾಪುರ

೪೬. ಪುಟ್ಟಪ್ಪ ಕೆ.ವಿ., ೧೯೭೩, ಸುಶ್ರತ ಸಂಹಿತಾ(ಉತ್ತರಾರ್ಧ), ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪೭. ಬಸವಣ್ಣ ಎಂ., ೨೦೦೭, ಈಡಿಪಸ್ ಕಾಂಪ್ಲೆಕ್ಸ್, ಅಭಿನವ ಪ್ರಕಾಶನ, ಬೆಂಗಳೂರು

೪೮. ಬಸವರಾಜು ಎಲ್.(ಸಂ), ೧೯೯೦, ಬಸವಣ್ಣನವರ ಷಟ್‌ಸ್ಥಲಯದ ವಚನಗಳು, ಶ್ರೀಶರಣ ಬಸವೇಶ್ವರ ಗ್ರಂಥ ವಿಶ್ವವಿದ್ಯಾನಿಲಯ, ಗುಲಬುರ್ಗಾ

೪೯. ಬಾಲಕೃಷ್ಣ ಆಚಾರ್ಯ ವೈ.ಟಿ., ೧೯೯೦, ಮಾನಸಿಕ ರೋಗಗಳ ಪರಿಚಯ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫೦. ಭಟ್ ಎಂ.ಎಂ., ೧೯೭೭, ವಿಷವೈದ್ಯಶಾಸ್ತ್ರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫೧. ಭಾನುಮತಿ ವೈ.ಸಿ., ೧೯೯೨, ಗ್ರಂಥಸಂಪಾದನೆ ಕೆಲವು ಅಧ್ಯಯನಗಳು, ಕೇಶವ ಪ್ರಕಾಶನ, ಮೈಸೂರು

೫೨. ಮಂಜುಳಾ ಬಿ., ೨೦೦೬, ಕನ್ನಡದಲ್ಲಿ ಸೂಪಶಾಸ್ತ್ರ ಸಾಹಿತ್ಯ, ಭರಣಿ ಪ್ರಕಾಶನ, ಹೊಸಪೇಟೆ

೫೩. ಮಂಜುನಾಥನ್ ಜಿ.ಜಿ. (ಸಂ), ೧೯೮೭, ಅಶ್ವಶಾಸ್ತ್ರ : ಅಭಿನವಚಂದ್ರನ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫೪. ಮಲ್ಲೇಪುರಂ ಜಿ. ವೆಂಕಟೇಶ , ೧೯೯೯, ಶಿವತತ್ವ ರತ್ನಾಕರ : ಕೆಳದಿ ಬಸವರಾಜ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೫. ಮಳಲಿ ವಸಂತಕುಮಾರ್, ೧೯೭೬, ಕರ್ನಾಟಕ ಜನಪದ ವೈದ್ಯ, ಪಂಪ ಪ್ರಕಾಶನ, ಮೈಸೂರು

೫೬. ಮುಗಳೀ ರಂ.ಶ್ರೀ., ೨೦೦೨, ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಮೈಸೂರು

೫೭. ಮೊಟಗಾನಹಳ್ಳಿ ಮಹಾದೇವಶಾಸ್ತ್ರೀ, ೧೯೯೯, ಚಿಕಿತ್ಸಾತತ್ವ ದೀಪಿಕಾ, ಉಷಾಪ್ರೆಸ್, ಮೈಸೂರು

೫೮. ರಂಗಸ್ವಾಮಿ ಎ., ೧೯೯೬, ಚಾವುಂಡರಾಯನ ಲೋಕೋಪಕಾರ : ಒಂದು ಅಧ್ಯಯನ, ದರ್ಶನಕೀರ್ತಿ ಪ್ರಕಾಶನ, ಮೈಸೂರು

೫೯. ರವೀಂದ್ರನಾಥ ಕೆ., ೨೦೦೦, ಕನ್ನಡ ದಾಖಲು ಸಾಹಿತ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೦. ರಹಮತ್ ತರೀಕೆರೆ, ೨೦೦೪, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೬೧. ರಾಮರಾವ್ ಎಸ್. ಜ್ಯೋತಿ, ೧೯೮೯, ದನಗಳ ರೋಗಗಳು ಮತ್ತು ಅವುಗಳ ನಿವಾರಣೋಪಾಯಗಳು, ಸಮಾಜ ಪುಸ್ತಕಾರಲಯ, ಧಾರವಾಡ

೬೨. ರಾಮಚಂದ್ರರಾವ್ ಎಸ್.ಕೆ., ೧೯೮೦, ಕನ್ನಡ ನಾಡಿನಲ್ಲಿ ಆಯುರ್ವೇದ, ಡಿ.ಬಿ.ಎಚ್.ಪ್ರಕಾಶನ, ಬೆಂಗಳೂರು

೬೩. ರಾಮಕೃಷ್ಣ ಜಿ., ೧೯೯೭, ಭಾರತೀಯ ವಿಜ್ಞಾನದ ಹಾದಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೪. ರಾಮಕೃಷ್ಣಯ್ಯ ಪ., ೧೯೮೭, ಆಯುರ್ವೇದ ಸಾರ ಭಾಗ-೧,೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೬೫. ಲಕ್ಕಪ್ಪಗೌಡ ಎಚ್.ಜೆ. (ಸಂ), ಸುವರ್ಣ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೬೬. ಲತಾ ಎಸ್., ೨೦೦೪, ಆರೋಗ್ಯ ರಕ್ಷಣೆಗೆ ಯೌಗಿಕ ವ್ಯಾಯಾಮಗಳು, ಜ್ಞಾನನಿಧಿ ಪ್ರಕಾಶನ, ಬೆಂಗಳೂರು

೬೭. ವಸುಂಧರ ಎಂ. ಮತ್ತು ಡಾ.ವಸುಂಧರಾ ಭೂಪತಿ, ೨೦೦೭, ಮನೆಯಂಗಳದಲ್ಲಿ ಔಷಧಿವನ, ನವಕರ್ನಾಟಕ ಪ್ರಕಾಶನ, ಬೆಂಗಳೂರು
೬೮. ವಿರುಪಾಕ್ಷಶಾಸ್ತ್ರೀ ಟಿ.ಎಚ್.ಎಂ., ೧೯೭೦, ಪ್ರತ್ಯಕ್ಷ ಚಮತ್ಕಾರ ಚಂದ್ರಿಕೆ, ಭೀಷ್ಮಗಣಿ ಔಷಧಾಲಯ, ಹರಪನಹಳ್ಳಿ
೬೯. ವಿದ್ವಾನ್ ಬ.ರಾಜಶೇಖರಯ್ಯ (ಅನು), ೧೯೮೫, ವೈದ್ಯಕೀಯ ಸುಭಾಷಿತ ಸಾಹಿತ್ಯ, ಶ್ರೀಜಗದ್ಗುರು ಪಂಚಾಚಾರ್ಯ ಪ್ರಕಾಶನ, ಮೈಸೂರು
೭೦. ವಿವೇಕ ರೈ ಬಿ.ಎ., ೨೦೦೪, ರಾಘವಾಂಕನ ಸಮಗ್ರಕಾವ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ
೭೧. ವೀರೇಶ ಬಡಿಗೇರ, ೨೦೦೬, ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ
೭೨. ವೀರೇಶ ಬಡಿಗೇರ, ಎಸ್.ಆರ್.ಚನ್ನವೀರಪ್ಪ, ೧೯೯೪ ಹಸ್ತಪ್ರತಿ ಅಧ್ಯಯನ ಹೊಸ ಸಧ್ಯತೆಗಳು ಹಸ್ತಪ್ರತಿ ವ್ಯಾಸಾಂಗ-೪, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ
೭೩. ವೀರೇಶ ಬಡಿಗೇರ, ೨೦೦೯, ಸಂಸ್ಕೃತಿ ಸಂಕಥನ, ಮಯ ಪ್ರಕಾಶನ, ಕಮಲಾಪುರ
೭೪. ವೀರೇಶ ಬಡಿಗೇರ, ೨೦೦೭, ಬಾಚಿಕಾಯಕದ ಬಸವಯ್ಯ : ವೃತ್ತಿ ಹಾಗೂ ತತ್ವ ಮೀಮಾಸೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ
೭೫. ವೀರೇಶ ಬಡಿಗೇರ, ೨೦೦೫, ಹಲಗೆ ಬಳಪ, ಮಯ ಪ್ರಕಾಶನ, ಕಮಲಾಪುರ
೭೬. ವೆಂಕಟರಾಮಪ್ಪ ಕೆ. (ಸಂ), ೧೯೭೭, ಧರ್ಮಾಮೃತ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು
೭೭. ವೆಂಕಟರಾವ್ (ಸಂ), ೧೯೩೩, ಅಭಿದಾನ ರತ್ನಮಾಲಾ ಕರ್ಣಾಟಕ ಟೀಕೆ, ಮದರಾಸು ವಿಶ್ವವಿದ್ಯಾಲಯ, ಮದರಾಸು
೭೮. ಶಂಕರ ಪಿ.ಎಸ್., ೨೦೦೬, ವಚನಗಳಲ್ಲಿ ವೈದ್ಯಕೀಯ ಹೊಳಹೂಗಳು, ಡಾ.ಪಿ.ಎಸ್.ಶಂಕರ ಪ್ರತಿಷ್ಠಾನ, ಗುಲಬುರ್ಗಾ
೭೯. ಶಂಕರ ಪಿ.ಎಸ್. (ಪ್ರಸಂ), ೧೯೯೫, ವೈದ್ಯವಿಶ್ವಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ
೮೦. ಶಿರೂರ ಬಿ.ವ್ಹಿ., ೨೦೦೦, ಸಂಶೋಧನಾ ಸ್ವರೂಪ, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ
೮೧. ಶಿವಣ್ಣ ಎಸ್., ೧೯೮೨, ಕನ್ನಡ ಹಸ್ತಪ್ರತಿಗಳು ವರ್ಣಾನಾತ್ಮಕ ಸೂಚಿ ಸಂಪುಟ-೧, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು
೮೨. ಶಿವರುದ್ರಪ್ಪ ಜಿ.ಎಸ್. (ಪ್ರಸಂ), ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೪, ಭಾಗ-೨, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು
೮೩. ಶಿವಾನಂದ ಗುಬ್ಬಣ್ಣನವರ, ೨೦೦೨, ಶಿಶುನಾಳ ಶರೀಫ್ ಗೀತೆಗಳು, ಅಕ್ಷಯ ಪ್ರಕಾಶನ, ಧಾರವಾಡ
೮೪. ಶ್ರೀಕಂಠಮೂರ್ತಿ ಕೆ.ಆರ್. ೧೯೮೯, ಕರ್ನಾಟಕ ಆಯುರ್ವೇದ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
೮೫. ಶ್ರೀಧರ ಹೆಚ್.ಜಿ., ೨೦೦೨, ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು

೮೬. ಶ್ರೀನಿವಾಸಮೂರ್ತಿ, ರಾಮಚಂದ್ರಭಟ್ಟ ಎನ್. (ಸಂ), ೧೯೫೧, ವೈದ್ಯಸಾರ ಸಂಗ್ರಹ ಭಾಗ.೧, ಸರಕಾರಿ ಪ್ರಾಚ್ಯ ವಿದ್ಯಾಸಂಸ್ಥೆ, ಮದರಾಸ್

೮೭. ಶ್ರೀನಿವಾಸಮೂರ್ತಿ ಜಿ. ರಾಮಚಂದ್ರಭಟ್ಟ ಎನ್. (ಸಂ), ೧೯೫೩, ವೈದ್ಯಸಾರಸಂಗ್ರಹ ಭಾಗ–೨, ಓರಿಯಂಟಲ್ ಮ್ಯಾನುಸ್ಕ್ರಿಪ್ಟ ಲೈಬ್ರಿರಿ, ಮಡ್ರಾಸ್

೮೮. ಶ್ರೀನಿವಾಸಚಾರ್ ಡಿ., ನರಸಿಂಹಾಚಾರ್ಯ ಡಿ.ಎಲ್. (ಸಂ), ೧೯೬೪, ಸಕಲವೈದ್ಯ ಸಂಹಿತಾಸಾರಾರ್ಣವಂ ಸಂಪುಟ–೧, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು

೮೯. ಶೇಷ ಅಯ್ಯಂಗಾರ್ಯರ್ ಹೆಚ್. (ಸಂ), ೧೯೪೦, ಓಷಧಿ ಕೋಶಂ, ಪ್ರಾಚ್ಯ ಗ್ರಂಥ ಮಾಲೆ, ಮದರಾಸು

೯೦. ಶೇಷ ಅಯ್ಯಂಗಾರ್ ಹೆಚ್. (ಸಂ), ೨೦೦೨, ಲೋಕೋಪಕಾರಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯೧. ಸಣ್ಣಯ್ಯ ಬಿ.ಎಸ್., ೧೯೭೧, ಗ್ರಂಥಸಂರಕ್ಷಣೆ, ಗೃಹ ಸರಸ್ವತಿ ಗ್ರಂಥಮಾಲೆ, ಮೈಸೂರು

೯೨. ಸಣ್ಣಯ್ಯ ಬಿ.ಎಸ್.(ಸಂ), ೨೦೦೩, ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ–೨, ಶ್ರುತ ಕೇವಲಿ ಎಜುಕೇಶನ್ ಟ್ರಸ್ಟ್, ಶ್ರವಣಬೆಳಗೊಳ

೯೩. ಸಣ್ಣಯ್ಯ ಬಿ.ಎಸ್.(ಸಂ), ೧೯೯೧, ವೈದ್ಯಕಂದ, ಅಭಿನಂದನ ಪ್ರಕಾಶನ, ಮೈಸೂರು

೯೪. ಸಣ್ಣಯ್ಯ ಬಿ.ಎಸ್., ೧೯೮೮, ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲಂ ಸೂಚಿ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು

೯೫. ಸಣ್ಣಯ್ಯ ಬಿ.ಎಸ್. (ಸಂ), ೨೦೦೪, ಖಗೇಂದ್ರಮಣಿ ದರ್ಪಣಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯೬. ಸಣ್ಣಯ್ಯ ಬಿ.ಎಸ್., ೨೦೦೨, ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೯೭. ಸಣ್ಣಯ್ಯ ಬಿ.ಎಸ್.(ಸಂ), ೧೯೮೪, ಸಕಲವೈದ್ಯಸಂಹಿತಾಸಾರಾರ್ಣವಂ ಸಂಪುಟ–೨, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೯೮. ಸತ್ಯನಾರಾಯಣ ಭಟ್.ಪಿ., ೨೦೦೭, ಕರ್ನಾಟಕ ವಿಷವೈದ್ಯ ಪರಂಪರೆ, ಮುದ್ದುಶ್ರೀ ಗ್ರಂಥಮಾಲೆ, ಕೃಷ್ಣಾಪುರದೊಡ್ಡಿ

೯೯. ಸತ್ಯನಾರಾಯಣ ಭಟ್ಟಪಿ., ಕಾಮೇಶ್ವರರಾವ್, ೧೯೮೬, ಆಯುರ್ವೇದ ಪರಿಚಯ, ಭಾರತೀಯ ವೈದ್ಯಪದ್ಧತಿಗಳ ನಿರ್ದೇಶನಾಲಯ, ಬೆಂಗಳೂರು

೧೦೦. ಸತ್ಯನಾರಾಯಣ ಭಟ್.ಪಿ., ೨೦೦೮, ಮಾಳಸುತ್ತಿನ ಮೂಲಿಕೆ ವೈದ್ಯ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೧೦೧. ಸೀತಾರಾಮಯ್ಯ ಎಂ.ವಿ., ಕುಲಕರ್ಣಿ ಆರ್.ವಿ. (ಸಂ), ವಿರಾಜಮಾರ್ಗ : ಶ್ರೀವಿಜಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೦೨. ಸೀತಾರಾಮಾಚಾರ್ಯ ಯು. (ಸಂ), ೧೯೫೦, ಸೂಪಶಾಸ್ತ್ರ : ಭೀಮಸೇನಕೃತ, ಓರಿಯಂಟಲ್ ಮ್ಯಾನ್ಯೂಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸು

೧೦೩. ಸೀತಾರಾಮಯ್ಯ ಎಂ.ವಿ., ೨೦೦೦, ಶಾಸ್ತ್ರಸಾಹಿತ್ಯ, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೦೪. ಸ್ವಾಮಿ ಬಿ.ಜಿ.ಎಲ್., ೧೯೮೪, ಫಲಶ್ರುತಿ, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು

೧೦೫. ಸುಧಾಕರ (ಸಂ), ೨೦೦೩, ಸಮಗ್ರ ದಾಸಸಾಹಿತ್ಯ (ಕನಕದಾಸ) ಸಂಪುಟ-೫ ಭಾಗ-೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೧೦೬. ಸುರ್ಯನಾಥ ಕಾಮತ್, ದೇವರಕೊಂಡಾರೆಡ್ಡಿ (ಸಂ), ೧೯೯೧, ಇತಿಹಾಸ ದರ್ಶನ ಸಂಪುಟ-೬, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು

೧೦೭. ಹಳ್ಳಿಕೇರಿ ಎಫ್.ಟಿ., ೨೦೦೩, ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦೮. ಹಳ್ಳಿಕೇರಿ ಎಫ್.ಟಿ. (ಸಂ), ೨೦೦೦, ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟ.೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦೯. ಹಿರೇಮಠ ಬಿ.ಆರ್. ೧೯೯೨, ಸಂಕೀರ್ಣ ವಚನ ಸಂಪುಟ-೪, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೧೧೦. ಹಿರೇಮಠ ಕೆ.ಜಿ., ೧೯೮೯, ದ್ರವ್ಯಗುಣ ವಿಜ್ಞಾನ, ಶರತ್ ಪ್ರಕಾಶನ, ಬೆಳಗಾವಿ

೧೧೧. ಹಿರೇಮಠ ಬಿ.ಕೆ., ೧೯೯೨, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯ,ನ, ವೀರಶೈವ ಅಧ್ಯಯನ ವೇದಿಕೆ, ಕಸಬಾ ಜಂಬಗಿ, ಬಿಜಾಪುರ ಜಿಲ್ಲೆ

೧೧೨. ಹೆಗಡೆ ಎಮ್.ಎನ್., ೧೯೭೭, ವರ್ತನ ಚಿಕಿತ್ಸೆ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೧೩. ಹೆಗಡೆ ಎಲ್.ಆರ್. (ಸಂ), ೧೯೮೧, ಜನಪದ ವೈದ್ಯ; ಜ್ಞಾನಸಾಧನ ಗ್ರಂತಮಾಲೆ ಹೆಗಡೆ. ಕುಮುಟಾ

೧೧೪. ಹೆಗಡೆ ಜಿ.ಎನ್., ೧೯೯೯, ದ್ರವಗುಣ ವಿಜ್ಞಾನ, ಅಪ್ರಕಟಿತ ಡಿ.ಲಿಟ್.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ೧.೨. ಹಸ್ತಪ್ರತಿಗಳು

೧೧೫. ಅಕಾರಾದಿ ವೈದ್ಯನಿಘಂಟು, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಹಸ್ತಪ್ರತಿ ಸಂಖ್ಯೆ.ಕೆ೧೩೨

೧೧೬. ಅಶ್ವಪರೀಕ್ಷೆ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಹಸ್ತಪ್ರತಿ ಸಂಖ್ಯೆ.ಕೆ೨೩೭

೧೧೭. ಅಶ್ವವೈದ್ಯ ಸಚಿತ್ರ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಹಸ್ತಪ್ರತಿ ಸಂಖ್ಯೆ.ಕೆಎ೫೭೧

೧೧೮. ಆರೋಗ್ಯಾಮೃತವೆಂಬ ಕರ್ಣಾಟಕ ವೈದ್ಯಸಾರ ಸಂಗ್ರಹ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಹಸ್ತಪ್ರತಿ ಸಂಖ್ಯೆ.ಕೆ೮೫

೧೧೯. ಕರ್ನಾಟಕ ಕಲ್ಯಾಣಕಾರಕ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಹಸ್ತಪ್ರತಿ ಸಂಖ್ಯೆ.ಕೆಎ೪೮೨

೧೨೦. ಬಾಲಗ್ರಹ ಚಿಕಿತ್ಸೆ, ರಾಷ್ಟ್ರೀಯ ಪ್ರಾಕೃತ ಅಧ್ಯಯನ ಸಂಸ್ಥೆ ಶ್ರವಣಬೆಳಗೊಳ, ಹಸ್ತಪ್ರತಿ ಸಂಖ್ಯೆ.೪೭೬

೧೨೧. ಬೇಷಜಕಲ್ಪ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಹಸ್ತಪ್ರತಿ ಸಂಖ್ಯೆ.ಕೆ೯೭೬

೧೨೨. ವೈದ್ಯಚಿಂತಾಮಣಿ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಹಸ್ತಪ್ರತಿ ಸಂಖ್ಯೆ.ಕೆ೪೫೯

೧೨೩. ವೈದ್ಯಸಾಂಗತ್ಯ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಹಸ್ತಪ್ರತಿ ಸಂಖ್ಯೆ.ಕೆ೧೫೦೬

೧೨೪. ವೈದ್ಯಾಮೃತ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಹಸ್ತಪ್ರತಿ ಸಂಖ್ಯೆ.ಕೆ೬೦೫

## ೧.೩. ಲೇಖನಗಳು

೧೨೫. ಗೋಪಾಲ ಜಿ., ೧೯೯೧, ವೈದ್ಯಶಾಸ್ತ್ರ, (ಜಾನಪದ ಮತ್ತು ಪೂರಕ ಕ್ಷೇತ್ರಗಳು, (ಸಂ) ಬಸವರಾಜ ನೆಲ್ಲಿಸರ), ಕನ್ನಡ ಅಧ್ಯಯನ ವಿಭಾಗ ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ

೧೨೬. ದೀಪಿಕಾ ಹೆಜಮಾಡಿಕೋಡಿ, ೧೯೯೫, ಜನಪದರ ಔಷಧೀಯ ಸಸ್ಯಗಳು, (ಸೀಮೆ, (ಸಂ) ಅರುಣಕುಮಾರ್ ಎಸ್.ಆರ್.), ಜಾನಪದ ಸಂಘ ವಿಜಯ ಕಾಲೇಜು ಮುಲ್ಕಿ.(ದ.ಕ.)

೧೨೭. ನಂಜುಂಡಸ್ವಾಮಿ ಬಿ., ೨೦೦೬, ವೈದ್ಯಶಾಸ್ತ್ರ ಹಸ್ತಪ್ರತಿಗಳು, (ಹಸ್ತಪ್ರತಿ ವ್ಯಾಸಾಂಗ-೨, (ಸಂ) ಡಾ.ಎಫ್.ಟಿ.ಹಳ್ಳಿಕೇರಿ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨೮. ಬಿಂದುಸಾರ, ೨೦೦೮, ಧನ್ವಂತರಿ ಮಹಿಮೆ, ಪ್ರಜಾವಾಣಿ ಭಾನುವಾರ ೨೪ನೇ ಫೆಬ್ರುವರಿ

೧೨೯. ರವಿಕಲಾ ಎಸ್.ಬಿ., ೧೯೮೩ ಜನಪದ ವೈದ್ಯ, (ಮಲೆನಾಡು ಜಾನಪದ, (ಪ್ರ.ಸಂ.) ಡಾ.ಎಚ್.ತಿಪ್ಪೇರುದ್ರಸ್ವಾಮಿ), ಕನ್ನಡ ವಿಭಾಗ ಸ್ನಾತಕೋತ್ತರ ಕೇಂದ್ರ ಮೈಸೂರು ವಿಶ್ವವಿದ್ಯಾಲಯ

೧೩೦. ವಸಂತ ಮಾದವ ಕೆ.ಜಿ., ೨೦೦೬, ಶಾಸಗಳಲ್ಲಿ ಪ್ರಾಚೀನ ಭಾರತೀಯ ವೈದ್ಯಕೀಯ, (ಶಾಸನ ಅಧ್ಯಯನ ಸಂಪುಟ-೩, ಸಂಚಿಕೆ-೩, (ಸಂ) ಕೆ.ಜಿ.ಭಟ್‌ಸೂರಿ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩೧. ಶಿವರಾಮು ವಿ.ಎನ್., ೧೯೮೯, ಜನಪದ ವೈದ್ಯ, (ಕರ್ನಾಟಕ ಜನಪದ, (ಪ್ರ.ಸಂ) ಕರೀಂಖಾನ್ ಎಸ್.ಕೆ.), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೩೨. ಸತ್ಯನಾರಾಯಭ ಭಟ್.ಪಿ., ೨೦೦೭, ಕರಾವಳಿಯ ಜಾನಪದ ವೈದ್ಯ, (ಕರಾವಳಿ ಜಾನಪದ, (ಸಂ) ಎ.ವಿ.ನಾವಾಡ), ಅಖಿಲ ಭಾರತ ೭೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ

೧೩೩. ಸತ್ಯನಾರಾಯಭ ಭಟ್.ಪಿ., ೨೦೦೭, ವಿಷವೈದ್ಯ ಮಹಾತ್ಮ ಮೂರನೆಯ ಮಂಗರಸ, (ಹಸ್ತಪ್ರತಿ ಅಧ್ಯಯನ ಸಂಪುಟ-೪, ಸಂಚಿಕೆ-೨, (ಸಂ) ಡಾ.ಎಫ್.ಟಿ.ಹಳ್ಳಿಕೇರಿ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩೪. ಸಂಧ್ಯಾ ಹೆಗಡೆ, ೨೦೦೯, ಸಂಜೀವಿನಿ ಇದೋ ಸಿಕ್ಕೇ ಬಿಟ್ಟಿತು, ಪ್ರಜಾವಾಣಿ ೧೫ನೇ ಸೆಪ್ಟಂಬರ್

೧೩೫. ಹಳ್ಳಿಕೇರಿ ಎಫ್.ಟಿ., ೨೦೦೬, ಕನ್ನಡ ವೈದ್ಯ ಹಸ್ತಪ್ರತಿಗಳ ಪ್ರಕಟಣೆಯ ಅವಶ್ಯಕತೆ (ಹಸ್ತಪ್ರತಿ ಅಧ್ಯಯನ ಸಂಪುಟ-೩, ಸಂಚಿಕೆ-೨, (ಸಂ) ಎಫ್.ಟಿ.ಹಳ್ಳಿಕೇರಿ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩೬. ಹಿರೇಮಠ ಬಿ.ಕೆ., ೨೦೦೪, ಕನ್ನಡ ವೈದ್ಯಕೀಯ ಹಸ್ತಪ್ರತಿಗಳ ಅಧ್ಯಯನ ಒಂದು ತುರ್ತು, (ಹಸ್ತಪ್ರತಿ ಅಧ್ಯಯನ, (ಸಂ) ಡಾ.ವೀರೇಶ ಬಡಿಗೇರ) ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩೭. ಹುರಳಿ ಆಯ್.ಎನ್., ೨೦೦೭, ವೈದ್ಯಶಾಸ್ತ್ರ ಅಧ್ಯಯನ ಸೂಚಿ, (ಹಸ್ತಪ್ರತಿ ಅಧ್ಯಯನ ಸಂಪುಟ–೪, ಸಂಚಿಕೆ–೨, (ಸಂ) ಎಫ್.ಟಿ.ಹಳ್ಳಿಕೇರಿ), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

## ೨. ಸಂಕ್ಷೇಪ ಸೂಚಿ

| | | | |
|---|---|---|---|
| ೧. | ತಾ.ಪ್ರ. | – | ತಾಳ ಪ್ರತಿ |
| ೨. | ಕಾ.ಪ್ರ. | – | ಕಾಗದ ಪ್ರತಿ |
| ೩. | ಕ.ವಿವಿ.ಹಂಪಿ | – | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೪. | ಕ.ವಿವಿ.ಧಾ. | – | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ೫. | ಕೊ.ಲ.ಜೈ.ಹ.ಸೂ. | – | ಕೊಲ್ಲಾಪುರ ಲಕ್ಷ್ಮೀಸೇನ ಜೈನ ಹಸ್ತಪ್ರತಿ ಸೂಚಿ |
| ೬. | ಕ.ಅ.ಕೇ.ಬೆಂ. | – | ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು |
| ೭. | ಕ.ಅ.ಸಂ.ಮೈ. | – | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |
| ೮. | ರಾ.ಪ್ರಾ.ಅ.ಸಂ.ಕೇ.ಶ್ರ.ಬೆ. | – | ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಶ್ರವಣಬೆಳಗೊಳ |
| ೯. | ಶ್ರೀ.ಮಂ.ಸಂ.ಸಂ.ಧ. | – | ಶ್ರೀಮಂಜುನಾಥೇಶ್ವರ ಸಂಸ್ಕೃತ ಸಂಶೋಧನಾ ಕೇಂದ್ರ, ಧರ್ಮಸ್ಥಳ |
| ೧೦. | ಗ.ತೋ.ಮಠ | – | ಗದಗ ತೋಂಟದಾರ್ಯ ಮಠ |
| ೧೧. | ಕ.ಸಾ.ಪ.ಬೆಂ. | – | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ೧೨. | ಕ.ಅ.ಸಂ.ಗು. | – | ಕನ್ನಡ ಅಧ್ಯಯನ ಸಂಸ್ಥೆ, ಗುಲಬುರ್ಗಾ |
| ೧೩. | ಕು.ವ್ಯಾ.ಭೀ | – | ಕುಮಾರವ್ಯಾಸಭಾರತ ಭೀಷ್ಮಪರ್ವ |
| ೧೪. | ಕ.ವಿ.ರಾ. | – | ಕವಿರಾಜಮಾರ್ಗ |
| ೧೫. | ವೃ.ಷ.ವಿ. | – | ವೃಷಭೇಂದ್ರ ವಿಜಯ |
| ೧೬. | ಕ.ವ್ಯಾ.ಕ. | – | ಕುಮಾರವ್ಯಾಸಭಾರತ ಕರ್ಣಪರ್ವ |
| ೧೭. | ಗ. | – | ಗದ್ಯಾಣ |
| ೧೮. | ದು. | – | ದುಡ್ಡು |

❑❑❑